# ಕೊಪ್ಪಳ ಗವಿಮಠ : ಸಾಂಸ್ಕೃತಿಕ ಅಧ್ಯಯನ




ಸಂಶೋಧಕರು

**ಶ್ರೀ ಜಗದೀಶ ನಾ. ಬ್ಯಾಲಹುಣಸಿ** ಎಂ.ಎ; ಎಂ.ಈಡಿ; ಪಿ.ಜಿ.ಡಿ.ಟಿ
ಪತ್ರಾಂಕಿತ ಕನ್ನಡ ಉಪನ್ಯಾಸಕರು
ಸರ್ಕಾರಿ ಪ.ಪೂ. ಕಾಲೇಜು ಮಂಗಳೂರು. ಜಿಲ್ಲಾ : ಕೊಪ್ಪಳ



ಮಾರ್ಗದರ್ಶಕರು

**ಡಾ॥ ಚೆನ್ನಕ್ಕ ಪಾವಟೆ** ಎಂ.ಎ; ಪಿಎಚ್.ಡಿ; ಡಿಪ್.ಇನ್.ಎಪಿ.
ಪ್ರಾಧ್ಯಾಪಕರು
ಡಾ॥ ಅರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕನ್ನಡ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕರ್ನಾಟಕ
ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ
೨೦೦೬

Certified

# ಪ್ರಮಾಣ ಪತ್ರ

ಶ್ರೀ ಜಗದೀಶ ನಾ. ಬ್ಯಾಲಹುಣಸಿ ಅವರು ಬರೆದು ಸಾದರ ಪಡಿಸಿದ "ಕೊಪ್ಪಳ ಗವಿಮಠ : ಸಾಂಸ್ಕೃತಿಕ ಅಧ್ಯಯನ'' ಮಹಾಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದೆ, ಇವರು ನನ್ನ ಮಾರ್ಗದರ್ಶನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಈ ಮಹಾಪ್ರಬಂಧವು ಈ ಮೊದಲು ಇಡಿಯಾಗಿ, ಬಿಡಿಯಾಗಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಹೇಳುತ್ತ ಈ ಪ್ರಮಾಣಪತ್ರ ನೀಡುತ್ತೇನೆ.

ಸ್ಥಳ : ಧಾರವಾಡ
ದಿನಾಂಕ : ೨೨.೮.೨೦೦೬

ಮಾರ್ಗದರ್ಶಕರು

ಚೆನ್ನಕ್ಕ ಪಾವಟೆ

(ಡಾ॥ ಚೆನ್ನಕ್ಕ ಪಾವಟೆ)





# ನಿವೇದನೆ

ಗ್ರಾಮಾಂತರ ಭಾಗದಿಂದ ಬಂದವನಾದ ನನಗೆ ಮೊದಲಿನಿಂದಲೂ ವೀರಶೈವ ಮಠಾಧೀಶರ ಬಗೆಗೆ ವಿಶೇಷವಾದ ಗೌರವಗಳಿದ್ದವು. ಇದಕ್ಕೆ ಕಾರಣವೂ ಇತ್ತು. ನನ್ನ ಪೂಜ್ಯ ತಂದೆಯವರಾದ ಶ್ರೀ ನಾಗಪ್ಪನವರು ಸ್ವತಃ ಪುರಾಣಿಕರಿದ್ದು, ವೀರಶೈವ ಮಠಗಳ! ಸ್ವಾಮೀಜಿಯವರ ಹಾಗೂ ಶಿವಶರಣರ ಬಗ್ಗೆ ಗೌರವಹೊಂದಿದವರು. ಶಿಕ್ಷಕ ವೃತ್ತಿಯೊಂದಿಗೆ ಪುರಾಣ ಪ್ರವಚನ ಹೇಳುವದು ಪ್ರವೃತ್ತಿಯಾಗಿತ್ತು. ಅದರಲ್ಲಿ ನಾನೂ ಕೂಡಾ ಚಿಕ್ಕಂದಿನಿಂದಲೂ ಅವರ ಜೊತೆ ಸಂಸ್ಕಾರ ಹೊಂದಿದ್ದೇನೆ. ಈ ಕಾರಣದಿಂದ ನನ್ನ ಉಪನ್ಯಾಸಕ ವೃತ್ತಿಯನ್ನು ಮಾಡುತ್ತಲೇ ಪಿ.ಎಚ್.ಡಿ. ಪದವಿಮಾಡುವ ಬಲವಾದ ಆಸೆ ಇಂದು ಕೈಗೂಡಿದೆ. ಸಂಶೋಧನೆಗೆ ಯಾವ ವಿಷಯ ಆರಿಸಿಕೊಳ್ಳಬೇಕೆಂದು ವಿಚಾರದಲ್ಲಿದ್ದಾಗ, ನನ್ನ ಅನೇಕ ಸ್ನೇಹಿತರು, ಹಿತೈಷಿಗಳು ಕೊಪ್ಪಳ ಗವಿಮಠದ ಬಗ್ಗೆ ಯಾಕೆ ವಿಚಾರಿಸಬಾರದು? ಎಂದಾಗ ತಕ್ಷಣ ಗವಿಮಠದ ಹಿಂದಿನ ಪೂಜ್ಯರಾದ ಜ. ಶಿವಶಾಂತವೀರ ಮಹಾಸ್ವಾಮಿಗಳ ದರ್ಶನ ಪಡೆದು ಆಶೀರ್ವಾದದೊಂದಿಗೆ ಅಪ್ಪಣೆಗೆ ವಿನಂತಿಸಿಕೊಂಡೆನು. ತಕ್ಷಣ ಅತೀ ಸಂತೋಷದಿಂದ ಒಪ್ಪಿ ಆಶೀರ್ವದಿಸಿದರು. ಅವರು ಈಗ ಇದ್ದಿದ್ದರೆ ಬಹಳ ಸಂತೋಷಪಡುತ್ತಿದ್ದರು, ಎಂಬುದನ್ನು ಸ್ಮರಿಸಿಕೊಳ್ಳುತ್ತೇನೆ.

ಸಾವಿರ ವರ್ಷಗಳ ಇತಿಹಾಸವನ್ನು ಹಾಗೂ ಭವ್ಯ ಪರಂಪರೆ ಹೊಂದಿದ ಗವಿಮಠದ ಬಗ್ಗೆ ಸಂಶೋಧನಾ ಕಾರ್ಯವನ್ನು ಯಾರ ಮಾರ್ಗದರ್ಶನದಲ್ಲಿ ನಡೆಸಬೇಕೆಂದು ವಿಚಾರಿಸುತ್ತ, ಧಾರವಾಡದಲ್ಲಿ ನನ್ನ ಸೋದರಮಾವಂದಿರಾದ, ಮಕ್ಕಳ ಕವಿಗಳಾದ ಶ್ರೀ ನಿಂಗಣ್ಣ ಕುಂಟಿ ಇಟಗಿ, ಅವರೊಂದಿಗೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಆವಾಗ ಅಧ್ಯಕ್ಷರಾಗಿದ್ದ ಡಾ॥ ವೀರಣ್ಣ ರಾಜೂರ ಅವರನ್ನು ವಿನಂತಿಸಿಕೊಂಡಾಗ ನಾನು ಆರಿಸಿಕೊಂಡ ವಿಷಯದ ಬಗ್ಗೆ ಸಂತಸವ್ಯಕ್ತಪಡಿಸಿ ಒಳ್ಳೇ ಮಾರ್ಗದರ್ಶಕರನ್ನು ಹೆಸರಿಸಿ ಡಾ॥ಚೆನ್ನಕ್ಕ ಪಾವಟೆ ಪ್ರಾಧ್ಯಾಪಕರಲ್ಲಿಗೆ ಕಳಿಸಿದರು, ಕಾರಣ ಡಾ॥ರಾಜೂರ ಅವರಿಗೆ ಹಾಗೂ ಶ್ರೀನಿಂಗಣ್ಣ ಕುಂಟಿ ಅವರಿಗೂ ಧನ್ಯವಾದಗಳು.



ಒಳ್ಳೆ ಅನುಭವಿಗಳಾದ ಮಾರ್ಗದರ್ಶಕರು ಸಿಕ್ಕಿದ್ದು ನನ್ನ ಭಾಗ್ಯ ಎಂದುಕೊಳ್ಳುತ್ತೇನೆ, ಸಂಶೋಧನಾ ಕಾರ್ಯದಲ್ಲಿ ಎಲ್ಲಾ ಬಗೆಯ ಸಹಾಯ ಸಹಕಾರ ನೀಡಿದ ಪ್ರಾಧ್ಯಾಪಕರಾದ ಡಾ॥ ಚೆನ್ನಕ್ಕ ಪಾವಟೆ ಅವರಿಗೆ ನಾನು ಚಿರಋಣಿ.

ಡಾ॥ ಆರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರು, ಕಾರ್ಯಾಲಯದ ಎಲ್ಲ ಸಿಬ್ಬಂದಿ ವರ್ಗದವರಿಗೂ ನನ್ನ ಧನ್ಯವಾದಗಳು.

ನನ್ನ ಸಂಶೋಧನಾ ಅಧ್ಯಯನ ಕೈಗೊಳ್ಳಲು ಗವಿಮಠದ ಕೆಲವು ಗ್ರಂಥಗಳನ್ನು ಮಾಹಿತಿಯನ್ನು ಒದಗಿಸಿದ ಹಿಂದಿನ ಪೂಜ್ಯರಾದ ಜ. ಶಿವಶಾಂತವೀರ ಮಹಾ ಸ್ವಾಮಿಗಳಿಗೆ ಹಾಗೂ ಇಂದಿನ ಪೂಜ್ಯರಾದ ಜ. ಗವಿಸಿದ್ಧೇಶ್ವರ ಮಹಾಸ್ವಾಮಿಗಳಿಗೆ ನನ್ನ ಪ್ರಣಾಮಗಳು. ಆಗಾಗ್ಗೆ ಅನೇಕ ವಿಷಯಗಳನ್ನು ಒದಗಿಸಿದ ಹಿರಿಯ ಸ್ನೇಹಿತರಾದ ಕೊಪ್ಪಳದ ಪ್ರಾಚಾರ್ಯರಾದ, ಸಾಹಿತಿಗಳೂ ಆದ ಶ್ರೀ ಎಚ್.ಎಸ್.ಪಾಟೀಲರಿಗೆ, ಪ್ರಾಚಾರ್ಯರು, ಸಾಹಿತಿಗಳಾದ ಶ್ರೀ ಅಲ್ಲಮಪ್ರಭು ಬೆಟ್ಟದೂರು, ಹಿರಿಯ ಸಾಹಿತಿಗಳು, ಸಂಶೋಧಕರೂ ಆದ ಶ್ರೀ ಬಿ. ಸಿ. ಪಾಟೀಲರಿಗೆ ಹಾಗೂ ಗವಿಮಠದ ಟ್ರಸ್ಟಿನಾಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಸರ್ವಸದಸ್ಯರುಗಳಿಗೆ, ವಿಶೇಷ ಸಹಕಾರ ನೀಡಿದ ಕಾರ್ಯದರ್ಶಿಗಳಾದ ಶ್ರೀ ವೀರಪ್ಪ ಮಾಸ್ತರ ಕೊಪ್ಪಳ ಅವರಿಗೂ ಹಾಗೂ ನಿವೃತ್ತ ಪ್ರಿನ್ಸಿಪಾಲ ಶ್ರೀ ಎಸ್.ಮಲ್ಲಿಕಾರ್ಜುನ ಅವರಿಗೂ ಅನಂತ ಧನ್ಯವಾದಗಳು.

ಸಂಶೋಧನಾ ಕಾರ್ಯಕ್ಕೆ ಪ್ರೋತ್ಸಾಹ ನೀಡಿ ಆಶೀರ್ವದಿಸಿದ ಪೂಜ್ಯ ಮಾತಾ ಪಿತೃಗಳಾದ ಶ್ರೀ ನಾಗಪ್ಪ, ಶ್ರೀಮತಿ ನೀಲಮ್ಮನವರಿಗೂ ನನ್ನ ಪ್ರಣಾಮಗಳು. ಈ ಕಾರ್ಯದಲ್ಲಿ ನೆರವಾದ ಪ್ರೌಢಶಾಲಾ ಶಿಕ್ಷಕಿಯಾದ ನನ್ನ ಧರ್ಮಪತ್ನಿ ಶ್ರೀಮತಿ ಸರಸ್ವತಿ, ಪುತ್ರ ಡಾ॥ ಮಂಜುನಾಥ, ಪುತ್ರಿ ಪ್ರೌಢಶಾಲಾ ಶಿಕ್ಷಕಿ ಕು. ಪೂರ್ಣಿಮಾ, ಸಹೋದರಿ ಶಿಕ್ಷಕಿ ಶ್ರೀಮತಿ ಇಂದುಮತಿ ಇವರಿಗೂ ನನ್ನ ಧನ್ಯವಾದಗಳು.



ಕ್ಷೇತ್ರಕಾರ್ಯದಲ್ಲಿ ಮಾಹಿತಿ ಒದಗಿಸಿದ ಶಾಖಾ ಮಠಗಳ ಮತ್ತು ಇತರೇ ಮಠಗಳ ಪೂಜ್ಯ ಸ್ವಾಮಿಗಳವರಿಗೂ, ನನ್ನ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎಂ. ಎಂ. ಮಸೂತಿ ಅವರಿಗೂ ಮತ್ತು ಇನ್ನುಳಿದ ಉಪನ್ಯಾಸಕ ಮಿತ್ರರಿಗೂ ಧನ್ಯವಾದಗಳು.

ಸಕಾಲಕ್ಕೆ ನನ್ನ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಯಲಬುರ್ಗಾದ ವಿದ್ಯಾ ಕಂಪ್ಯೂಟರ್ಸ್ ಮಾಲೀಕರಾದ ಶ್ರೀ ಪತ್ತಾರ ವಿರುಪಾಕ್ಷಪ್ಪ ಹಾಗೂ ಚೊಕ್ಕಟವಾಗಿ ಬೈಂಡಿಂಗ್ ಮಾಡಿಕೊಟ್ಟ ಧಾರವಾಡದ ಶ್ರೀ ಮಹಾಂತೇಶ ಬುಕ್ ಬೈಂಡಿಂಗ್ ವರ್ಕ್ಸ ಅವರಿಗೂ ನನ್ನ ಕೃತಜ್ಞತೆಗಳು.

ಸ್ಥಳ : ಧಾರವಾಡ

ದಿನಾಂಕ : ೨೨-೦೮-೨೦೦೬

(ಜಗದೀಶ, ಬ್ಯಾಲಹುಣಸಿ)



Contents

# ಪರಿವಿಡಿ







# "ಕೊಪ್ಪಳ ಗವಿಮಠ : ಸಾಂಸ್ಕೃತಿಕ ಅಧ್ಯಯನ"

**ಮಹಾಪ್ರಬಂಧದ ಉದ್ದೇಶ, ವ್ಯಾಪ್ತಿ. ಮತ್ತು ಆಕರಗಳು.**

ಬ್ರಹ್ಮಾಂಡವು ತನ್ನ ಒಡಲಲ್ಲಿ ಅನೇಕಾನೇಕ ರಹಸ್ಯಗಳನ್ನು ಅಡಗಿಸಿಕೊಂಡಿದೆ. ಅವುಗಳಲ್ಲಿ ಕೆಲವನ್ನು ಮಾನವ ತನ್ನ ವೈಜ್ಞಾನಿಕ, ವೈಚಾರಿಕ, ಸಂಶೋಧನಾತ್ಮಕ, ಗುಣದಿಂದ ಅರಿತು ವಿಶ್ಲೇಷಿಸಿದ್ದಾನೆ. ಆದ್ದರಿಂದ ಅವು ದೃಗ್ಗೋಚರವೆನಿಸಿವೆ.

ಯುಗ-ಯುಗಗಳೇ ಕಳೆದರೂ ಈ ಜಗತ್ತು ಇನ್ನೂ ತನ್ನ ಗುಟ್ಟುಗಳನ್ನು ಸಂಪೂರ್ಣವಾಗಿ ಛಲಬಿಡದ ಮಾನವನು ಬೌದ್ಧಿಕ ನೆಲೆಗಟ್ಟಿನಲ್ಲಿ ಕಾಣಲಾಗದ ಅನೇಕ ಅಗೋಚರ ಸಂದೇಹಗಳಿಗೆ ತಾತ್ವಿಕವಲಯದಲ್ಲಿ ಸಮಾಧಾನವನ್ನು ಕಾಣುತ್ತಲೇ ಬಂದಿದ್ದಾನೆ. ಅಂತಃಚಕ್ಷುಗಳಿಗೆ ಧ್ಯಾನ, ಯೋಗ ಸಾಧನೆಗಳಿಂದ ಸಾಕ್ಷಾತ್ಕಾರಗೊಂಡು ಇಂತಹ ಸಿದ್ಧಾಂತಗಳೇ ಧರ್ಮ ಸಂಸ್ಥಾಪನೆಗೆ ನಾಂಧಿಯಾಯಿತು.

"ಮಾನವನ ಪ್ರಜ್ಞೆಯಲ್ಲೇ ಅಡಕವಾಗಿರುವ ಅಸಹಾಯಕತೆ ಮತ್ತು ಭಯಗಳ ಕಾರಣದಿಂದ ಹುಟ್ಟಿಕೊಂಡಿದ್ದೇ ಧರ್ಮವು." ಅತೀತ-ಶಕ್ತಿ-ಬುದ್ಧಿಗೆ, ಮಾತಿಗೆ ನಿಲುಕದಾದಾಗ ಭಕ್ತಿಯಿಂದ ಅದನ್ನೊಲಿಸಿಕೊಳ್ಳಬೇಕೆಂಬ ಭಾವನೆ ಪ್ರಭಲವಾಯಿತು. "ಅಪ್ರಾಪ್ಯ ಮನಸಾ ಸಹಯತೋ ವಾಚೋ ನಿರ್ವಂತತೇ".[೨] ಬುದ್ಧಿ, ಮಾತುಗಳಿಗೆ ನಿಲುಕದ್ದು ಭಕ್ತಿಗೆ ಗೋಚರಿಸುತ್ತಿದೆ. ಹೀಗೆ ಧರ್ಮದ ವ್ಯಾಖ್ಯೆ ಅಭಿವ್ಯಕ್ತಗೊಂಡಿದೆ.

ಭಗವದ್ಭಕ್ತಿ ಗಟ್ಟಿಗೊಂಡಂತೆ ಅದನ್ನು ವ್ಯಕ್ತಗೊಳಿಸುವ ಪೂಜೆ, ಉಪಾಸನೆ ತಪಸ್ಸು ಮುಂತಾದ ಕರ್ಮಾಚರಣೆಗಳು ರೂಢಿಗೆ ಬಂದು "ಧರ್ಮ,,ಅಥವಾ "ಸಮಯ,, ವೆನಿಸಿ ಸಂಸ್ಕೃತಿಯ ತಳಹದಿಯಾಯಿತು .ಇನ್ನೊಂದು ಅರ್ಥದಲ್ಲಿ ಆಚಾರ ವಿಚಾರಗಳ ಸಮನ್ವಯ, ಧರ್ಮ ವಿಚಾರವು ತತ್ವವಾದರೆ, ಆಚಾರವು ತತ್ವಪ್ರಾಪ್ತಿಯ ಕ್ರಿಯೆಗಳು.

---

೧) 'ಸಿಗ್ಮಂಡ ಫ್ರಾಯ್ಡ್, ಉದ್ಧೃತ-ಆದಿಚುಂಚನಗಿರಿ – ಒಂದು ಅಧ್ಯಯನ- ಡಾ॥ ಕೆ. ರಾಜೇಶ್ವರಿಗೌಡ ಪುಟ-೦೩ -೨೦೦೧

೨) ಸ್ವಾಮಿ ತ್ಯಾಗೀಶಾನಂದ, ನಾರದ ಭಕ್ತಿ ಸೂತ್ರಾಣಿ. -ಪು-೧೦, ಉದೃತ್ ------- ಸದರ – ------ ೨೦೦೧



ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದೆಯೇ ಹರಪ್ಪ-ಮೊಹೆಂಜೋದಾರೋ ನಾಗರೀಕತೆಯಲ್ಲೇ ಮಾತೃದೇವತೆಯ ಉಪಾಸನೆ ಹಾಗೂ ಆರಾಧನೆಯ ಪದ್ಧತಿಯಿದ್ದಿತೆಂಬುದಕ್ಕೆ ಪುರಾವೆಗಳು ದೊರಕಿವೆ.

ಪ್ರಾಚೀನ ಕಾಲದಿಂದಲೂ ದೇವಾಲಯಗಳು ಹಾಗೂ ಅದಕ್ಕೆ ಹೊಂದಿ ಕೊಂಡೇ ಇದ್ದ ಮಠಗಳು ಸಂಘ ಜೀವನದ ಕೇಂದ್ರಗಳಾಗಿದ್ದವು. "ಜೈನ, ಬೌದ್ಧ ವಿಹಾರ, ಚೈತ್ಯಾಲಗಳನ್ನು ಕಂಡ ಹಿಂದೂ ಧರ್ಮೀಯರಲ್ಲಿ ತಾವೂ ಅಂತಹುದೇ ಸಾರ್ವಜನಿಕ ಉಪಾಸನಾಕೇಂದ್ರಗಳನ್ನು ಕಟ್ಟಿಸಬೇಕೆಂಬ ಸದಿಚ್ಛೆಯೇ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗಿರಬೇಕು. ಬಹುಶಃ ಚಕ್ರವರ್ತಿ ಅಶೋಕನ ನಂತರ ದೇವಾಲಯ ಸ್ಥಾಪನೆ ಸಂಪ್ರದಾಯವಾಗಿ ಬೆಳದು ಬಂದಿತೆಂಬುದು ತಿಳಿಯುತ್ತದೆ."

ಮಠ, ದೇವಾಲಯಗಳು ಮಠಾಧಿಪತಿಯಗಳ ಆಧೀನದಲ್ಲೇ ಇರುತ್ತಿದ್ದವು. ಲಾಕುಳ ಶೈವ ಧರ್ಮದ ಪ್ರಭಾವದಿಂದ ಕ್ರಿ.ಶ. ೭ ನೇ ಶತಮಾನದಿಂದಲೇ ದೇವಾಲಯ, ಮಠಗಳ ಪರಂಪರೆ ಪ್ರಾರಂಭವಾಯಿತೆಂದು ತಜ್ಞರ ಅಭಿಪ್ರಾಯವಿದೆ.[೧]

ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನಕ್ಕೆ ಒದಗಿ ಬಂದ ಪ್ರಚೋದನೆ ಎಂದರೆ ಹೆಚ್ಚು ಕಾಲ ನಿರ್ಲಕ್ಷಿತವಾದ ಒಂದು ಪ್ರದೇಶದ ಸಾಹಿತ್ಯಕ ವಿದ್ಯಮಾನಗಳಿಗೆ, ಸಾಂಸ್ಕೃತಿಕ ವಿಕಾಸಕ್ಕೆ ಅದರ ಪುನರ್‌ರಚನೆಗೆ ಒಬ್ಬ ಧಾರ್ಮಿಕ ಮಹಾಪುರುಷನು ತನ್ನ ಪ್ರಭಾವದೀಪ್ತಿಯಿಂದ ತಾನಿದ್ದು, ಪರಿಸರವನ್ನು ಮೇಲೆತ್ತುವುದರ ಮೂಲಕ ತರುವಾಯದ ಕಾಲದಲ್ಲಿಯೂ ಸಹ ಅವನಿಂದ ಸ್ಫೂರ್ತಿ ಪಡೆದು ಇಡೀ ಕೊಪ್ಪಳ ಪ್ರದೇಶದ ಧರ್ಮ, ಸಾಹಿತ್ಯ,, ಸಂಸ್ಕೃತಿ, ಸಮಾಜವು ಹೇಗೆ ಸುಸಂಘಟಿತವಾಗಬಲ್ಲುದು ಎಂಬುದರ ವಿಸ್ತಾರವಾದ ಅವಲೋಕನ ಈ ಸಂಶೋಧನೆಯನ್ನು ಮುಂದುವರೆಸಲು ಕಾರಣವು.

---

೧) ಡಾ॥ ಎಂ. ಚಿದಾನಂದಮೂರ್ತಿ-ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ-ಪು-೧೮೭ ಹಾಗೂ ೧೮೮-೧೯೭೭

ಇಂದಿನ ಕೊಪ್ಪಳಕ್ಕೆ ಐತಿಹಾಸಿಕ ಹಿನ್ನೆಲೆಯಿದೆ. ತನ್ನದೇ ಆದ ವೈಶಿಷ್ಟಪೂರ್ಣ ಚರಿತ್ರೆ ಇದೆ. ಕ್ರಿ.ಪೂ. ೨ನೇ ಶತಮಾನದಲ್ಲಿ ಈ ಭಾಗದಲ್ಲಿ ಬೌದ್ಧಮತವು ಪ್ರಚಾರದಲ್ಲಿತ್ತೆಂದು ಶಾಸನಗಳ ಉಲ್ಲೇಖವಿದೆ.[೧] ಅಶೋಕನು ಮತ-ಪ್ರಚಾರದ ಉದ್ದೇಶದಿಂದ ರಖ್ಖಿತನೆಂಬವನನ್ನು ಬನವಾಸಿಗೆ ಮತ್ತು ಮಹಾದೇವನೆಂಬವನನ್ನು ಮೈಸೂರು ಪ್ರಾಂತಗಳಿಗೆ ಧರ್ಮ ಬೋಧಕರನ್ನಾಗಿ ಕಳಿಸಿದಂತೆ, ಸಿಲೋನಿನ ಪ್ರಾಚೀನ ಗ್ರಂಥಗಳಾದ ಮಹಾವಂಶ ಮತ್ತು ದೀಪವಂಶಗಳಲ್ಲಿ ಉಲ್ಲೇಖಿತವಾಗಿದೆ. ಕಾರಣ ಬೌದ್ಧ ಧರ್ಮವು ಆತನ ಕಾಲದಲ್ಲಿ ಕರ್ನಾಟಕಕ್ಕೆ ಬಂದಿರುವದು ಸ್ಪಷ್ಟ. ಕ್ರಿ.ಶ. ೭ ನೇ ಶತಮಾನದ ಅವಧಿಯಲ್ಲಿ ಬೌದ್ಧಮತದ ಪ್ರಸಿದ್ಧ ಕೇಂದ್ರವಾಗಿ ಕೊಪ್ಪಳವು ಇತ್ತು.

೯ನೇ ಶತಮಾನದಲ್ಲಿ ರಚಿತವಾದ ಕವಿರಾಜ ಮಾರ್ಗದಲ್ಲಿ ತಿರುಳ್ಗನ್ನಡ ನಾಡು "ವಿದಿತ ಮಹಾ ಕೊಪಣ ನಗರ" ವೆಂದು ಉಲ್ಲೇಖವಿದೆ.[೨] ಬೌದ್ಧಧರ್ಮದ ನಂತರ ಜೈನಧರ್ಮದ ಕೇಂದ್ರವಾಗಿ ಪ್ರಸಿದ್ಧಿಯನ್ನು ಪಡೆಯಿತು.[೩] ಇತ್ತೀಚೆಗೆ ಉರುಳಿ ಬಿದ್ದ ಬುರುಜಿನಿಂದ ಕುರುಹುಗಳಿಂದಲೂ ಇದು ಜೈನ ಕೇಂದ್ರವಾಗಿದ್ದುದು ವಿದಿತವಾಗಿದೆ. ಇದನ್ನೆಲ್ಲ ಸಂಗ್ರಹಿಸಿ ಹಂಪ ನಾಗರಾಜಯ್ಯನವರು "ಕೊಪ್ಪಳದ ಶಾಸನಗಳು" ಎಂಬ ಕೃತಿಯನ್ನು ರಚಿಸಿದರು. ಅಲ್ಲದೇ ಬಿ.ಸಿ.ಪಾಟೀಲರು ಕೊಪ್ಪಳವನ್ನೆಲ್ಲ ಹುಡುಕಾಡಿ ಹತ್ತಾರು ಶಾಸನಗಳನ್ನು ಇಂದು ಬೆಳಕಿಗೆ ತಂದಿರುವರು. ಶಾತವಾಹನರ ಕಾಲದಲ್ಲಿ ಬಳ್ಳಾರಿ ಪ್ರದೇಶವು ಇವರ ರಾಜ್ಯಾಡಳಿತದ ಘಟಕಗಳಲ್ಲಿ ಒಂದಾಗಿತ್ತು, ಹಿರೇಹಡಗಲಿ ಶಿವಸ್ಕಂದವರ್ಮನ ತಾಮ್ರ ಶಾಸನದಲ್ಲಿ ಈ ಘಟಕವನ್ನು "ಶಾತವಾಹನೀಹಾರ" ಎಂದು ವರ್ಣಿಸಿದ್ದಾರೆ. ಇದಕ್ಕೆ ಇನ್ನೊಂದು ಬಲವಾದ ಪುರಾವೆ ಇದೆ. ಕೊಪ್ಪಳದ ಸಮೀಪ ಚಿಕ್ಕಸಿಂದೋಗಿಯಲ್ಲಿ ೧೯೭೬ ರಲ್ಲಿ ಬಹಳಷ್ಟು ನಾಣ್ಯಗಳುಳ್ಳ ಒಂದು ಕೊಡವು ಶೋಧವಾಯಿತು.[೪] ಈ ನಾಣ್ಯಗಳೆಲ್ಲ ಮೌರ್‍ಯರ ಕಾಲದಿಂದ ಚಲಾವಣೆಯಲ್ಲಿದ್ದ ಅಚ್ಚೊತ್ತಿದ (ಪಂಚಮಾರ್ಕದ ) ನಾಣ್ಯಗಳು. ಆ ಕೊಡದ ಮೇಲೆ ಒಡೆಯನ ಹೆಸರನ್ನು "ಚಿಂತಸ, ಎಂದು ಬರೆಯಲಾಗಿದೆ.

---

೧) Karnatak through the Ages ,Page-೧೦೦ ಉಧೃತ ,ಗವಿದೀಪ್ತಿ' - ೧೯೭೬
೨) ಕವಿರಾಜಮಾರ್ಗ - ಪು-೧೦ ಪರಿಚ್ಛೇದ-೧ ಉಧೃತ ,ಗವಿದೀಪ್ತಿ' - ೧೯೭೬
೩) E.C.Val-II (New) No-೧.-p-೧ ---- ರೈಸ್ - ೧೯೧೪
೪) ಕೊಪ್ಪಳ-ಸಾಂಸ್ಕೃತಿಕ ಪರಂಪರೆ-ಬಿ.ಸಿ.ಪಾಟೀಲ. ಪು-೭೯-೧೯೯೮

ಅಂದರೆ "ಚಿಂತ, ಎಂಬ ಹೆಸರಿನ ವ್ಯಕ್ತಿಯದೆಂದು ಸ್ಪಷ್ಟವಾಗಿದೆ. ಈ ಹೆಸರು ಸುಮಾರು ಕ್ರಿ.ಶ. ೨ನೇ ಶತಮಾನದ್ದು. ಬ್ರಾಹ್ಮೀಲಿಪಿಯಲ್ಲಿ ಬರೆಯಲಾಗಿದೆ. ಹೀಗೆ ಅಧಿಕ ಪ್ರಮಾಣದ ನಾಣ್ಯಗಳು, ಅನೇಕ ಮಡಕೆ ಅವಶೇಷಗಳು ದೊರೆತದ್ದರಿಂದ ಶಾತವಾಹನರ ಆಡಳಿತಕ್ಕೆ ಕೊಪ್ಪಳವು ಒಳಪಟ್ಟಿತ್ತೆಂದು ವಿದಿತವಾಗುತ್ತದೆ.

ನಂತರ ಕದಂಬರು ಆಳಿದ ಬಗ್ಗೆ ಉಲ್ಲೇಖಗಳು ಬರುತ್ತವೆ. ಇದನ್ನು ಮಯೂರ ವರ್ಮನ ಚಂದ್ರವಳ್ಳಿಯ ಶಾಸನವು ದೃಢಪಡಿಸಿದೆ.[೧] ಚಾಲುಕ್ಯರೂ ಸಹ ಕೊಪ್ಪಳವನ್ನು ಕೇಂದ್ರಸ್ಥಾನ ಮಾಡಿಕೊಂಡು ಆಡಳಿತವನ್ನು ನಡೆಸುತ್ತಿದ್ದುದು ಹಲಗೇರಿ ಶಾಸನದಿಂದ ತಿಳಿಯುತ್ತದೆ.[೨] ಹೀಗೆ ಮೌರ್ಯರ ಕಾಲದಿಂದ ಹೊಯ್ಸಳರ ಕಾಲದವರೆಗೆ ಒಂದು ಪ್ರಮುಖ ನಗರವಾಗಿತ್ತೆಂದು ತಿಳಿಯುತ್ತದೆ. ಬಹುಮಟ್ಟಿಗೆ ಆಡಳಿತದ ಕೇಂದ್ರವಾಗಿ ಮೆರೆಯಿತು.

ಹೀಗೆ ಅನೇಕ ಆಳರಸರ ಕಾಲದಲ್ಲಿ ಆಯಾ ಧರ್ಮಕ್ಕೆ ಅನುಸಾರ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದುದರಿಂದ ಶಿವದೇವಾಲಯಗಳು, ಮಠ-ಮಾನ್ಯಗಳು ನಿರ್ಮಾಣವಾದವು. ಕೊಪ್ಪಳ ನಾಡಿಗೆ ಅಪೂರ್ವ ಇತಿಹಾಸವಿದ್ದಂತೆ, ಅಷ್ಟೇ ಹಿರಿದಾದ ಇತಿಹಾಸ ಕೊಪ್ಪಳದ ಗವಿಮಠಕ್ಕೂ ಇದೆ. ಇಲ್ಲಿ ಆಗಿ ಹೋದ ಶಿವಯೋಗಪುಂಗವರು, ಮಹಾಸ್ವಾಮಿಗಳು ಈ ನಾಡಿನ ಜನತೆಗೆ ಮಾರ್ಗದರ್ಶನ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ "ಕೊಪ್ಪಳ ಗವಿಮಠ" ಸಾಂಸ್ಕೃತಿಕ ಅಧ್ಯಯನವನ್ನು ನಡೆಸುವದು ಪ್ರಸ್ತುತ ಮಹಾ ಪ್ರಬಂಧದ ಮೂಲ ಉದ್ದೇಶವಾಗಿದೆ.

ಈ ವಿಷಯಕ್ಕೆ ಸಂಭಂದಿಸಿದಂತೆ ಇದೂವರೆಗೂ ಗಂಭೀರವಾದ ಚಿಂತನೆಗಳಾಗಲಿ, ಗಮನಾರ್ಹ ಅಧ್ಯಯನಗಳಾಗಲಿ ನಡೆದಿರುವದಿಲ್ಲಾ, ಆದರೂ ಸಮಗ್ರತೆಯ ದೃಷ್ಠಿಯಿಂದ ಸಂಕ್ಷಿಪ್ತವೆನಿಸಿದರೂ ಮೊಟ್ಟ ಮೊದಲ ಪ್ರಯತ್ನ ನಡೆಸಿದವರು ಶ್ರೀ ಗವಿಸಿದ್ದೇಶ್ವರ ಕೃಪಾ ಪೋಷಿತ ವಿದ್ಯಾರ್ಥಿಬಳಗ, ಕೊಪ್ಪಳ ಅವರು ಪ್ರಕಟಿಸಿದ "ಗವಿದೀಪ್ತಿ".[೩]

---

೧) "ಕೊಪ್ಪಳ ಸಾಂಸ್ಕೃತಿಕ ಪರಂಪರೆ "- ಬಿ.ಸಿ.ಪಾಟೀಲ-ಪು.೮೦.-೧೯೯೮
೨) "ಕೊಪ್ಪಳ ಶಾಸನಗಳು.-ಜಿ.ಯಜ್ದಾನಿ.ಪು-೧೭-೧೯೩೨
೩) "ಗವಿದೀಪ್ತಿ - ಶ್ರೀ.ಗ.ಕೃ.ಪೋ.ವಿದ್ಯಾರ್ಥಿಬಳಗ-ಕೊಪ್ಪಳ-೧೯೭೬

ಇದರಲ್ಲಿ ವಿದ್ಯಾರ್ಥಿಬಳಗದವರು ೧೬ನೇ ಪೀಠಾಧಿಪತಿಗಳಾದ ಪೂಜ್ಯ ಜ.ಮರಿಶಾಂತವೀರ ಮಹಾಸ್ವಾಮಿಗಳನ್ನು ಕುರಿತು ಸ್ಮಾರಕಗ್ರಂಥವನ್ನು ೧೯೭೬ರಲ್ಲಿ ಡಾ॥ಎಸ್.ಎಂ.ವೃಷಬೇಂದ್ರಸ್ವಾಮಿ, ವ್ಹಿ.ಎಸ್.ಮುಧೋಳ, ಡಾ॥ಪಂಚಾಕ್ಷರಿಹಿರೇಮಠ, ಡಾ॥ ದೇವೇಂದ್ರಕುಮಾರ ಹಕಾರಿ, ಪ್ರೊ॥ ಎ.ಎಲ್. ಹಿರೇಮಠ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದರು. ಇದು ಗವಿಮಠದ ಚರಿತ್ರೆ, ಕೊಪ್ಪಳದ ಸಾಂಸ್ಕೃತಿಕ ವಿಷಯ, ಧರ್ಮ, ಮಾಹಾಸ್ವಾಮಿಗಳ ಜೀವನದ ದರ್ಶನ ಒಳಗೊಂಡಿದೆ. ಅಲ್ಲದೇ ಮಠಕ್ಕೆ ಸಂಬಂಧಿಸಿದ ಐತಿಹಾಸಿಕ ಪರಂಪರೆಯನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಕಾರಣ ಅಧ್ಯಯನಯೋಗ್ಯವು ಇನ್ನೂಸಮಗ್ರತೆ ತುಂಬುವ ದೃಷ್ಟಿಯಿಂದ, ಒಂದು ವ್ಯವಸ್ಥಿತ ಅಧ್ಯಯನವನ್ನು ನಡೆಸಬೇಕಾದ ಔಚಿತ್ಯ ಹಾಗೂ ಅವಶ್ಯಕತೆ ಇಲ್ಲಿದೆ .

ಗವಿಮಠವು ಐತಿಹಾಸಿಕವಾಗಿ ಭವ್ಯ ಪರಂಪರೆಯನ್ನು ಹೊಂದಿದೆ. ಇದರ ಸಾಂಸ್ಕೃತಿಕ ಪ್ರವರ್ಧಮಾನಕ್ಕಾಗಿ ರಾಜಮಹಾರಾಜರು, ಅನೇಕ ಧನಿಕ ವರ್ತಕರು ಉದಾರ ದಾನ ಧರ್ಮ ನೀಡಿದ್ದಾರೆ. ಕೆಲವು ಗ್ರಾಮಗಳನ್ನೂ, ಧನ ಕನಕಗಳನ್ನು ಉಂಬಳಿಯಾಗಿಕೊಟ್ಟಿದ್ದಾರೆ. ತತ್ಫಲವಾಗಿ ಈ ಮಠವು ಶೈಕ್ಷಣಿಕವಾಗಿ ಸಲ್ಲಿಸಿರುವ ಸಾಂಸ್ಕೃತಿಕ ಸಂವರ್ಧನೆಗಳನ್ನು ಕುರಿತು ಅನೇಕ ಸ್ತುತ್ಯರ್ಹ ಮಾಹಿತಿಗಳನ್ನು ಸಂಗ್ರಹಿಸಿ, ವಿಮರ್ಶಿಸುವ ಮುಖ್ಯ ಉದ್ದೇಶ ಈ ಅಧ್ಯಯನದಲ್ಲಿದೆ.

ಇದೇ ಸಂದರ್ಭದಲ್ಲಿ ಗವಿಮಠದ ಅಧ್ಯಯನಕ್ಕೆ ಪೂರಕವಾಗಿರುವ ಕೊಪ್ಪಳದ ಇತಿಹಾಸವನ್ನು ಕುರಿತು ಪ್ರಾಚೀನ ಕೊಪ್ಪಳದ ಕಲ್ಪನೆಯನ್ನೂ ಸಹ (ಸಾಂದರ್ಭಿಕವಾಗಿ) ಗುರುತಿಸಿಕೊಡುವ ಪ್ರಯತ್ನವು ಇರುತ್ತದೆ. ಪ್ರಸ್ತುತ ಗ್ರಂಥದಲ್ಲಿ ಮಠದ ಸ್ಥಾಪನೆ, ಬೆಳೆದ ಪರಂಪರೆ, ಮಠದ ಧಾರ್ಮಿಕ, ಸಾಮಾಜಿಕ ಸಾಹಿತ್ಯಕ ಹಾಗೂ ಶೈಕ್ಷಣಿಕ ಪ್ರಗತಿಯ ಮಾಹಿತಿಗಳನ್ನು ದಾಖಲಿಸಲಾಗಿದೆ. ಈ ಆಕರ ಶೋಧನದ ಕೆಲಸ ಮುಂದಿನಸಂಶೋಧನೆಗೆ ನೆರವಾಗಲೆಂಬುದು ನನ್ನ ಉದ್ದೇಶ.

ಗವಿಮಠವು ವೀರಶೈವ ವಿರಕ್ತ – ಮಠವಾಗಿದ್ದು ಇದರ ಪ್ರಸ್ತುತತೆ ಪ್ರಾಚೀನತೆ, ಹಾಗೂ ಗುರುಪರಂಪರೆಯ ಜೊತೆಗೆ, ಸಾಮಾಜಿಕವಾಗಿ, ಸಮಾಜೇತರವಾಗಿ, ಬಹುಮುಖ ಸ್ಪಂದನೆಯನ್ನು ಕುರಿತು ಸ್ಥೂಲವಾದ ಚರ್ಚೆಯನ್ನು ನಡೆಸಲಾಗಿದೆ. ಮತ್ತು ಈಗಾಗಲೇ ಕಾಲಗರ್ಭದಲ್ಲಿ ಹುದುಗಿಹೋಗಿರುವ ಅನೇಕ ಬಗೆಯ ಕುತೂಹಲಕರ ಘಟನಾವಳಿಗಳ ಬಗ್ಗೆ ವಿಶೇಷವಾಗಿ ಬೆಳಕು ಚೆಲ್ಲುವದು ಇಲ್ಲಿನ ಮುಖ್ಯ ಉದ್ದೇಶವು. ಜೊತೆಗೆ ಗವಿಮಠದ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಮಠಗಳ ಅರ್ಥ, ಹಿನ್ನೆಲೆ, ಅವುಗಳ ಭೇದ– ಪ್ರಭೇದಗಳನ್ನು ಕುರಿತು ವ್ಯಾಪಕವಾದ ಚರ್ಚೆಗೆ ಅವಕಾಶ ಮಾಡಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಸುಮಾರು ಎಂಟುನೂರು ವರ್ಷಗಳಿಂದ ಈ ವೀರಶೈವ ವಿರಕ್ತಮಠವು ಜನಪರವಾದ ಸೇವೆ ಸಲ್ಲಿಸುತ್ತಿದೆ.[೧] ಇದು ಧರ್ಮಶಾಲೆಯಾಗಿ, ಅನ್ನದಾನ, ಜ್ಞಾನದಾನಗಳ ಕೇಂದ್ರವಾಗಿ ಅವಿಸ್ಮರಣೀಯವಾದುದು. ಹಾಗೆಯೇ ಈ ಮಠವು ಕಲ್ಯಾಣ ಕೇಂದ್ರವಾಗಿ,ಆರೋಗ್ಯ ಕೇಂದ್ರವಾಗಿ, ಸೇವಾನಿರತವಾಗಿದ್ದ ವಿಚಾರಗಳನ್ನು ಈಗಿನ ಸಮಾಜವು ಸ್ಮರಿಸಬೇಕಾಗಿದೆ. ಇಂತಹ ಅನೇಕ ವಿಚಾರಗಳನ್ನು ಒಳಗೊಂಡು ಗವಿಮಠದಲ್ಲಿಯ ಲಭ್ಯವಾದ ಕೆಲವು ದಾಖಲೆ ಪತ್ರಗಳನ್ನು ಸಮಾಜಕ್ಕೆ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲಿ ಬೃಹತ್ ಗ್ರಂಥವೊಂದು ಲಭ್ಯವಾಗುವಂತೆ ಪ್ರಯತ್ನಿಸಿದೆ. ಮೇಲಾಗಿ ಹಿಂದಿನಿಂದಲೂ ನಿರಂತರವಾಗಿ ನಡೆಯುತ್ತ–ಬಂದಿರುವ ಧಾರ್ಮಿಕ ಚಟುವಟಿಕೆಗಳಾದ ಸಾಮೂಹಿಕ ದೀಕ್ಷೆ, ಹಬ್ಬಗಳು, ಉತ್ಸವಗಳು, ಧಾರ್ಮಿಕ ಪ್ರವಾಸ ಹಾಗೂ ಇತರೆ ಕೆಲಸಗಳನ್ನು ಕುರಿತು ಹೇಳಲೇ ಬೇಕಾದ ಅನೇಕ ಸಂಗತಿಗಳಲ್ಲಿ ಕೆಲವನ್ನಾದರೂ ತಿಳಿಸುವ ಪ್ರಯತ್ನವನ್ನು ಇಲ್ಲಿಮಾಡಿದೆ.

---

೧)"ಗವಿದೀಪ್ತಿ"– ಶ್ರೀ.ಗ.ಶಿ.ಕೃ.ವಿ ಬಳಗದ ಪ್ರಕಟನೆ ಪು–೨೯೪–೧೯೭೬

ಈ ಎಲ್ಲಾ ವಿಚಾರಗಳಿಗೆ ಕಳಸಪ್ರಾಯವಾಗಿ ಈ ಮಠದ ಕೆಲವು ಮಠಾಧೀಶರು ಸ್ವತಃ ಕವಿಗಳು ದಾರ್ಶನಿಕರೂ, ತತ್ವಜ್ಞರು, ಆಗಿದ್ದುದು ಸಾಮಾನ್ಯವಲ್ಲ. ಶ್ರೇಷ್ಠ ಕವಿಗಳಾಗಿದ್ದ ಜ.ಶಿವಶಾಂತವೀರ ಮಹಾಸ್ವಾಮಿಗಳು, ಆಯುರ್ವೇದಶಾಸ್ತ್ರದ ಪಂಡಿತರಾಗಿದ್ದ ಜ.ಮರಿಶಾಂತವೀರಮಹಾಸ್ವಾಮಿಗಳು, ಸಿದ್ಧಿಯನ್ನು ಹೊಂದಿದ್ದ ಜ. ಗವಿಸಿದ್ಧೇಶ್ವರರು ಇತ್ಯಾದಿ. ವಿಷಯಗಳನ್ನು ಪರಿಚಯಿಸುವ ಮಹೋದ್ದೇಶವೂ ಇಲ್ಲಿದೆ. ಗವಿಮಠದ ಸಾರ್ವತ್ರಿಕ ಬದುಕನ್ನು ಕುರಿತು ಒಂದು ವ್ಯವಸ್ಥಿತವೂ, ವ್ಯಾಪಕವೂ ಹಾಗೂ ಅರ್ಥಪೂರ್ಣವೂ ಆದ ಸಮಗ್ರವಾದ ಸಾಂಸ್ಕೃತಿಕ ಅಧ್ಯಯನವನ್ನು ಕೈಕೊಳ್ಳುವದೇ ಮುಖ್ಯ ಆಶಯ. ಈ ಸಂದರ್ಭದಲ್ಲಿ "ಸಾಂಸ್ಕೃತಿಕ" ಎಂಬ ಪದದ ಸ್ಪಷ್ಟೀಕರಣದ ಅಗತ್ಯವಿಲ್ಲಿದೆ. "ಸಾಂಸ್ಕೃತಿಕ" ಎಂಬುದು ಸಂಸ್ಕೃತಿಗೆ ಸಂಬಂಧಪಟ್ಟದ್ದು. ಸಾಂಸ್ಕೃತಿಕ ಮತ್ತು ನಾಗರೀಕತೆಗಳು ಒಂದೇ ನಾಣ್ಯದ ಎರಡು ಮುಖಗಳು. ಇದು ನಾಗರಿಕತೆ ಬುದ್ಧಿ, ವಿಕಾಸಗಳಿಗೆ ಸಂಬಂಧಿಸಿದ್ದು ಮೂಲತಃ "ಸಂಸ್ಕೃತಿ"[೧] ಎಂದರೆ ಬುದ್ಧಿ ವಿಕಾಸ ಮತ್ತು ಮಾನಸಿಕ ಪಕ್ವತೆ ಎಂದೇ ಅರ್ಥ. ಇದು ಯಾವುದೇ ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ ಅಥವಾ ಸಂವೇದನೆಗಳಿಗೆ ಸಂಬಂಧದ ವಿಚಾರವಾಗಿದೆ.[೨]

ಈ ಸಂಸ್ಕೃತಿ ಮತ್ತು ನಾಗರೀಕತೆ ಎಂಬ ಪದಗಳನ್ನು ಆಂಗ್ಲಭಾಷೆಯಲ್ಲಿ culture ಮತ್ತು civilization, ಎಂಬುದಾಗಿ ಕರೆಯಲಾಗುತ್ತದೆ. ಕೆಲವು ವೇಳೆ ಇವೆರಡೂ ಪದಗಳನ್ನು ವಿದ್ವಾಂಸರು ಸಮಾನ ಅರ್ಥಗಳಲ್ಲೆ ಬಳಸಿದ್ದುಂಟು. "Culture, ಎಂಬುದರ ಮೂಲಪದ" "cult, ಅಥವಾ cultus ಎಂದು ಇದ್ದು, ಇದು ಗೌರವಿಸು, ಆರಾಧಿಸು, ಸೇವೆಮಾಡು ಮೊದಲಾದ ಅರ್ಥಗಳನ್ನು ಒಳಗೊಂಡಿದೆ. ಕೆಲವಡೆ ಇದೇ ಪದವು ದೈವಭಕ್ತಿ, ಆರಾಧನೆ ಎಂಬ ಅರ್ಥದಲ್ಲಿ ಬಳಕೆ ಆಗಿದೆ.

---

೧. ಡಾ॥ಎಂ.ಚಿದಾನಂದಮೂರ್ತಿ- ಕನ್ನಡ ಶಾಸನಗಳ ಸಾ.ಅಧ್ಯಯನ.ಪು-೪-೧೯೬೬

೨. ______ ಸದರ ______ ಕನ್ನಡ ಶಾಸನಗಳ ಸಾ.ಅಧ್ಯಯನ.ಪು-೪,೭. -೧೯೬೬
ಮತ್ತು ಡಾ॥ಹೆಚ್ .ತಿಪ್ಪೇರುದ್ರಸ್ವಾಮಿ- ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೩,೫-೧೯೭೫

೩. ______ ಸದರ ______ ಕನ್ನಡ ಶಾಸನಗಳ ಸಾ.ಅಧ್ಯಯನ ಮತ್ತು ಡಾ॥ಹೆಚ್. ತಿಪ್ಪೇರುದ್ರಸ್ವಾಮಿ- ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು-೬.-೧೯೬೬, ೧೯೭೫

ಒಟ್ಟಾರೆ ಸಂಸ್ಕೃತಿ ಎಂಬುದು ಯಾವುದೇ ಒಂದು ಜನಾಂಗದ ಅಥವಾ ಒಂದು ಸಮಾಜದ ಜೀವನ ಮೊದಲಾದ ವ್ಯವಹಾರಗಳಿಗೆ ಸಂಬಂದಿಸಿದೆ. ಇಲ್ಲಿ ಪ್ರತಿಯೊಬ್ಬ ಮನುಷ್ಯನೂ ಕೂಡಾ ಪ್ರಪಂಚವನ್ನು ಸ್ವತಂತ್ರವಾಗಿ ಗ್ರಹಿಸಲಾರ. ಆತನ ಸಮಾಜದೊಳಗಿನ ಆಲೋಚನಾ ವಿಧಾನ ವ್ಯವಹಾರಿಕ ರೀತಿ-ನೀತಿ, ಸಂಪ್ರದಾಯ ಇವು ಆತನ ದೃಷ್ಟಿಯನ್ನು ನಿಯಂತ್ರಿಸುತ್ತವೆ.[೧] ಆದ್ದರಿಂದ ವ್ಯಕ್ತಿಯು ತಾನು ಹುಟ್ಟಿ ಬೆಳದ ಸಂಸ್ಕೃತಿಯ ಶಿಶು ಎಂಬುದನ್ನು ಮರೆಯುವಂತಿಲ್ಲ. ಇದೇ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಕುರಿತು ನಡೆಸಿರುವ ಸಾಂಸ್ಕೃತಿಕ ಅಧ್ಯಯನವನ್ನು ಇಲ್ಲಿ ನೋಡಬಹುದು.

೨ <u>ವ್ಯಾಪ್ತಿ</u> :-ಕೊಪ್ಪಳದ ಇತಿಹಾಸವನ್ನು ಅವಲೋಕಿಸಿದಾಗ ಈ ಪಟ್ಟಣಕ್ಕೆ ಐತಿಹಾಸಿಕ ಮಹತ್ವ ದೊರಕಿದ್ದು ಮೌರ್ಯ ಅರಸು ಅಶೋಕನ ಕಾಲದಲ್ಲಿ ಎಂಬುದು ಸ್ಪಷ್ಟ. ಇದು ಹೊಯ್ಸಳರ ಕಾಲದವರೆಗೆ ಒಂದು ಪ್ರಮುಖ ನಗರವಾಗಿತ್ತು. ಬಹು ಮಟ್ಟಿಗೆ ಆಡಳಿತ ಕೇಂದ್ರ ವಾಗಿಯೂ ಮೆರೆಯಿತು.[೨] ಈ ವೇಳೆಯಲ್ಲಿಯೇ ವಿನೂತನ ಕೋಟೆ-ಕೊತ್ತಲಗಳು, ಗುಡಿ-ಗೋಪುರಗಳು, ಕೆರೆ-ಕಾಲುವೆಗಳು ಹಾಗೂ ಜನಪರವಾದ ಕಲ್ಯಾಣಕಾರ್ಯಗಳು ನಿರ್ಮಾಣವಾದವು ಎಂದು ಅಶೋಕನ ಶಾಸನದಿಂದ ತಿಳಿದು ಬರುತ್ತದೆ. ನಂತರ ಹೈದ್ರಾಬಾದ್ ಅರಸು ನಿಜಾಮನ ಪ್ರಧಾನಿ ಮೀರತುರಾಬ ಅಲಿಖಾನನ ಆಡಳಿತವು ಆರಂಭವಾಯಿತು. ೧೮೫೯ರ ಒಪ್ಪಂದದ ಪ್ರಕಾರ ಕಂಪನಿ ಸರಕಾರವು 'ದೋ-ಅಬ್' ಕೃಷ್ಣಾ-ತುಂಗಭದ್ರಾ ನಡುವಣ ಪ್ರದೇಶವನ್ನು ನಿಜಾಮನು ತುರಾಬ ಅಲಿಖಾನನಿಗೆ ನವಾಬ ಎಂದು ಬಿರುದು ನೀಡಿ ಕೊಪ್ಪಳ ಮತ್ತು ಯಲಬುರ್ಗಾ ತಾಲೂಕಗಳನ್ನು ೧೮೬೧ರಲ್ಲಿ ಜಹಗೀರ ಹಾಕಿಕೊಟ್ಟನು. ತಕ್ಷಣ ಈ ಎರಡೂ ತಾಲೂಕಗಳನ್ನು ಸೇರಿಸಿ ನವಾಬ ಸಾಲಾರ ಜಂಗನು ಕೊಪ್ಪಳ ಜಿಲ್ಲೆಯನ್ನಾಗಿ ಮಾಡಿ, ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು.

---

೧) ಡಾ॥ ಎಂ. ಚಿದಾನಂದ ಮೂರ್ತಿ. ಕ.ಶಾ.ಸಾ. ಅಧ್ಯಯನ - ಪು-೭-೧೯೬೬

೨) ಡಾ॥ ಶ್ರೀನಿವಾಸ ರಿತ್ತಿ, ಇಂಡಿಯನ್ ಅರ್ಕಾಲಜಿ ಎರಿವ್ಯೂ-೭೭-೭೮, ಪು-೪-೧೯೭೮ ಹಾಗೂ ಬಿ.ಸಿ. ಪಾಟೀಲ - ಕೊಪ್ಪಳ ಸಾಂ.ಪ. ಪುಟ ೮೦.-೧೯೯೮

ಹೀಗೆ ಹೈದ್ರಾಬಾದ ನವಾಬರಿಗೂ, ಈ ಗವಿಮಠಕ್ಕೂ ನಿಕಟ ಸಂಪರ್ಕ ಉಂಟಾದ ಬಗ್ಗೆ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಕೊಪ್ಪಳದ ಗವಿಮಠದ ಅಧ್ಯಯನಕ್ಕೆ ವ್ಯಾಪ್ತಿಯನ್ನು ಅಶೋಕನ ಕಾಲದಿಂದ ಇಲ್ಲಿಯ ವರೆಗೆ ಎಂದು ನಿರ್ಧರಿಸಿಕೊಳ್ಳಲಾಗಿದೆ. ಧರ್ಮದ ಬಗ್ಗೆ, ಮಠಗಳ ಬಗ್ಗೆ ಆಸಕ್ತಿ ಕಡಿಮೆ ಆಗುತ್ತಿರುವ ಈ ಆಧುನಿಕ ಕಾಲದಲ್ಲೂ ಕೊಪ್ಪಳದ ಗವಿಮಠವು ತನ್ನ ವಿವಿಧ ಆಯಾಮ್ಮಗಳಿಂದ ಸತ್ಕೀರ್ತಿಗಳಿಸಿದೆ.

ಇನ್ನು ವಿಷಯ ವ್ಯಾಪ್ತಿಗೆ ಸಂಬಂಧಿಸಿದಂತೆ ಈಗಾಗಲೇ ಪ್ರಸ್ತಾಪವಾಗಿರುವ ಹಾಗೆ ಕೊಪ್ಪಳದ ಸಂಕ್ಷಿಪ್ತ ಇತಿಹಾಸವನ್ನು ಹೇಳುವ ಮೂಲಕ ಚಾರಿತ್ರಿಕವಾಗಿ ಇಲ್ಲಿನ ರಾಜಕೀಯ ಪರಿಸ್ಥಿತಿಯು ವೀರಶೈವ ಮಠ ಮಾನ್ಯಗಳಿಗೆ ಹೇಗೆ ಪೋಷಕವಾಗಿದ್ದವು ಎಂಬುದರ ಕಡೆಗೂ ಇಲ್ಲಿ ಒತ್ತು ನೀಡಲಾಗಿದೆ. ನಂತರ ಮಠಗಳ ಹಿನ್ನೆಲೆಯನ್ನು ಪ್ರಸ್ತಾಪಿಸುವಾಗ ವೀರಶೈವ ಮಠಗಳ ಉಗಮ, ವಿಕಾಸಹೊಂದಿದ ಹಾಗೂ ಅವುಗಳ ಪ್ರಗತಿಯನ್ನು ಕುರಿತು ಚರ್ಚೆಗೆ ಅವಕಾಶ ಮಾಡಲಾಗಿದೆ. ಈ ಸಂದರ್ಭದಲ್ಲಿ ಹೊಸದಾದ ಸಂಗತಿಗಳು ಪ್ರಕಟಗೊಂಡು ಪ್ರಸ್ತುತ ವಿಷಯಕ್ಕೆ ಪೂರಕವಾದ ಅನೇಕ ಮಾಹಿತಿಗಳು ಒಂದೆಡೆ ಸಂಗ್ರಹಿಸುವ ಪ್ರಯತ್ನವನ್ನು ಇಲ್ಲಿ ಮಾಡಿದೆ.

ಗವಿಮಠದ ಐತಿಹಾಸಿಕ ಪರಂಪರೆಯನ್ನು ಹೇಳುವಾಗ ವಿಫುಲವಾಗಿ ದೊರಕಿರುವ ವಿಭಿನ್ನ ಮೂಲಗಳು ಆಕರ ಸಾಮಗ್ರಿಗಳು ಈ ಅಧ್ಯಯನಕ್ಕೆ ಉಪಯೋಗವಾಗಿವೆ. ಇದೂವರೆಗೂ ಅಪರಿಚಿತ, ಅಜ್ಞಾತ ಆಗಿದ್ದ ಅನೇಕ ವಿಚಾರಗಳು ಇಲ್ಲಿ ಬೆಳಕಿಗೆ ಬಂದಿವೆ. ವಿರಕ್ತ ವರ್ಗದ ಈ ಮಠದ ಹುಟ್ಟು, ಬೆಳವಣಿಗೆ ಹಾಗೂ ಗುರು ಪರಂಪರೆಯನ್ನು ಹೇಳುವ ಐತಿಹಾಸಿಕ ಮಹತ್ವವನ್ನು ಪರಿಚಯಿಸಿದೆ. ಸ್ವಾತಂತ್ರ್ಯ ಪೂರ್ವದಿಂದಲೂ ಈ ಮಠದಲ್ಲಿ ಉಚಿತ ಅನ್ನದಾಸೋಹ, ವಸತಿಶಿಕ್ಷಣ ಕೇಂದ್ರವಾಗಿ ಸೇವೆಸಲ್ಲಿಸಿದೆ. ಈಮಠದಲ್ಲಿ ನಿರಂತರವಾಗಿ ನಡೆಯುತ್ತಿದ್ದ ವಿದ್ಯಾದಾನ, ಅನ್ನದಾನಕ್ಕೆ ಅನೇಕ ಭಕ್ತರು, ರಾಜಮಹಾರಾಜರು ನೀಡಿರುವ ದಾನ ಧರ್ಮಗಳ ಉದಾಹರಣೆಗಳು ಇಲ್ಲಿ ಇವೆ.

ಹಾಗೆಯೇ ಗವಿಮಠದಲ್ಲಿ ಪರಸ್ಥಳಗಳಿಂದ ಬಂದ ಅತಿಥಿ ಅಭ್ಯಾಗತರುಗಳಿಗೆ ಹಾಗೂ ಬಡ ನಿರ್ಗತಿಕರಿಗೆ ಉಚಿತ ದಾಸೋಹ ಕೇಂದ್ರವಾಗಿ, ಕೊಪ್ಪಳ ನಗರದ ಜನತೆಯ ಸಾಂಸ್ಕೃತಿಕ ಬದುಕಿಗೆ ವಿನೂತನ ಚೈತನ್ಯದ ಕೇಂದ್ರವಾಗಿ, ಜನಸಾಮಾನ್ಯರ ಆರೋಗ್ಯ ಕೇಂದ್ರವಾಗಿ, ವೀರಶೈವ ಮತ ಬಾಂಧವರ ಅಂತ್ಯಸಂಸ್ಕಾರದ ಕೇಂದ್ರವಾಗಿಯೂ ಸಮಾಜಸೇವೆಯಲ್ಲಿ ನಿರತವಾಗಿದ್ದ ಹಲವಾರು ವಿಚಾರಗಳನ್ನು ಇಲ್ಲಿಯ ವಿಷಯ ವ್ಯಾಪ್ತಿಯ ಪರಿಶೀಲನೆಗೆ ಒಳಪಡಿಸಲಾಗಿದೆ.

ಗವಿಮಠವು ನಡೆಸುತ್ತಿರುವ ಧಾರ್ಮಿಕ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಾಮೂಹಿಕ ಲಿಂಗದೀಕ್ಷೆ, ಹಬ್ಬ-ಹರಿದಿನಗಳ ಆಚರಣೆ, ಉತ್ಸವ, ಜಯಂತಿಗಳ ಆಚರಣೆಯಲ್ಲಿ ಹಾಗೂ ವಾರ್ಷಿಕ ಜಾತ್ರೆಯ ವಿಷಯವನ್ನು ವಿವರಿಸಿದೆ. ಜೊತೆಗೆ ಈ ಮಠದ ಹಿಂದಿನ ಸ್ವಾಮಿಗಳು ನಡೆಸಿದ ಮಹತ್ವದ ಕಾರ್ಯಗಳು, ಪ್ರವಾಸಗಳು ಅತ್ಯಂತಕುತೂಹಲದ ಸಂಗತಿಗಳು ಸೇರಿವೆ. ಇನ್ನೂ ಕೆಲವು ಸ್ವಾಮಿಗಳು ಸಾಹಿತ್ಯ-ಕೃಷಿ, ಪ್ರಕಟನೆ, ಇತ್ಯಾದಿ ಸೇವೆಮಾಡಿದ್ದಾರೆ. ಈ ಎಲ್ಲಾ ಮಹತ್ವದ ವಿಚಾರಗಳನ್ನು ವಿವರವಾಗಿ ಪರಿಚಯಿಸುವ ಮೂಲಕ ಮಠದ ಸಾಮಾಜಿಕ ಧಾರ್ಮಿಕ ಚಟುವಟಿಕೆಗಳ ಬಗ್ಗೆ ವ್ಯಾಪಕ ಚರ್ಚೆಗೆ ಅವಕಾಶ ಕಲ್ಪಿಸಿದೆ.

೩.:- **ಆಕರಗಳು** :- ಕೊಪ್ಪಳದ ಗವಿಮಠದ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಾಕಷ್ಟು ಮೂಲಗಳ ಆಕರ ಸಾಮಗ್ರಿಗಳು ಲಭ್ಯವಾಗಿವೆ. ಅಶೋಕನ ಶಾಸನ, ಕನ್ನಡ ಶಾಸನಗಳು[೧]. ಪರ್ಶಿಯನ್ ಶಾಸನಗಳು,[೨] . ಸಾಲೋಟಗಿ ಶಾಸನಗಳು, ಹಲಗೇರಿ ಶಾಸನ,[೩] ಹೈದ್ರಾಬಾದ ನವಾಬರು ಕೊಟ್ಟ ಭೂದಾನ ಸನ್ನದು, ಕೊಪ್ಪಳ ಜಿಲ್ಲಾ ಶಾಸನಗಳು. ಇತ್ತೀಚೆಗೆ ಕೋಟೆ ಕತ್ತರಿಸಿ ಬಿದ್ದಾಗ ದೊರಕಿದ ಶಾಸನಗಳು ಮಹತ್ವದ ಉಲ್ಲೇಖಗಳು ಪಲ್ಲವ ಅರಸು ಮನೆತನದ ಬಹುತೇಕ ಎಲ್ಲ ರಾಜ-ರಾಣಿಯರ ಸಮಾಧಿ ಮರಣದ ಪ್ರಸ್ತುತಗಳು, ಈ ಭಾಗದಲ್ಲಿ ಬಿ.ಸಿ.ಪಾಟೀಲರು ಹುಡುಕಿದ 'ದಾನಸಿಖಾಮಣಿ' ಅತ್ತಿಮಬ್ಬೆಯ ಅಪರೂಪದ ಶಾಸನದೊರಕಿದೆ .

---

೧) ಪಿ.ಬಿ. ದೇಸಾಯಿ- ಶಾಸನ ಪರಿಚಯ -ಪು-೧ ಸಂ.೧-೧೯೫೭ ಕ.ಇ.ಸಂ.ಮಂಡಲ ಧಾರವಾಡ

೨) ಬಿ.ರಾಜಶೇಖರಪ್ಪ-ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು. ಕ.ಸಾ.ಪ. ಪತ್ರಿಕೆ -ಸಂ-೬೯-ಸಂ೨. ೧೯೮೪

೩) ಹಂಪಿ ಕನ್ನಡ ವಿ.ವಿ.-ಕೊಪ್ಪಳ ಜಿಲ್ಲಾ ಶಾಸನಗಳು ೧೯೯೯

ಗವಿಮಠದ ಆಸ್ಥಾನ ವಿದ್ವಾನ್‌ರಾಗಿದ್ದ ಪಂಡಿತ್ ಡಾ॥ ವೈ. ನಾಗೇಶ ಶಾಸ್ತ್ರಿಗಳು ವಿರಚಿತ ಗವಿಸಿದ್ಧೇಶ್ವರ ಪುರಾಣ, ಸುಪ್ರಸಿದ್ಧ ನಾಟಕಕಾರ ಮಾಂಡ್ರೇ ಬರೆದ ಗವಿಸಿದ್ಧೇಶ್ವರ ನಾಟಕ, ಜ. ಶಿವಶಾಂತವೀರ ಮಹಾಸ್ವಾಮಿಗಳು ರಚಿಸಿದ ಸುಪ್ರಭಾತ, ಮತ್ತು ೧೦೮ನಾಮಾವಳಿ, ಅಲ್ಲದೇ ಸ್ಥಳೀಯ ಹಿರಿಯರಿಂದ ಮಠದ ಬಗ್ಗೆ ಐತಿಹಾಸಿಕ, ಧಾರ್ಮಿಕ, ಘಟನಾವಳಿಯ ಉಲ್ಲೇಖಗಳು, ಇತರೇ ಮಠಗಳು ಉಲ್ಲೇಖಿಸಿ ಬರೆದ ಕೃತಿಗಳ ಆಧಾರ ಮತ್ತು ಗವಿಸಿದ್ಧೇಶ್ವರ ವಿದ್ಯಾರ್ಥಿಬಳಗದವರು ಪ್ರಕಾಶನ ಮಾಡಿ ಜ.ಮರಿಶಾಂತವೀರ ಸ್ವಾಮಿಗಳ ಕುರಿತು ರಚಿಸಿದ ಸ್ಮಾರಕ ಗ್ರಂಥದಲ್ಲಿಯ ಅನೇಕ ವಿದ್ವಾಂಸರ ಬೆಲೆಯುಳ್ಳ ಕೃತಿಗಳು ಒಳಗೊಂಡಿದ್ದ "ಗವಿದೀಪ್ತಿ". ಜ. ಶಿವಶಾಂತವೀರ ಮಹಾಸ್ವಾಮಿಗಳ ಷಷ್ಠಬ್ಧಿ ಸಮಾರಂಭದ ಗ್ರಂಥ "ಶಾಂತಪ್ರಭೇ," ಇತ್ಯಾದಿ ಸೇರಿವೆ.

ಮತ್ತು ಕ್ಷೇತ್ರ ಕಾರ್ಯದಲ್ಲಿ ನೆರವಾದ ಜಾನಪದಗಳು ಗವಿಮಠದ ಸ್ವಾಮಿಗಳ ಪರಂಪರೆ, ಮಠದ ವೈಭವ, ರಥಗಳು, ದಾಸೋಹದ ಅಂಶಗಳನ್ನು ಉಲ್ಲೇಖಿಸಲಾಗಿದೆ. ಕೊಪ್ಪಳ ಪ್ರದೇಶವು ಹಿಂದೆ ಹೈದ್ರಾಬಾದ ನೈಜಾಮನ ಆಡಳಿತದಲ್ಲಿತ್ತು. ಆಡಳಿತ ವಿಧಾನ, ಕಾನೂನು ಇತ್ಯಾದಿ ವಿಷಯಗಳನ್ನು ಸಂಗ್ರಹಿಸಲಾಗಿದೆ.

ಇನ್ನು ಮಠದ ಆವರಣ, ಪೂಜಾ ಮಂಟಪ, ಗದ್ದುಗೆ ಹಾಗೂ ಇವುಗಳ ಮೇಲಿರುವ ಶಿಲಾ ಫಲಕ ಇವೇ ಮೊದಲಾದವು ಕೂಡಾ ಈ ಅಧ್ಯಯನಕ್ಕೆ ಪೂರಕ ಸಾಮಗ್ರಿಗಳನ್ನು ಒದಗಿಸುತ್ತವೆ. ಹಾಗೆಯೇ ಕೊಪ್ಪಳ ನಗರ, ಸುತ್ತ ಮುತ್ತಲಿನ ಗ್ರಾಮದ ಜನತೆಯಲ್ಲಿ ಇಂದಿಗೂ ಮನೆಮಾತಾಗಿರುವ ಕೆಲವು ವಿಶೇಷ ನಂಬಿಕೆಗಳು ಆಚರಣೆಗಳು, ಲೀಲೆಗಳು, ಮತ್ತು ಹಿಂದಿನ ತಲೆ ಮಾರಿನ ಜನತೆಯ ಜೊತೆಗೆ ಈ ಮಠದ ಅನೇಕ ಪೀಠಾಧ್ಯಕ್ಷರುಗಳು ಒದಗಿಸಿದ ಮಠ ಮಾನ್ಯಗಳನ್ನು ಕುರಿತಾದ ವಿಶೇಷ ತಿಳುವಳಿಕೆ ಮುಂತಾದ ಕೆಲವು ಮೌಖಿಕ ಮಾಹಿತಿಗಳೂ ಕೂಡಾ ಸದರಿ ಅಧ್ಯಯನಕ್ಕೆ ಪೋಷಕವಾಗಿವೆ. ಮತ್ತು ಮಠದ ಪರವಾಗಿ ಹೊರಬಂದಿರುವ ಎಲ್ಲಾ ಪ್ರಕಟಣೆಗಳನ್ನು, ಹಳೆಯ ವೃತ್ತ ಪತ್ರಿಕೆಗಳನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

## ಅಧ್ಯಾಯ – ೨

### ಕೊಪ್ಪಳದ ಪ್ರಾಚೀನತೆ : ವಿಭಿನ್ನ ಸಾಮ್ರಾಟರ ಆಡಳಿತ.

ಈ ಅಧ್ಯಾಯದಲ್ಲಿ ಕೊಪ್ಪಳದ ಇತಿಹಾಸವನ್ನು ಅಧ್ಯಯನ ಮಾಡಿದ್ದು, ನಗರದ ಹಿನ್ನೆಲೆಯ ಬಗ್ಗೆ ವಿಷಯವನ್ನು ಸಂಗ್ರಹಿಸಲಾಗಿದೆ. ಹೈದ್ರಾಬಾದ ಕರ್ನಾಟಕದಲ್ಲಿ ಕೊಪ್ಪಳವು ಅತ್ಯಂತ ಪ್ರಾಚೀನ ಇತಿಹಾಸವನ್ನು ಹೊಂದಿದೆ.

**ಆದಿ ಇತಿಹಾಸ ಕಾಲ :** – ಕೊಪ್ಪಳದ ಪಶ್ಚಿಮಕ್ಕಿರುವ ಪರ್ವತ ಶ್ರೇಣಿಗಳಲ್ಲಿರುವ ಅಶೋಕ ಚರ್ಕವರ್ತಿ ಶಾಸನವು ಪಾಲ್ಕಿಗುಂಡಿನ ಮುಂದಣ ಸಮೀಪದಲ್ಲಿ ಇದ್ದ ಬಗ್ಗೆ ಶೋಧಿಸಲ್ಪಟ್ಟಿದೆ. ಅಡಿಪಾಯದಲ್ಲಿ ಸುಟ್ಟ ಇಟ್ಟಿಗೆಗಳು ಪತ್ತೆಯಾಗಿವೆ. ಈ ಅಡಿಪಾಯದಿಂದ ಆದಿ ಇತಿಹಾಸದ ಮಾನವನು ನೆಲೆಸಿದ್ದುದನ್ನು ತಿಳಿಸುತ್ತದೆ.[೧]

**ಪ್ರಾಚೀನ ಇತಿಹಾಸ** :– ಈ ಪ್ರದೇಶವು ಅಶೋಕನ ದಕ್ಷಿಣ ಭಾರತದ "ಇಸಿಲ್„ ಪ್ರಾಂತಕ್ಕೆ ಸೇರಿದ್ದುದನ್ನು ಬ್ರಹ್ಮಗಿರಿ, ಮಸ್ಕಿ, ಮತ್ತು ಕೊಪ್ಪಳದಲ್ಲಿಯ ಅಶೋಕಚಕ್ರವರ್ತಿಯ ಕಿರುಬಂಡೆ ಶಾಸನಗಳು ತಿಳಿಸುತ್ತವೆ.[೨] ಈ ಶಾಸನಗಳಲ್ಲಿರುವ ಸ್ಥಾನಗಳನ್ನು ಅಶೋಕ ಚಕ್ರವರ್ತಿಯ ಹಿರಿಯ ಅಧಿಕಾರಿಗಳಾದ "ಮಹಾಪಾತ್ರರು" ನೋಡಿಕೊಳ್ಳುತ್ತಿದ್ದರು. ಆದ್ದರಿಂದ ನಾಗರಿಕ ಆಡಳಿತ ವ್ಯವಸ್ಥೆ ಆಚರಣೆಯಲ್ಲಿ ಬಂದಿದ್ದು, ವಿಚಾರವಿನಿಮಯಕ್ಕೆ ಲಿಪಿಯು ಬಳಕೆಯಲ್ಲಿತ್ತೆಂದು ತಿಳಿದುಬರುತ್ತದೆ. ಅಶೋಕನ ಶಾಸನಗಳ ಲಿಪಿ "ಬ್ರಾಹ್ಮೀ". ಭಾಷೆ ಪ್ರಾಕೃತ. ಈ ರೀತಿ ಒಂದು ಕ್ರಮ ಬದ್ಧ ಆಡಳಿತಕ್ಕೆ ಒಳಪಟ್ಟು ಈ ಪ್ರದೇಶದಲ್ಲಿ ನಗರ ಸಂಸ್ಕೃತಿಯ ಬೆಳವಣಿಗೆಗೆ ಅನುಕೂಲವಾಯಿತು. ಎರಡು ಸಾವಿರ ವರ್ಷಗಳ ಸತತ ಪ್ರಯತ್ನದಿಂದ ಒಂದು ಸಮೃದ್ಧ "ಕುಪಣ" ಹುಟ್ಟಿರಬೇಕೆಂದು ಹೇಳಬಹುದು.[೩]

**ಶಾತವಾಹನರು :**– ಮೌರ್ಯ ಸಾಮ್ರಾಜ್ಯದ ಈ ಪ್ರದೇಶಕ್ಕೆ ಅಲ್ಲಲ್ಲಿ ಜೀವಿಸುತ್ತಿದ್ದ ಶಾತವಾಹನರು ಒಡೆಯರಾದರು. ಈ ಕೊಪ್ಪಳ ಪ್ರದೇಶವು ದಖ್ಖನ್ನಿನ ಶಾತವಾಹನ ಅರಸರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದಿದೆ.[೪]

---

೧. ಡಾ॥ ಅ.ಸುಂದರ್. ೧೯೭೬ "ಇತಿಹಾಸ ಪೂರ್ವಕಾಲ„ –ಗವಿದೀಪ್ತಿ. –ವಿದ್ಯಾರ್ಥಿಬಳಗ ಗವಿಮಠ ಕೊಪ್ಪಳ. – ಮಟ ೧೦೩

೨. ಡಾ॥ ಶ್ರೀನಿವಾಸ ರಿತ್ತಿ ೧೯೭೮ ಅಶೋಕನ ಶಾಸನಗಳು – ಕ.ವಿ.ವಿ. ಧಾರವಾಡ. –ಮಟ –೪

೩. ಡಾ॥ ಅ.ಸುಂದರ್. – ಆದಿ ಇತಿಹಾಸ ಕಾಲ ಸಂಶೋಧನೆ ಸನ್ನತಿ, ಹಂಪಿ ಉದ್ಧೃತ–ಬಿ.ಸಿ.ಪಾಟೀಲ ಕೊಪ್ಪಳ ಸಾಂಸ್ಕೃತಿಕ ಪರಂಪರೆ. ಪು.೨೦–೧೯೯೮

೪. ಡಾ॥ ಜಿ.ಯಜ್ದಾನಿ. ೧೯೩೨–ಕೊಪ್ಪಳದ ೬ ಶಾಸನಗಳು. ".ಎಪಿಗ್ರಾಫಿಯಾ" ಇಂಡೋಮುಸ್ಲೀಮಿಕಾ. ಭಾರತ ಸರಕಾರ: ಸಂಪುಟ ೬ ವಿಭಾಗ ೬ ಶಾಸನ ಸಂಖ್ಯೆ–೯ಎ–ಮಟ ೧೪

ಶಾತವಾಹನರ ಕಾಲದ ಮಡಕೆ ತುಂಡುಗಳು, ಅವರ ಲಾಂಛನ ಆನೆಯ ಆಕರ್ಷಣೀಯ ರೇಖಾಚಿತ್ರವನ್ನು ಕೋಟೆಯಲ್ಲಿನ ಎತ್ತರದ ಗುಂಡಿನಲ್ಲಿ ಕೆತ್ತಿದ, "ಉಸ್ಮಾನ" ತಾಣದಲ್ಲಿದೆ. ಇವರ ಕಾಲದ ಒಂದು ಉತ್ತಮ ನಾಣ್ಯವೊಂದು ದೊರಕಿದೆ. ಅದರ ಸುತ್ತಲೂ ಬ್ರಾಹ್ಮಿಲಿಪಿಯಲ್ಲಿ "ಸಿರಿಸತಕ (ನಿ), ಎಂದಿದೆ.

ಕೊಪ್ಪಳದ ಅತೀ ಸಮೀಪಕ್ಕಿರುವ ಚಿಕ್ಕಸಿಂದೋಗಿಯಲ್ಲಿ ಕೆಲವು ವರ್ಷಗಳ ಹಿಂದೆ ತಾಮ್ರದ ಒಂದು ಹಂಡೆ ಸಿಕ್ಕಿತ್ತು . ಅದರಲ್ಲಿ ಸುಮಾರು ೪೦೦೦ ನಾಣ್ಯಗಳಿದ್ದವೆಂದು ಕರ್ನಾಟಕ ಸರಕಾರದ ಪುರಾತತ್ವ ಇಲಾಖೆ ಪ್ರಕಟಿಸಿತ್ತು.[೧] ಈ ಪಾತ್ರೆಯ ಮೇಲೆ "ಚಿಂತಸ,ಎಂದಿದೆ. "ಚಿಂತ, ಎಂಬುದು ವ್ಯಕ್ತಿಯ ಹೆಸರು . ಪಂಚಮಾರ್ಕದ ಈ ನಾಣ್ಯಗಳು ಮೌರ್ಯರ ಕಾಲದಿಂದ ಶಾತವಾಹನರ ಕಾಲದವರೆಗೂ ಚಲಾವಣೆಯಲ್ಲಿದ್ದುವೆಂದು ತಿಳಿದು ಬರುತ್ತಿದೆ. ಆ ಕಾಲದಲ್ಲಿ ಮೂರ್ತಿಶಿಲ್ಪಗಳಿಗೆ ಬಳಸಿದ ಕಲ್ಲನ್ನು ಡಾ.ಅ.ಸುಂದರ ಅವರು ಸಂಶೋಧಿಸಿದ್ದಾರೆ. ಸನ್ನತಿ ಹಾಗೂ ಹಂಪೆಯಲ್ಲಿ ದೊರೆತ ಶಾತವಾಹನರ ಕಾಲದ ಶಿಲ್ಪಿಗಳಿಂದ ಈ "ಕುಪಣ, ಈ ಕಲಾ ಸಂಪ್ರದಾಯಕ್ಕೆ ಸೇರಿದೆ ಎಂದು ತಿಳಿಸಿದ್ದುದು ತಿಳಿದುಬರುತ್ತದೆ.[೨]

ಅಲ್ಲದೇ ಶಾತವಾಹನರ ಮೂಲ ಸ್ಥಾನ ಈಗಿನ ಬಳ್ಳಾರಿ ಜಿಲ್ಲೆಯ ಉತ್ತರ ಭಾಗದಲ್ಲಿತ್ತೆಂದು ರಾಬರ್ಟ ಸಿವೆಲ್ ಹಾಗೂ ಇತರ ವಿದ್ವಾಂಸರು ಸೂಚಿಸಿದ್ದಾರೆ,ಕೊಪ್ಪಳ ನಾಡು ಬಳ್ಳಾರಿ ಪಕ್ಕದಲ್ಲಿರುವದರಿಂದ ಆ ಕೀರ್ತಿ ಕೊಪ್ಪಳ ಪ್ರದೇಶಕ್ಕೆ ಅನ್ವಯಿಸುತ್ತದೆ. ಸುಮಾರು ೫೫೦ ವರ್ಷ ಆಳಿದ ಶಾತವಾಹನರ ದೊರೆಗಳ ಆಳಿಕೆ ಮುಗಿಯುವತನಕ ಕೊಪ್ಪಳ ಪ್ರದೇಶವು ಅವರ ವಶದಲ್ಲಿತ್ತೆಂದು ಆಧಾರಗಳಿವೆ. ಎರಡು ಅಶ್ವಮೇಧಗಳನ್ನು ಮತ್ತು ರಾಜಸೂಯಗಳನ್ನು ಮಾಡಿದ ಆ ವಂಶದ ಕನ್ನ ಅಥವಾ ಕೃಷ್ಣ (ಕ್ರಿ.ಪೂ.೨೦೭-೧೮೯) ಮಹಾರಾಷ್ಟ್ರದಿಂದ ಪೂರ್ವತೀರದ ಕಳಿಂಗದ ವರೆಗಿನ ಪ್ರದೇಶವನ್ನು ತನ್ನ ಆಧೀನದಲ್ಲಿಟ್ಟುಕೊಂಡಿದ್ದನು. ಆನಂತರ ಅಧಿಕಾರಕ್ಕೆ ಬಂದ ಇಮ್ಮಡಿ ಶಾತಕರ್ಣಿ-(ಕ್ರಿ.ಪೂ.೧೭೨)ಪಾಟಲೀಪುತ್ರದ ಅರಸನನ್ನು ಯುದ್ಧದಲ್ಲಿ ಕೊಂದನೆಂದು ತಿಳಿಯುತ್ತದೆ.[೩]

---

೧) ಇಂಡಿಯನ್ ಆರ್ಕಾಲಾಜಿ ಎ ರಿವ್ಯೂ-೧೯೭೮,ಹಾಗೂ ಸಿ.ಆರ್.ಕೃಷ್ಣಮಾಚಾರುಲು-೧೯೩೫-ಕನ್ನಡ ಇನಸ್ಕ್ರಿಪ್ಷನ್ ಆಫ್ ಕೊಪ್ಪಳ .ಆಂಧ್ರಪ್ರದೇಶ.(ಮಾಜಿ ಹೈದ್ರಾಬಾದ್ ) ಪುರಾತತ್ವ ಇಲಾಖೆ,ಸರಣಿ-೧೨

೨) ಡಾ.ಅ.ಸುಂದರ..ಆದಿ ಇತಿಹಾಸ ಕಾಲ ಸಂಶೋಧನೆಗಳು. ಸನ್ನತಿ. ಹಂಪೆ.-ಗವಿದೀಪ್ತಿ-೧೯೭೬

೩) ಡಾ॥ ಬಿ.ಕೆ.ಗುರುರಾಜರಾವ.-ಕೊಪ್ಪಳ ನಾಡಿನ ಇತಿಹಾಸ-ಗವಿದೀಪ್ತಿ-ಪು-೧೧೮-೧೯೭೬

ಸ್ವಲ್ಪಕಾಲ ಅವನತಮುಖವಾಗಿದ್ದ ಶಾತವಾಹನರ ವಂಶ ಮತ್ತೆ ಕುಂತಳದಲ್ಲಿ ಊರ್ಜಿತವಾಯಿತು. ಕುಂತಳ ಪ್ರದೇಶದಲ್ಲಿ ಈ ಕೊಪ್ಪಳ ಹಾಗೂ ರಾಯಚೂರು ಜಿಲ್ಲೆ ಸೇರಿತ್ತೆಂದು ತಿಳಿದು ಬರುತ್ತದೆ. ಪುಳುಮಾವಿ, ಹಾಲ (ಕ್ರಿ.ಶ.೨೦–೨೪) ಗೌತಮಿ ಪುತ್ರನ ಆಳಿಕೆಗೆ ಸ್ವಲ್ಪಮೊದಲು ಕ್ಷತ್ರಪರು ಶಾತವಾಹನರು ರಾಜ್ಯವನ್ನು ತೊಂದರೆಗೀಡು ಮಾಡಿದ್ದಾರೆ. ಇದು ಸಾಧ್ಯವಾಗದ ಹಾಗೆ ಗೌತಮೀಪುತ್ರನು ಪ್ರಯತ್ನಿಸಿದನು. ಈ ವಂಶದ ಕೊನೆಯ ಮುಖ್ಯ ದೊರೆ ಯಜ್ಞಶ್ರೀ ಶಾತಕರ್ಣಿ (ಕ್ರಿ.ಶ.೧೭೦–೧೯೯) ಅವನು ಶಾತವಾಹನರ ನಂತರ ಕೀರ್ತಿ ಪತಾಕೆಯನ್ನು ಮೊದಲಿನ ಸ್ಥಿತಿಗೆ ತಂದು, ಶಾತವಾಹನರು ನಂತರ ಹಂಚಿಹೋದ ಪ್ರದೇಶದಲ್ಲಿ ಹಲವಾರು ಸಣ್ಣ–ಪುಟ್ಟ ರಾಜ್ಯಗಳು ತಲೆ ಎತ್ತಿದವು. ಬಹುಶಃ ಆ ಸಣ್ಣ ವಂಶಗಳಲ್ಲೊಂದಾದ ವಾಕಾಟಕರು ಕೊಪ್ಪಳ ಪ್ರದೇಶದಲ್ಲಿ ತಮ್ಮ ಅಧಿಕಾರ ಸ್ಥಾಪಿಸಿರಬಹುದು. ಆ ವಂಶದ ರುದ್ರಸೇನ (ಕ್ರಿ.ಶ.೩೪೦–೩೬೫) ಮತ್ತು ಪೃಥ್ವಿಸೇನ (೩೬೫–೩೯೦) ಕುಂತಳವನ್ನು ತಮ್ಮ ವಶಪಡಿಸಿಕೊಂಡಿರಬೇಕು. ಆರನೇ ಶತಮಾನದ ಭಾಗದಲ್ಲಿ ವಾಕಾಟಕರ ಬಲ ಕ್ಷೀಣವಾಯಿತು. ಕೆಲ ಕಾಲ ಈ ಪ್ರದೇಶದ ಮೇಲೆ ಚುಟುವಂಶದ ಅರಸರು ಅಧಿಕಾರ ಪಡೆದಿದ್ದರು.

**ಕದಂಬರು** :– ಶಾತವಾಹನರ ತರುವಾಯ ಕೊಪ್ಪಳ ನಾಡು ಬಹುಮಟ್ಟಿಗೆ ಬನವಾಸಿ ಆದಿ ಕದಂಬರ ರಾಜ್ಯಕ್ಕೆ ಸೇರಿತ್ತು ಎಂದು ಉಲ್ಲೇಖವಿದೆ, ಇದಕ್ಕೆ ಪೂರಕವಾಗಿ ಮಯೂರವರ್ಮನ ಪುನರ್ ವಿಮರ್ಶಿಸಿದ ಚಂದ್ರವಳ್ಳಿಯ ಶಾಸನದಲ್ಲಿ "ಕುಪಣದ ಚಾಮನ ಉಲ್ಲೇಖವಿದೆ.[೧] ಈ ಕದಂಬರ ರಾಜ್ಯದಲ್ಲಿ ಕೊಪ್ಪಳ ಇದ್ದುದು ಈ ಶಾಸನದಲ್ಲಿ ಧ್ವನಿತವಾಗಿದೆ.

---

೧) ಬಿ.ರಾಜಶೇಖರಪ್ಪ – ೧೯೮೪ " ಚಂದ್ರವಳ್ಳೀ ಶಾಸನದ ಮೇಲೆ ಹೊಸಬೆಳಕು" ಕ.ಸಾ.ಪ ಸಂಪುಟ ೬೯ ಸಂಚಿಕೆ–೨

<u>ಬಾದಾಮಿ ಚಾಲುಕ್ಯರು</u> : ಚಾಲುಕ್ಯ ವಂಶದ ಅರಸು ವಿಜಯಾದಿತ್ಯನ ಕಾಲದಲ್ಲಿ (ಕ್ರಿ.ಶ. ೬೯೬, ಕ್ರಿ.ಶ. ೭೩೩) ಈತನ ಅರ್ಥ ಮಂತ್ರಿ ಗುತ್ತಿಯ ಒಡೆಯ ರಾಜ್ಯಪಾಲ ಗರೋಜನು ಈ ಕೊಪ್ಪಳದಲ್ಲಿ ಇದ್ದುದನ್ನು

ಕೊಪ್ಪಳ ತಾಲೂಕಿನ ಹಲಗೇರಿಯ ಶಾಸನವು ತಿಳಿಸುತ್ತದೆ. [೧] ಬಾದಾಮಿಯ ಚಾಲುಕ್ಯರ ಮಾಂಡಲೀಕ ದಂತಿದುರ್ಗನು ಈ ಚಾಲುಕ್ಯ ವಂಶದ ಕೊನೆಯ ಅರಸು. ಕೀರ್ತಿವರ್ಮನನ್ನು ಸೋಲಿಸಿ ಕ್ರಿ.ಶ. ೭೫೭ರಲ್ಲಿ ಮಾನ್ಯ ಖೇಟದಲ್ಲಿ ರಾಷ್ಟ್ರಕೂಟ ರಾಜ್ಯಸ್ಥಾಪಿಸಿದನು. ಆಗ ಕೊಪ್ಪಳವೂ ಸಹ ರಾಷ್ಟ್ರಕೂಟರ ರಾಜ್ಯಕ್ಕೆ ಸೇರಿತು.

<u>ರಾಷ್ಟ್ರಕೂಟರು :-</u> ರಾಷ್ಟ್ರಕೂಟ ಅರಸರಲ್ಲಿ ಕೀರ್ತಿವಂತ ಅರಸು ನೃಪತುಂಗ (ಅಮೋಘವರ್ಷ)ಕಾಲ ೮೧೫-೮೭೮ರಲ್ಲಿ ರಚಿಸಿದ ಕವಿರಾಜ ಮಾರ್ಗ ಕಾವ್ಯದಲ್ಲಿ[೨] ಕವಿಯು ಕೊಪ್ಪಳದ ನಾಡು, ನಾಡವರನ್ನು ಕುರಿತು ಅಭಿಮಾನದಿಂದ ಹೇಳಿದ್ದನ್ನು ಇಲ್ಲಿ ನೆನಪಿಸುವದು ಸೂಕ್ತ.

<u>ಕಲ್ಯಾಣ ಚಾಲುಕ್ಯರು :-</u> ಕೊಪ್ಪಳ ಪುರಾಧೀಶ ಪೆರ್ಮಾಡಿ ಕಲ್ಯಾಣ ಚಾಲುಕ್ಯರ ೬ ನೇಯ ವಿಕ್ರಮಾದಿತ್ಯನ ಸುಪುತ್ರ ಮಲ್ಲಿಕಾರ್ಜುನನ ಸೇವಕನೆಂದು ರಾಮತೀರ್ಥ ಶಾಸನದಿಂದ ತಿಳಿಯುತ್ತದೆ. ಈ ಅರಸನ ಕಾಲದಲ್ಲಿ ಈ ಕೊಪ್ಪಳವು ರಾಜಕೀಯ, ಧಾರ್ಮಿಕ, ಮತ್ತು ಸಾಂಸ್ಕೃತಿಕ ಕೇಂದ್ರವಾಗಿಯೇ ಮುಂದುವರೆಯಿತು. ಇದೇ ವಂಶದ ಒಂದನೇ ಸೋಮೇಶ್ವರನಿಗೂ, ಚೋಳ ಅರಸು ರಾಜಾಧಿರಾಜನಿಗೂ ಕೊಪ್ಪಂ ದಲ್ಲಿ ಭಯಂಕರ ಯುದ್ಧವಾಗಿ ಅದರಲ್ಲಿ ಜೋಳ ಅರಸು ಸೋತು ಮಡಿದನು. ಆ ಕೊಪ್ಪಂ ಈ ಕೊಪ್ಪಳವೆಂದೇ ತಜ್ಞರ ಅಭಿಪ್ರಾಯವಿದೆ. ಕೊಪ್ಪಳ ಇತಿಹಾಸದಲ್ಲಿ ಇದೊಂದು ಮೈಲುಗಲ್ಲು. ಚಾಲುಕ್ಯ ವಂಶದ ಮೂರನೇ ತೈಲಪನನ್ನು ಈ ಚಾಲುಕ್ಯರ ಮಹಾಮಂಡಲೇಶ್ವರ ಮತ್ತು ಇವರ ಬಂಧು ಕಲಚುರಿಯ ೨ ನೇ ಬಿಜ್ಜಳನು, ೩ನೇ ತೈಲಪನು ಕಾಕತಿಯರನ್ನು ದಂಡಿಸಲು ಹೋದ ಸಮಯದಲ್ಲಿ, ಕಲ್ಯಾಣ ಸಿಂಹಾಸನವನ್ನು ಆಕ್ರಮಿಸಿಕೊಂಡನು ಮತ್ತು ಕಲಚುರಿಯರ ರಾಜ್ಯವನ್ನು ಕ್ರಿ.ಶ. ೧೧೬೨ರಲ್ಲಿ ಕಲ್ಯಾಣದಲ್ಲಿ ಸ್ಥಾಪಿಸಿದನು.

---

೧) ಪಿ.ಬಿ. ದೇಸಾಯಿ ೧೯೫೬ ಶಾಸನ ಪರಿಚಯ- ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ. ಶಾಸನ ಸಂಖ್ಯೆ - ೧, ಪು-೧.

೨) ಎಂ. ಚಿದಾನಂದಮೂರ್ತಿ ಹಾಗೂ ಇತರರು ೧೯೭೩ ಕವಿರಾಜ ಮಾರ್ಗ, ಬಿ.ಹೆಚ್. ಪ್ರಕಾಶನ ಬೆಂಗಳೂರು ಸಂಧಿ೨, ಪದ್ಯ- ೨೮, ಪು-೫೯.

ಈ ಬಿಜ್ಜಳ ತನ್ನ ಕುಮಾರ ರಾಯ ಮುರಾರಿ ಸೋವಿದೇವನನ್ನು ಕೊಪ್ಪಳದ ಸನಿಹದಲ್ಲಿರುವ ಮೊದೆಗನೂರು ರಾಜ್ಯದ ಅರಸನೆಂದು ಸಾರಿದನು.[೧] ಈ ವಿಷಯವನ್ನು ಇಟ್ಟಗಿ ಮತ್ತು ಕುಕ್ಕನೂರು ಶಾಸನಗಳು ತಿಳಿಸುತ್ತವೆ. ಕಾಲ ಸುಮಾರು ಕ್ರಿ.ಶ. ೧೧೮೩ ರಲ್ಲಿ ಕಲ್ಯಾಣ ಚಾಲುಕ್ಯ ವಂಶದ ಅರಸು ೪ನೇ ಸೋಮೇಶ್ವರನು, ಬಮ್ಮರಸ ಮುಂತಾದ ದಂಡನಾಯಕರ ಸಹಾಯದಿಂದ ಕಲಚುರಿಯರನ್ನು ಸೆದೆಬಡೆದು ಕಳೆದುಹೋಗಿದ್ದ ಕಲ್ಯಾಣ ಚಾಲುಕ್ಯರ ರಾಜ್ಯವನ್ನು ಮರಳಿ ಪಡೆದನು.

ಈ ಕೊಪ್ಪಳ ಬೆಳ್ವಲನಾಡು, ಯರದೊಡೆ ನಾಡುಗಳೊಂದಿಗೆ ಮತ್ತೆ ಕಲ್ಯಾಣ ಚಾಲುಕ್ಯರ ರಾಜ್ಯಕ್ಕೆ ಸೇರಿತು. ಈ ಚಾಲುಕ್ಯ ವಂಶದ ಸಾಮಂತ ದೇವಗಿರಿಯ ಅರಸು ೫ ನೇ ಭಿಲ್ಲಮನು, ಅರಸು ೪ನೇ ಸೋಮೇಶ್ವರನು ಬನವಾಸಿಯತ್ತ ಸೈನ್ಯದೊಂದಿಗೆ ತೆರಳಿದ ಸಮಯಾವಕಾಶವನ್ನು ಉಪಯೋಗಿಸಿಕೊಂಡರು. ಕಲ್ಯಾಣವನ್ನು ಹಿಡಿದುಕೊಂಡು ಸ್ವತಂತ್ರ ರಾಜನೆಂದು ಸಾರಿದನು. ಕಿಸುಕಾಡು, ಬೆಳ್ವಲ, ಯರದೊಡೆನಾಡು ಈ ದೇವಗಿರಿ ಸೇವುಣರ ಅರಸರ ಆಡಳಿತಕ್ಕೆ ಸೇರಿತ್ತು. ಈ ಮೊದಲೇ ಯರದೊಡೆಯ ನಾಡಿನಲ್ಲಿದ್ದ ಈ ಕೊಪ್ಪಳ ಇವುಗಳೊಂದಿಗೆ ಸೇವುಣರ ರಾಜ್ಯಕ್ಕೆ ಸೇರಿತು.

**ಶಿಲಾಹಾರರು :-** ಚಾಲುಕ್ಯ ಮತ್ತು ಸೇವುಣ ಅರಸರಕಾಲದಲ್ಲಿ ಅನೇಕ ಸಾಮಂತರು ಈ ಕೊಪ್ಪಳದ ಮೇಲೆ ಪ್ರಭುತ್ವ ನಡೆಸಿದರಂತೆ. ಇವರುಗಳಲ್ಲಿ ಶಿಲಾಹಾರರೇ ಪ್ರಮುಖರು. ಅನೇಕ ಶಾಸನಗಳು ಈ ಶಿಲಾಹಾರರು ಕೊಪಣ ಪುರವರಾಧೀಶ್ವರರೆಂದು ಬಿರುದು ಧರಿಸಿ, ಬಿಜಾಪೂರ ಮತ್ತು ಕಲಬುರ್ಗಿ ಈ ಪ್ರದೇಶಗಳಲ್ಲಿ ಪ್ರಭುತ್ವ ಪಡೆದಿದ್ದರೆಂದು ತಿಳಿಸುತ್ತವೆ. ಜೀಮೂತವಾಹನನ ವಂಶದವನಾದ 'ಕಂಚಿಗ'ನು ಕೊಪಣದವನೇ ಆಗಿದ್ದು ಶಿಲಾಹಾರರ ಕುಲಕ್ಕೆ ತಿಲಕದಂತಿದ್ದನು.

ಶಾಸನಗಳು ಶೋಧಿಸುವ ಪೂರ್ವದಲ್ಲಿ ಆನೆಗೊಂದಿ ಮತ್ತು ಕಂಪಿಲ, ಕಂಪಿಲರಾಯನ ರಾಜಧಾನಿಗಳೆಂದು ಹೇಳಿರುವರು. ಆದರೆ ಶಾಸನಗಳ ಶೋಧನೆಯ ನಂತರ ಕಂಪಿಲ ರಾಯನ ಹನೇಯ, ಹೊಸಮಲೆದುರ್ಗ, ಕಮ್ಮಟ, ರಾಜಧಾನಿಗಳೆಂದು ತಿಳಿದುಬಂದಿದೆ. ಹೊಸಮಲೆದುರ್ಗ ಈಗಿನ ಸೊಂಡೂರು ಪ್ರದೇಶದಲ್ಲಿದೆ. ಕುಮ್ಮಟವು ಕೊಪ್ಪಳ ಜಿಲ್ಲೆಯ/ತಾಲೂಕಿನ ೭(ಏಳು) ಗುಡ್ಡದ ಪ್ರದೇಶದಲ್ಲಿದೆ. [೨]

---

೧) ಬಿ.ಸಿ.ಪಾಟೀಲ "ಕೊಪ್ಪಳ ಸಾಂಸ್ಕೃತಿಕ ಪರಂಪರೆ" ಪುಟ-೨೨-೧೯೯೮

೨) ದೇವರಾಜ ಮತ್ತು ಸಿ.ಎಸ್.ಪಾಟೀಲ - ೧೯೯೧ ವಿಜಯನಗರ ಪ್ರೋಗ್ರೆಸ್ ಆಫ್ ರಿಸರ್ಚ - ೮೭-೮೮, ಡೈರೆಕ್ಟರ್ ಆಫ್ ಆರ್ಕಾಲಜಿ ಮತ್ತು ಮೂಜಿಯಂ ಮೈಸೂರ ಪು-೧೭೯.

ಕಂಪಿಲರಾಯನ ಮಗ ಕುಮಾರರಾಮನು ಹಂಪೆಯ ದಕ್ಷಿಣಕ್ಕಿರುವ ಗುಡ್ಡದ ಸಾಲುಗಳಲ್ಲಿ ಗುಮ್ಮಟ ದಂತಿರುವ ಗುಡ್ಡದ ಮೇಲೆ ದುರ್ಗವನ್ನು ಕಟ್ಟಿಸಿದನು ಇದುವೇ "ಕುಮ್ಮಟದುರ್ಗ".

ಕುಮಾರರಾಮನ ಸಾಂಗತ್ಯದಲ್ಲಿ ಕೊಪಣವೊಂದು ಬಲಾಢ್ಯ ದುರ್ಗವಾಗಿತ್ತೆಂದು ಅಲ್ಲಿ ತಿಮ್ಮರಾಜನೆಂಬವನು ಕಂಪಿಲನ ಮಾಂಡಲೀಕನಾಗಿದ್ದನೆಂದು ವಿವರಣೆ ಇದೆ. ಕುಮ್ಮಟ ದುರ್ಗದ ಶೂಲದ ಹಬ್ಬದಲ್ಲಿ ಕೊಪಣದ ತಿಮ್ಮರಾಜನ ಮಗ ಕುಮಾರರಾಮನೊಂದಿಗೆ ಭಾಗವಹಿಸಿದ್ದಂತೆ ವಿಷಯವಿದೆ.[೧]

ಕಂಪಿಲರಾಯನ ಆಶ್ರಯದಲ್ಲಿದ್ದ ಬಹದ್ದೂರಖಾನನನ್ನು ಸೆರೆಹಿಡಿದು ತರಲು ಸೇನಾಪತಿ ನೇಮಿಖಾನನನ್ನು ತುಘಲಕ್‌ನು ಕಳಿಸಿದನು. ನೇಮಿಖಾನನು ಕುಮ್ಮಟದುರ್ಗದ ಯುದ್ದದಲ್ಲಿ ಸೋತು ಹಿಂದಿರುಗಿದನು. ಸೋಲನ್ನು ಸಹಿಸದ ತುಘಲಕ್‌ನು ಮಾತಂಗಿಯ ಅಧಿಪತ್ಯದಲ್ಲಿ ಅಪಾರ ಸೈನ್ಯಕೊಟ್ಟು ಕುಮ್ಮಟದುರ್ಗಕ್ಕೆ ಕಳಿಸಿದನು. ಹೆಣ್ಣು ಮಗಳ ಜೊತೆಗೆ ಕುಮಾರರಾಮ ಯುದ್ಧ ಮಾಡದೇ ನಿಲ್ಲಲು ಸೈನಿಕರು ಅವನನ್ನು ಕೊಂದನು. ಈ ಕುಮ್ಮಟದುರ್ಗ ಕಂಪಿಲರಾಯನ ರಾಜ್ಯ ಜೊತೆಗೆ ಕಂಪಿಲರಾಯನ ಮಂಡಲೇಶ್ವರ ತಿಮ್ಮರಾಜನಾಳುತ್ತಿದ್ದ ಕೊಪ್ಪಳ ರಾಜ್ಯವು ಕ್ರಿ.ಶ. ೧೩೨೭ರಲ್ಲಿ ದಿಲ್ಲಿಗೆ ಸೇರಿತು. ಸ್ವಾಭಿಮಾನಿಗಳಾದ ಕೊಪ್ಪಳದವರು ಚಾಲುಕ್ಯ ವಂಶದ ಸೋಮದೇವನ ನೇತೃತ್ವದಲ್ಲಿ ಸಿಡಿದೆದ್ದು, ತುಘಲಕ್‌ನ ಆಧೀನದಲ್ಲಿದ್ದ ಈ ಕೊಪ್ಪಳವನ್ನು ಕ್ರಿ.ಶ. ೧೩೩೧ರಲ್ಲಿ ಅವನಿಂದ ಕಿತ್ತುಕೊಂಡರು.[೨]

ಕ್ರಿ.ಶ. ೧೩೩೬ರಲ್ಲಿ ತುಂಗಭದ್ರಾ ದಕ್ಷಿಣ ದಡದಲ್ಲಿರುವ ಪುಣ್ಯ ಭೂಮಿ ಹಂಪಿಯಲ್ಲಿ "ವಿಜಯನಗರ" ಉದಯಿಸಿತು. ನಂತರ ಈ ಕೊಪ್ಪಳ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿತೆಂದು ಹಿರೇಸಿಂದೋಗಿ ಶಾಸನದಿಂದ ತಿಳಿದು ಬರುತ್ತದೆ.

ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಪತನದ ನಂತರ ಕೊಪ್ಪಳವು ಬಿಜಾಪುರದರಸರ ಆಡಳಿತಕ್ಕೆ ಸೇರಿತು. ೨ನೇ ಆದಿಲ್‌ಶಾಹನ ನಾಯಕ ಘಾಜಿಖಾನನು ಕೊಪ್ಪಳದಲ್ಲಿ ಮಸೀದಿಯನ್ನು ಕಟ್ಟಿಸಿರುವನೆಂದು ಮೊಸ್ಲೆಮಿಕ್ ಶಾಸನ ತಿಳಿಸುತ್ತಿದೆ.[೩]

೧೬ನೇ ಶತಮಾನದ ಪೂರ್ವಾರ್ಧದಲ್ಲಿ ಮಧ್ಯ ಏಷ್ಯಾದಿಂದ ಬಲಾಢ್ಯರಾದ ಮೊಗಲರು ಭಾರತಕ್ಕೆ ಬಂದು ದಿಲ್ಲಿಯನ್ನು ಮುಹಮ್ಮದಿಯ ಅರಸರಿಂದ ಕಿತ್ತುಕೊಂಡರು. ಈ ಮೊಗಲರ ಅರಸರಲ್ಲಿ ಭಾರತದ ಏಕಚಕ್ರಾಧಿಪತಿಯಾಗುವ ಆಶೆಯುಳ್ಳ ಔರಂಗಜೇಬನು

---

೧. ಡಾ॥ ಚೆನ್ನಕ್ಕ ಪಾವಟೆ – ಸಂಸ್ಕೃತಿ: ಸಂಶೋಧನೆ. 'ಕುಮ್ಮಟದುರ್ಗದ ಕುಮಾರ ರಾಮ'–ಒಂದು ಚಿಂತನ. ಪುಟ–೧೮೫–೧೯೫

೨. ಬಿ.ಕೆ. ಗುರುರಾಜ ೧೯೭೬ "ಕೊಪ್ಪಳನಾಡಿನ ಇತಿಹಾಸ: ಗವಿದೀಪ್ತಿ – ಪು–೧೨೫)

೩. ಜಿ.ಯಜ್ದಾನಿ– ೧೯೩೨"ಕೊಪ್ಪಳದ ಆರು ಶಾಸನಗಳು" ಸಂಪುಟ–೬ ವಿಭಾಗ–೬ ಶಾಸನ ಸಂಖ್ಯೆ – ೯ಎ – ಪು–೧೪.

ದಕ್ಷಿಣ ಭಾರತದ ಹಿಂದೂ ಮತ್ತು ಮಹಮ್ಮದೀಯ ರಾಜ್ಯಗಳ ಮೇಲೆ ಬೃಹತ್ ಪ್ರಮಾಣದಲ್ಲಿ ದಾಳಿಮಾಡಿದರು. ಮಹಾರಾಷ್ಟ್ರ ಕಟ್ಟಿದ 'ಶಿವಾಜಿ ಎಲ್ಲರ ಅಪೇಕ್ಷೆಯಂತೆ ಛತ್ರಪತಿ ಬಿರುದು ಧರಿಸಿ, ಶಿವನೇರಿಯಲ್ಲಿ ಪಟ್ಟವೇರಿದನು. ಶಿವಾಜಿಯು ತನ್ನ ದಕ್ಷಿಣ ಭಾರತದ ದಿಗ್ವಿಜಯದಲ್ಲಿ ಕೊಪ್ಪಳವನ್ನು ಗೆದ್ದು, ತನ್ನ ತಮ್ಮ ವೆಂಕೋಜಿಗೆ ಕೊಟ್ಟನು.

ಕಾಲಾನಂತರ ಬಿಜಾಪುರದ ಅರಸು ಕೊಪ್ಪಳವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡನು. ಮೊಗಲರು ಬಿಜಾಪುರದ ಅರಸನಿಂದ ಗೆದ್ದುಕೊಂಡ ಈ ಕೊಪ್ಪಳವನ್ನು "ಅಬ್ದುಲ್" ರಹೀಮ ಊರ್ಫ ೧ನೇ ಬಹಲೋಲನಿಗೆ ಜಹಗೀರನ್ನಾಗಿ ಕೊಟ್ಟರು. ಈ ಬಹಲೋಲಿಯು ತನ್ನ ಸಂಬಂಧಿ ಹುಸೇನಮಿಯಾನಿಗೆ, ಇದರ ಆಡಳಿತವನ್ನು ವಹಿಸಿಕೊಟ್ಟನು. ಮುಂದೆ ಛತ್ರಪತಿ ಶಿವಾಜಿಯ ಆದೇಶದಂತೆ ಈತನು ದಳಪತಿ ಹಂಬೀರರಾವ್ ಕೊಪ್ಪಳಕ್ಕೆ ಮುತ್ತಿಗೆ ಹಾಕಿದನು. ೧೬೭೭ರಲ್ಲಿ ಯರಂಬರಿಗೆ (ಈಗಿನ ಯಲಬುರ್ಗಾ) ಹತ್ತಿರ ಯುದ್ಧ ನಡೆಯಿತು. ಅದರಲ್ಲಿ ಹುಸೇನಮಿಯಾನು ಸೋಲನ್ನು ಕಂಡನು. ಕೊಪ್ಪಳ ಕೋಟೆಯು ಹಂಬೀರರಾವನ ವಶವಾಯಿತು.[೧] ಮೋಡಿ ಭಾಷೆಯಲ್ಲಿದ್ದ ಕಡತಗಳು ಮತ್ತು ಗಿರಿದುರ್ಗದಲ್ಲಿರುವ ಶಿವಾಜಿಯ ಆರಾಧ್ಯ ದೇವತೆ "ಭವಾನಿ" ಗುಡಿ, ಈ ಕೊಪ್ಪಳವು ಶಿವಾಜಿಯ ರಾಜ್ಯಕ್ಕೆ ಸೇರಿತ್ತೆಂದು ತಿಳಿಸುತ್ತದೆ. ಆದರೆ ಬಿಜಾಪುರದರಸು ಈ ಕೊಪ್ಪಳವನ್ನು ಮತ್ತೆ ತನ್ನ ಸ್ವಾಧೀನಕ್ಕೆ ತೆಗೆದುಕೊಂಡನು.

ಕ್ರಿ.ಶ. ೧೬೮೬ರಲ್ಲಿ ಮೊಗಲರ ಸೈನ್ಯಕ್ಕೆ ಬಿಜಾಪುರವು ತುತ್ತಾಯಿತು. ಹೈದ್ರಾಬಾದ ಸುಬಾಕ್ಕೆ ಬಿಜಾಪುರ ಹಾಗೂ ಕೊಪ್ಪಳವು ಸೇರಿತು. ಮೊಗಲರ ಅರಸರುಗಳಲ್ಲಿ ಅರಾಜಕತೆ ಉಂಟಾದಾಗ ಹೈದ್ರಾಬಾದ ಸುಬೇದಾರ ಮೀರ ಕುಮರುದ್ದೀನನು "ನಿಜಾಮ ಉಲ್ ಮುಲ್ಕ" ಅಂತಾ ಹೆಸರಿನಿಂದ ಕ್ರಿ.ಶ. ೧೭೨೪ರಲ್ಲಿ ಹೈದರಾಬಾದ ಸುಬೇಯ ಸ್ವತಂತ್ರ ರಾಜನೆಂದು ಸಾರಿದನು. ಈ ವಂಶಕ್ಕೆ ಅಂದಿನಿಂದ "ಆಸಫೀಯಾ" ಎಂದು ಹೆಸರು. ಕೊಪ್ಪಳವು ಇದರ ಆಡಳಿತಕ್ಕೆ ಸೇರಿತು.

ಮುಂದೆ ಹೈದರ ಅಲಿಯು ಮೈಸೂರ ರಾಜ್ಯದ ಸರ್ವಾಧಿಕಾರಿಯೆಂದು ಘೋಷಿಸಿದ ಮೇಲೆ ತಾನು ಉತ್ತರ ಕರ್ನಾಟಕದತ್ತ ಸಾಗಿ ಯಾವ ವಿರೋಧವಿಲ್ಲದೇ ಕ್ರಿ.ಶ. ೧೭೭೮ರಲ್ಲಿ ಧಾರವಾಡವನ್ನು ಹಿಡಿದುಕೊಂಡನು. ವಿಜಯ ಸಾಧಿಸಿದ ಹೈದರ ಅಲಿ ಕೊಪ್ಪಳದ ಕಡೆ ಬಂದು ಅರಸು ನಿಜಾಮನ ವಶದಲ್ಲಿದ್ದ ಕೊಪ್ಪಳ ಮತ್ತು ಬಹದ್ದೂರ ಬಂಡಿ ಈ ಗಿರಿ ಕೋಟೆಗಳನ್ನು ಎಪ್ರೀಲ್ ೧೭೭೮ರಲ್ಲಿ ಹಿಡಿದುಕೊಂಡನು.[೨]

---

೧) ಬಿ.ಕೆ. ಗುರುರಾಜ ೧೯೭೬ – ಕೊಪ್ಪಳನಾಡಿನ ಇತಿಹಾಸ. ಗವಿದೀಪ್ತಿ – ಪು ೧೨೬

೨) ಸಿ. ಹಯವದನರಾವ್ ೧೯೪೬– ಹಿಸ್ಟರಿ ಆಫ್ ಮೈಸೂರು ಸಂಪುಟ ೩ ಪು–೨೫೬
( ಸರಕಾರಿ ಮುದ್ರಣಾಲಯ, ಬೆಂಗಳೂರು)

**ಕೊಪ್ಪಳ ಹೆಸರಿನ ಹಿನ್ನೆಲೆ** :–ಜೈನ ಧರ್ಮದ ಮಹಾತೀರ್ಥ, ಶೈವ ಧರ್ಮದ ಪ್ರಶಿದ್ಧನೆಲೆಯಾಗಿ ಸಾಹಿತ್ತಿಕ, ಸಾಂಸ್ಕೃತಿಕ ಮೇಲ್ಮೆ ಮೆರೆದ ಈ ಕೊಪ್ಪಳ, ಕ್ರಿಪೂ. ೩ ನೇ ಶತಮಾನದಷ್ಟು ಪ್ರಾಚೀನ ಇತಿಹಾಸವನ್ನು ಹೊಂದಿದೆ.

ಪುರಾತನ ಕಾಲದಿಂದ ಅನೇಕ ಸಂಗತಿಯನ್ನು ತನ್ನ ಚರಿತ್ರೆಯೊಂದಿಗೆ ಸೇರಿಸಿಕೊಂಡ ಸ್ಥಳವಿದು. ಇಲ್ಲಿಯ ಪಾಂಡವರ ವಠಾರ ಎಂಬ ಬಯಲು ಸಂಶೋಧಕರಿಂದ, ವಿದ್ವಾಂಸರಿಂದ ವಿವರಣೆಯನ್ನು ಬಯಸುತ್ತದೆ, ಪುರಾಣಗಳನ್ನು ಬಿಟ್ಟು, ಐತಿಹಾಸಿಕ ಲೋಕಕ್ಕೆ ಬಂದರೆ ಇಲ್ಲಿಯ ಗವಿಮಠದ ಮೇಲಿನ ಗುಹೆಯಲ್ಲಿಯ ಶಿಲಾಯುಗದ ಆದಿಮಾನವನ ವರ್ಣರಂಜಿತ ಚಿತ್ರಗಳು, ಇಲ್ಲಿಯ ಮೋರೇರ ಅಂಗಡಿ, ಮಿಂಚರ ಬಂಡೆಯ ಬಯಲು ಇವು ಈ ಊರಿನ ಮೂಲವನ್ನು ಕ್ರಿಸ್ತಪೂರ್ವದತ್ತ ಸೂಚಿಸುತ್ತದೆ.

ಕರ್ನಾಟಕದಲ್ಲಿಯ ಮೌರ್ಯ ಅಶೋಕನ ೧೪ ಲಘು ಶಿಲಾಲೇಖಗಳಲ್ಲಿ , ಕೊಪ್ಪಳಕ್ಕೆ ೨ ಸೇರಿವೆ . ಗವಿಮಠ ಮತ್ತು ಪಾಲ್ಕಿಗುಂಡುಗಳಲ್ಲಿ ದೊರೆತ ಈ ಶಾಸನಗಳ ಮೂಲ ಉದ್ದೇಶ ಧರ್ಮಪ್ರಸಾರವೇ ಎಂದು ಸಂಶೋಧನೆಯಿಂದ ಸ್ಪಷ್ಟವಾಗಿದೆ. "ಬಿಳಿಯರಳೆಯಂತೆ ನೆಗಳ್ದ ಕೊಪಣಾಚಳದಂತೆ" ಅತ್ತಿಮಬ್ಬೆಯ ಚರಿತ್ರೆ ಬೆಳಗಿದ್ದು ಇಲ್ಲಿ ಜನಜನಿತ.

ಗದಗ ತಾಲೂಕಿನ ಲಕ್ಕುಂಡಿಗೆ– ಲೊಕ್ಕಿ–ಗುಂಡಿ,ಕೊಪ್ಪಳ ತಾಲೂಕಿನ ಮಾದನೂರಿಗೆ ಮೋದನೂರ್ , ಆಂದ್ರದ ಗುಂತಕಲ್ಲಿಗೆ– ಗುಂಡಕಲ್ಲು[1] ಎಂದು ಕರೆದ ಪ್ರಕಾರ ಕೊಪ್ಪಳಕ್ಕೆ ತಪ್ಪಲ, ತೊಪ್ಪಾಲ್,[2] ಎಂದು ಕರೆದಿದ್ದಾರೆ.ಇಲ್ಲಿ ಗುಡ್ಡಗಳಲ್ಲಿ ಕಿರಿ ಎತ್ತರದ ಗಿಡ–ಗಂಟೆಗಳಿಂದ ಕೂಡಿದ ತಪ್ಪಲ ತಾಣದಲ್ಲಿ ನೆಲಸಿದ ಮಾನವನು ತಪ್ಪಲಿನಲ್ಲಿರುವ ದಿವ್ಯಶಕ್ತಿಯನ್ನು ಬಳಸಿಕೊಂಡು ಬದುಕು ಸಾರ್ಥಕ ಮಾಡಿಕೊಂಡನೆಂದು ಉಲ್ಲೇಖವಿದೆ. ಕಾರಣ ತೊಪ್ಪಲು– ಕೊಪ್ಪಲು, ಅರ್ಥಕೋಶದಲ್ಲೂ ಕೊಪ್ಪಲು ಪದಕ್ಕೆ ಜನನಿವಾಸ ಸ್ಥಳವೆಂದು ನಿಘಂಟುಕಾರರು ಅರ್ಥಯಿಸಿದ್ದಾರೆ.[3] ತಮಿಳಿನಲ್ಲಿ "ಲ"ಕಾರಾಂತ ಶಬ್ದಗಳಿಗೆ "ಉ"ಪ್ರತ್ಯಯವನ್ನು ಕೃಷ್ಣಮಾಚಾರಲು ಸೇರಿಸಿರುವದು, ಶಾಸನದಲ್ಲಿ ಬಳಸಿದ ಪಡವಲು –ಪಡವಲ, ಪದಗಳಲ್ಲಿ ಕಂಡು ಬರುತ್ತದೆ. ಕಾರಣ ಕೊಪ್ಪಲು–ಕೊಪ್ಪಲ.

---

೧) ಪಿ.ಬಿ.ದೇಸಾಯಿ–೧೯೫೬ – ಶಾಸನ ಪರಿಚಯ ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ ಧಾರವಾಡ – ಶಾಸನ – ೫ – ಪುಟ ೮

೨) ಪಿ.ಬಿ.ದೇಸಾಯಿ– ೧೯೫೬ ––––––––––––––––––––––––ಸದರ––––––––––––––––––––––––––––

೩) ಗುರುನಾಥ ಜೋಶಿ. ೧೯೯೬ – ಕನ್ನಡ ಕನ್ನಡ ಶಬ್ದಕೋಶ ಸಂಕೇಶ್ವರ ಮು.ಗದಗ ಪುಟ – ೧೬೯ ಮತ್ತು ೨೮೫.

'ಲ' ಕಾರಕ್ಕೆ 'ಣ' ಕಾರಾದೇಶ 'ಪಡುವಲ–ಪಡುವಣ, ಕೊಪ್ಪಲ–ಕೊಪ್ಪಣ, ಉಚ್ಚಾರಣೆಯ ಸೌಕರ್ಯಕ್ಕಾಗಿ ಕುಪಣ–ಕೊಪಣ ಇವು ಶಾಸನಗಳಲ್ಲಿಯೂ ಮತ್ತು ಸಾಹಿತ್ಯದಲ್ಲಿಯೂ ಸಾಕಷ್ಟು ಬಳಕೆಯಾಗಿವೆ.

'ಲ' ಕಾರಕ್ಕೆ 'ಳ' ಆದೇಶ ಕಾವ್ಯಗಳಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಅಜಿತನಾಥ ಪುರಾಣದಲ್ಲಿ 'ಕೊಪಣಾಚಳ' ಇದೆ. ಇಲ್ಲಿ 'ಲ' ಕಾರಕ್ಕೆ 'ಳ' ಆದೇಶ. ಕಾರಣ ಕೊಪ್ಪಲ – ಕೊಪ್ಪಳ. ಆಡು ಭಾಷೆಯಲ್ಲಿ ಎಂದಿನಿಂದಲೂ ಇದು ಕೊಪ್ಪಳವೇ. ಸ್ಥಳೀಯರ ಅಭಿಪ್ರಾಯದ ಪ್ರಕಾರ ಹಳೆಯ ಕೊಪ್ಪಳವು ಮಳೆಮಲ್ಲೇಶ್ವರ ಪರ್ವತ ಪ್ರದೇಶದಲ್ಲಿತ್ತೆಂದು ಹೇಳುವದಲ್ಲದೇ ಈ ಪರ್ವತಕ್ಕೆ ಮಳೆಮಲ್ಲಪ್ಪನ ಪರ್ವತ ಎಂದು ಕರೆಯುತ್ತಾರೆ.

## ಶಾಸನದಲ್ಲಿ ಕೊಪ್ಪಳ

ಸುಮಾರು ಒಂದು ಲಕ್ಷ ಜನಸಂಖ್ಯೆಯ ಕೊಪ್ಪಳವು ಇದೀಗ ಕರ್ನಾಟಕದ ಒಂದು ಹೊಸ ಜಿಲ್ಲೆಯಾಗಿ ಪ್ರತಿಷ್ಠಾನಗೊಂಡು ರಾಜ್ಯದ ಲಕ್ಷ್ಯಸೆಳೆದಿದೆ. ಈ ಶುಭ ಸಮಯದಲ್ಲಿ ಅದರ ಗತ ವೈಭವ ಜಯಂತಿಯನ್ನು ಯಾವ ಉತ್ಪ್ರೇಕ್ಷೆಯೂ ಇಲ್ಲದೆ ವಾಸ್ತವ ಆಧಾರದ ಅಂಕಿ ಅಂಶಗಳ ಸಹಿತ ಕನ್ನಡ ಲೋಕಕ್ಕೆ ಬಿತ್ತರಿಸುವಲ್ಲಿ ಸಮಯೋಚಿತ ಔಚಿತ್ಯವಿದೆ.

ಕೊಪ್ಪಳಕ್ಕೆ ಇರುವ ಹಿರಿಮೆ–ಗರಿಮೆಗಳು ನಿನ್ನೆ ಮೊನ್ನೆಯವಲ್ಲ. ಇದಕ್ಕೆ ಸುಮಾರು ಎರಡು ಸಾವಿರಕ್ಕೂ ಹೆಚ್ಚು ವರ್ಷಗಳ ಸುದೀರ್ಘ ಪರಂಪರೆಯ ಪ್ರಭಾವಳಿಯಿದೆ. ಕೊಪ್ಪಳವು ಬೆಟ್ಟಸಾಲಿನಲ್ಲಿರುವ ಪ್ರದೇಶ. ಕೊಪ್ಪಳದ ಪಶ್ಚಿಮಕ್ಕೆ ಇರುವ ಪಾಲ್ಕಿ ಗುಂಡು, ದೊಡ್ಡ ಬೆಟ್ಟ, ದಕ್ಷಿಣಕ್ಕಿರುವ ಬಹದ್ದೂರು ಬಂಡೆ ಗುಡ್ಡ, ಪೂರ್ವಕ್ಕೆ ಗವಿಮಠದ ಬೆಟ್ಟಸಾಲು, ಇವುಗಳೆಡೆಯಲ್ಲಿ ನಡುವೆ ನಿಂತ ಕೋಟೆಯ ಬಂಡೆ, ಬೆಟ್ಟಗಳ ಬುಡದಲ್ಲಿರುವ ಕೊಪ್ಪಳ ಪಟ್ಟಣ ಚರಿತ್ರೆಯ ಹೆಗಲೇರಿ ಮಾಡಿದ ಸವಾರಿಯ ಯಶೋಗೀತೆಯನ್ನು ಇಲ್ಲಿನ ಶಾಸನಗಳು ಹಾಡಿವೆ. ಕ್ರಿ.ಪೂ. ಮೂರನೆಯ ಶತಮಾನಕ್ಕೂ ಹಿಂದಿನಿಂದ ಕೊಪ್ಪಳವು ಹೆಸರುವಾಸಿಯಾಗಿತ್ತು. ಪಾಲ್ಕಿಗುಂಡಿನ ಪಶ್ಚಿಮದತ್ತ ಇರುವ ಮಳೆಮಲ್ಲಪ್ಪನ ಗುಡ್ಡದ ಮೇಲೆ ಬೃಹತ್ ಶಿಲಾ ಸಮಾಧಿಯುಗದ ಶಿಲಾ ತೊಟ್ಟಿಲು (ಡಾಲ್ಮೆನ್ಸ್) ಸಿಕ್ಕಿದ್ದು ಇತಿಹಾಸ ಹೇಳುತ್ತಿದೆ. ಇವನ್ನು ಮೋರಿಯರ ಅಂಗಡಿ, ಎನ್ನುತ್ತಾರೆ. ಅಚ್ಚ ಕನ್ನಡದ ಅಕ್ಷರಗಳು ಕಣ್ಣುತೆರೆದು ಬಾಯಿ ಬಿಟ್ಟು ದನಿತೆಗೆಯುವುದು ಒಂಭತ್ತನೆಯ ಶತಮಾನದಿಂದ, ಇವು ಕೊಪ್ಪಳವು ಪವಿತ್ರ ತೀರ್ಥ ಕ್ಷೇತ್ರವಾಗಿ ಮೆರೆದ ಧರ್ಮಗೀತೆಯನ್ನು ಮೊಳಗಿಸಿವೆ. ಕೊಪ್ಪಳ ಸರ್ವ ಧರ್ಮ ಸಮನ್ವಯದ ಪುಣ್ಯಭೂಮಿ ಎಂದು

ಸಾರಿವೆ. ಜೈನ, ಶೈವ, ವೀರಶೈವ, ಹಿಂದೂ, ಮುಸ್ಲಿಂ ಹೀಗೆ ಎಲ್ಲಾ ಧರ್ಮಗಳ ಐಕ್ಯಗಾನ ಕೊಪ್ಪಳವನ್ನು ಬೆಳೆಸಿದ ದಿವ್ಯ ಮಂತ್ರ.

ಕ್ರಿ.ಪೂ. ಮೂರನೇ ಶತಮಾನಕ್ಕೆ ಸೇರಿದ ಅಶೋಕನ ಶಾಸನಗಳೆರಡು ಇಲ್ಲಿ ದೊರೆತಿರುವದು. ಈ ಪಟ್ಟಣ ಆ ವೇಳೆಗಾಗಲೇ ಗಳಿಸಿಕೊಂಡಿದ್ದ ಗೌರವಸ್ಥಾನಕ್ಕೆ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಅನಂತರ ಎಂಟನೆಯ ಶತಮಾನದಿಂದ ನಿರಂತರವಾಗಿ ಇಲ್ಲಿ ಶಾಸನಗಳ ಸಾಮಗ್ರಿ ಉಪಲಬ್ಧವಾಗಿದ್ದು ಈ ಭಾಗದ ಚರಿತ್ರೆಯನ್ನು ಪ್ರಕಟಿಸಿದೆಯಲ್ಲದೆ ಕನ್ನಡ ನಾಡಿನ ಇತಿಹಾಸ ರಚನೆಗೂ ಆಕರಗಳನ್ನು ಒದಗಿಸಿದೆ.

ಅಶೋಕನ ಶಾಸನವೊಂದು ಗವಿಮಠದ ಕಿರು ಬಂಡೆಯಲ್ಲಿ ಕೆತ್ತಲಾಗಿದೆ. ಇದನ್ನು ಆರ್.ಎಲ್. ಟರ್ನರ ಅವರು ಭಾಷಾಂತರ ಮಾಡಿದ್ದಾರೆ. ಹಾಗೂ ಇತ್ತೀಚೆಗೆ ಹಂಪಿ ವಿಶ್ವವಿದ್ಯಾಲಯ ಹೊರತಂದ ಶಾಸನ ಸಂಪುಟ–೨ ರಲ್ಲಿಯೂ ಉಲ್ಲೇಖವಿದೆ.[೧]

೧) ದೇವಾಣಂಪಿಯೆ ಆಹ ಸಾತಿರೇಕಾಣಿ ಅಢತಿಯಾಣಿ ವಸಾಣಿ ಉಪಾ.

೨) ಸಕೇಣೊಚು ಕೋ ಬಾಢಮ್ ಪಕಂತೇ ಸಂವಛರೇ ಸಾತಿರೇಕೇ ಯಮ್ ಮೇ ಸಂಘೇ ಉಪೇತಿ ಬಾಢಂ.

೩) ಚ ಮೇ ಪಕಂತೆ ಸೇ ಇಮಾಯಮ್ ವೇಲಾಯಮ್ ಜಂಬುದೀಪಸಿ ಅಮಿಸಾ ದೇವಾ ಸಮಾಣಾ.

೪) ಮಾಣುಸೇಹಿ ಸೇ ದಾಣಿ ಮಿಸಾ ಕಟಾ ಪಕಮಸ ಏಸಫಾಲೆ ಣೋ ಹಿ ಇಯಮ್ ಮಹತೇಣೇವ ಚ.

೫) ಕಿಯೇ ಪಾಪೋಟವೆ ಖುಡಕೇನ ಪಿ ಪರಮಮೀಣೇನ ವಿಪುಲೇ ಪಿ ಚಕಿಯೇ ಸ್ವಗೇ ಆರಾಧ್ಯಯಿತವೇ.

೬) ತಾಯ ಚ ಅಥಯ ಇಯಮ್ ಸಾವಣೇ ಖುಡಕಾ ಚ ಉಡಾರಾ ಚ ಪರಮಂತು ತಿ ಅಂತಾ ಪಿ ಚ ಜಾಣಂತು ಚಿರಠಿ

೭) ತಿಕೇ ಚ ಪಕಮೇ ಹೋತು ಇಯಮ್ ಚ ಅಠೇ ವಢಿಸಿತಿ ವಿಪುಲೇ ಚ ವಢಿಸಿತಿ ದಿಯ.

೮) ಢಿ ಯಮ್ ಪಿಚ ವಢಿಸಿತೀತಿ.

೧) ಕನ್ನಡ ವಿ.ವಿ.ಶಾಸನ ಸಂಪುಟ–೨ ಡಾ॥ ದೇವರ ಕೊಂಡಾರೆಡ್ಡಿ –ಪು–೩೭–೧೯೯೯



## ಗವಿಮಠ: ಅಶೋಕ ಚಕ್ರವರ್ತಿಯ ಕಿರು ಬಂಡೆಗಲ್ಲು ಶಾಸನ

*Edited & Translated by :*
**R. L. TURNER,** *M.C., M.A., LITT.D.*

A] Devānāmpriya says :

B] (It is ) more than two and half a years since I have been a lay–worshipper;

C] but I have not indeed acted very zealously.

D] (It is) more than a year since the community was joined by me and I have acted very zealously.

E] Thus in this time in Jambudvīpa unmingled (were) the gods with men: they now have been made mingled.

F] This is the fruit of Zeal.

G] For this cannot be obtained by only a great man : on the other hand by a lowly man acting zealously wide heaven also can be attained.

H] And for this matter this proclamation; that both the lowly and exalted may act zealously; and the borderers also may know and zealous action may be long-lasting and this matter shall grow and shall grow wide and shall grow half as much again.

# ಲಿಪಿ ಕನ್ನಡ

೧) ದೇವಾನಂ ಪಿಯೆ ಆಹ ಸಾತಿರೇಕಾನಿ ಅಡಿತಿಯಾನಿ ವಸಾಣಿ ಯಂ ಸು ಮಿ ಉಪಾ.

೨) ಸಕೆ ನೊ ಚು ಖೊ ಬಾಢಂ ಪಕಂತೆ ಸಂವಛರೆ ಸಾತಿರೇಕೆಯಂ ಮೆ ಸಂಘೆ ಉಪೇತಿ ಬಾಢಂ.

೩) ಚ ಮೆ ಪಕಂತೆ ಸೆ ಇಮಾಯಂ ವೆಲಾಯಂ ಜಂಬೂದೀಪಸಿ ಅಮಿಸಾ ದೇವಾ ಸಮಾ ಣಾ.

೪) ಮಾಣಸೇಹಿ ಹಿದಾಣಿ ಮಿಸಾ ಕಟಾ ಪಕಮಸ ಎಸ ಫಲೇ ನೊ ಹಿ ಇಯಂ ಮಹತಣೇ ವ ಚ.

೫) ಕಿ ಯೆ ಪಾಪೋತವೆ ಖುಡಕೇನಪಿ ಪಕಮಮಿನೇನ ವಿಪುಲೆಪಿಚ ಕಿ ಯೆ ಸ್ವಗೆ ಆರಾಧಯಿತವೆ ಎ.

೬) ತಾಯ ಚ ಅಠಾಯ ಇಯಂ ಸಾವಣೆ ಖುಡಕಾಚ ಉಡಾರಾಚ ಪಕಮಂತು ತಿ ಅಂತಾಪಿಚ ಜಾಣಂತೂ ಚಿರಠಿ.

೭) ತೀಕೇಚ ಪಕಮೆ ಹೊ ತು ಇಯಂ ಚ ಅಠೆ ವಡಿಸಿತಿ ವಿಪಲೇಚ ದಿಯ

೮) ಢಿಯಂ ಪಿಚ ವಢಿಸಿತೀತಿ.

ದೇವತೆಗಳ ಪ್ರೀತಿಗೆ ಪಾತ್ರನಾದವನು ಹೇಳುತ್ತಾನೆ. ಈಗ ಎರಡೂವರೆ ವರುಷಗಳ ಕಾಲ ನಾನು ಉಪಾಸಕನಾಗಿದ್ದೇನೆ. ಆದರೆ ನಾನು ನಿಜವಾಗಿಯೂ ಆಸಕ್ತಿಯಿಂದ ಪ್ರವರ್ತಕನಾಗಿರಲಿಲ್ಲ. ಈಗ ಒಂದೂವರೆ ವರುಷದಿಂದೀಚೆಗೆ ಸಂಘಕ್ಕೆ ಸೇರಿರುತ್ತೇನೆ ಮತ್ತು ಆಸಕ್ತಿಯಿಂದ ಇದರಲ್ಲಿ ಪ್ರವರ್ತಕನಾಗಿದ್ದೇನೆ. ಹೀಗೆ ಈ ಸಮಯದಲ್ಲಿ ಜಂಬೂದ್ವೀಪದಲ್ಲಿ ದೇವರ ಮಾನವರ ಸಂಗಮ ಸಾಧ್ಯವಾಗುತ್ತಿರಲಿಲ್ಲ. ಈಗ ಈ ಸಂಗಮ ಸಾಧ್ಯವಾಗಿದೆ. ಇದು ಆಸಕ್ತಿಯ ಫಲ. ಕೇವಲ ದೊಡ್ಡವರೇ ಇದನ್ನು ಸಾಧಿಸುತ್ತಾರೆ ಎಂದಲ್ಲ, ಪರ್ಯಾಯವಾಗಿ ತೀರ ಬಡವನೂ ಸಹ ಆಸಕ್ತಿಯಿಂದ ಪ್ರವರ್ತಿಸಿದರೆ ಘನ ಸ್ವರ್ಗವನ್ನು ಪಡೆಯುತ್ತಾನೆ. ಈ ವಿಷಯಕ್ಕಾಗಿ ಈ ಘೋಷಣೆ. ತೀರ ಕೆಳಗಿನವರು ಅರಿಯಲಿ. ಆಸಕ್ತಿಯಿಂದ, ಉತ್ಸಾಹದಿಂದ ಕೂಡಿದ ಕ್ರಿಯೆಗಳು ಸದಾ ಉಳಿಯುತ್ತಿವೆ. ಇದು ಬೆಳೆಯಲಿ. ದೂರ ದೂರದವರೆಗೂ ಬೆಳೆಯಲಿ. ಮತ್ತೆ ಮತ್ತೆ ಬೆಳೆಯಲಿ.

## ಸಂದೇಶ :

ಒಳ್ಳೆ ಫಲವನ್ನು, ಸುಖವನ್ನು ಪಡೆಯುವುದು ಕೇವಲ ಬಲ್ಲವರು ಮಾತ್ರವಲ್ಲದೆ, ತೀರ ಸಾಮಾನ್ಯನೂ, ಹಿಂದುಳಿದವನೂ, ಬಡವನೂ ಕೂಡ ಪ್ರಯತ್ನಶೀಲನಾದರೆ ಸ್ವರ್ಗ ಸುಖವನ್ನು ಪಡೆಯಬಹುದು. ಅಜ್ಞಾನಿಯೆ ಆಗಲಿ, ತಿಳುವಳಿಕಸ್ಥನಾಗಲಿ ಉತ್ತಮ ಪ್ರಯತ್ನಶೀಲನಾಗಬೇಕು ಮತ್ತು ಬಹಳ ಕಾಲದವರೆಗೂ ಅವರಿಂದ ಇಂಥ ಪ್ರಗತಿಪರ ಪ್ರಯತ್ನ ನಡೆದುಕೊಂಡು ಬರಬೇಕೆಂಬುದೇ ಈ ಶಾಸನದಲ್ಲಿಯ ಘೋಷಣೆಯ ಉದ್ದೇಶ.

ಒಳ್ಳೇ ಫಲವನ್ನು, ಸುಖವನ್ನು ಪಡೆಯುವದು ಕೇವಲ ಬಲ್ಲವರು ಮಾತ್ರವಲ್ಲದೆ, ತೀರ ಸಾಮಾನ್ಯನೂ, ಹಿಂದುಳಿದವನು ಬಡವನು ಕೂಡ ಪಡೆಯಬಹುದು. ಅಜ್ಞಾನಿಯೆ ಆಗಲಿ, ತಿಳಿದವನಾಗಲಿ, ಒಳ್ಳೇ ಪ್ರಯತ್ನ ಶೀಲನಾಗಬೇಕು. ಬಹಳ ಕಾಲದವರೆಗೂ ಅವರಿಂದ ಇಂಥ ಪ್ರಗತಿಪರ ಪ್ರಯತ್ನ ನಡೆದುಕೊಂಡು ಬರಬೇಕೆಂಬುದೇ ಈ ಶಾಸನದಲ್ಲಿಯ ಘೋಷಣೆಯ ಉದ್ದೇಶ.

ದೇವಾನಾಂ ಪ್ರಿಯ ಎಂಬುದು ಅಶೋಕನಿಗೆ ಅನ್ವಯಿಸುವ ಹೆಸರು, ದೇವತೆಗಳಿಗೆ ಪ್ರಿಯನಾದವನು ಎಂದರ್ಥ. ಕೊಪ್ಪಳದ ಪಾಲ್ಕಿಗುಂಡು ಶಾಸನ ಮುಕ್ಕಾಗಿರುವದರಿಂದಲೂ ಈ ಗವಿಮಠ ಶಾಸನ ಪೂರ್ಣವಾಗಿ ಶುದ್ಧ ಪಾಠ ದಿಂದಲೂ ಕೂಡಿರುವ ಕಾರಣ ಈ ಲಘು ಶಿಲಾ ಶಾಸನಕ್ಕೆ ಅಖಿಲಭಾರತ ವ್ಯಾಪ್ತಿಯ ಮಹತ್ವವಿದೆ.

ಶಾಸನ, ಜನಪದ, ಇತಿಹಾಸ, ಸಾಹಿತ್ಯ ರಾಜಕೀಯ, ಇವುಗಳಲ್ಲಿ ಅನೇಕ ಊರಿನ ಹೆಸರಿನಲ್ಲಿ ಪರಿವರ್ತನೆಯಾಗಿರುವದು ಕಂಡು ಬಂದಿದೆ. ವಾತಾಪಿ–ಬಾದಾಮಿ, ಇಲ್ವಲ–ಐಹೊಳೆ, ಪುಲಿಗೆರೆ–ಲಕ್ಷ್ಮೇಶ್ವರ, ಲೊಕ್ಕಿಗುಂಡಿ–ಲಕ್ಕುಂಡಿ, ಹೀಗೆ ನಿದರ್ಶನಗಳಿವೆ.[೧] ಕೊಪ್ಪಳವೂ ಕೂಡಾ ಶಾಸನ, ಇತಿಹಾಸ, ರಾಜಕೀಯ, ಜನಪದ ಸಾಹಿತ್ಯ ಬದಲಾವಣೆ ಆಗಿರುವದನ್ನು ಕಾಣುತ್ತೇವೆ. ಆದರೆ ಚಿತ್ರದುರ್ಗದ ಚಂದ್ರವಳ್ಳಿ ಶಾಸನದಲ್ಲಿ "ಕುಪಣ ಚಮೊ" ಎಂದು ಉಲ್ಲೇಖಿಸಲ್ಪಟ್ಟಿದೆ.

ಶಾಸನಗಳಲ್ಲಿ ಕುಪಣ,ಕೊಪ್ಪಣ,ತೀರ್ಥ,ಕೊಪ್ಪಣಪುರ,ಕೊಪಣತೀರ್ಥ,ಕೊಪಬಾಲ,ಕೊಪ್ಪಳ ಈ ರೀತಿ ಪರಿವರ್ತನೆಗೊಂಡಿರುತ್ತದೆ.

**ಶಾಸನಗಳು :–**

೧) ಕದಂಬಾಣಂ ಮಯೂರ ವರ್ಮ್ಮಣಾ

೨) ತಟಾಕಂ ದೃಢಂ ಕೃತಂ ಅಭಿರುಪಂ ರ (ಚ) ಯಿತ್ವಾ

೩) ವಾನ (ವಾ) ಸಕಂ ಸ್ಥಾಪಯಿತ್ವಾ ಕುಪಣ ಚ (ಮೋ)---[೨]

ಕದಂಬ ಅರಸು ಮಯೂರ ವರ್ಮನು ಕೆರೆಯನ್ನು ಊರ್ಜಿತ ಗೊಳಿಸಿದನೆಂದು ಕುಪಣದ ಲಿಪಿಕಾರ ಚಮ (ಚಮೋ) ಈಗಿನ ಚಿತ್ರದುರ್ಗದ ಜಿಲ್ಲೆಯ ಚಂದ್ರವಳ್ಳಿ ಶಾಸನದಲ್ಲಿ ಉಲ್ಲೇಖಿಸಿದ್ದಾನೆ.[೩] ಈ ಕೊಪ್ಪಳವು ಅಂದೂ ಕೂಡಾ ವಿದ್ಯಾ ಕೇಂದ್ರವಾಗಿತ್ತಂತೆ. ಈ ಶಾಸನದ ಕಾಲವು ೪ನೇ ಶತಮಾನವು.

---

೧) ಕೊಪ್ಪಳ ಶಾಸನಗಳು–ಹಂಪ ನಾಗರಾಜಯ್ಯ –ಪು–೧೬೨–೧೯೯೮

೨) ಪಿ.ಬಿ.ದೇಸಾಯಿ.ಶಾಸನ ಪರಿಚಯ ಕ.ಇ. ಸಂಶೋಧಕಮಂಡಲ ಧಾರವಾಡ. ಶಾಸನ ಸಂಖ್ಯೆಗಳು–೬,೧೮,೪೯,೫೩. –೧೯೫೬

೩) ರಾಜಶೇಖರಪ್ಪ .ಬಿ. ೧೯೮೪ : ಚಂದ್ರವಳ್ಳಿ ಶಾಸನದ ಮೇಲೆ ಹೊಸಬೆಳಕು, ಕ.ಸಾ.ಪ. ಪತ್ರಿಕೆ–ಬೆಂಗಳೂರು ಸಂಪುಟ – ೬೯,ಸಂಚಿಕೆ–೨

ಕೊಪ್ಪಳ ತಾಲೂಕಿನ ಹಲಗೇರಿ ಶಾಸನವು ೮ನೇ ಶತಮಾನದ್ದು

೧) ಸ್ವಸ್ತಿ ಶ್ರೀ ವಿಜಯಾಧಿತ್ಯ ಸತ್ಯ

೨) ಶ್ರಯ ಶ್ರೀ ಪೃಥವೀವಲ್ಲಭ ಮ

೩) ಹಾರಾಜಾಧಿರಾಜ ಪರಮೇಶ್ವರ

೪) ಭಟಾರಕ ಪ್ಲಥಿವೀ ರಾಜ್ಯದನ್ದು ಕೊಪ

೫) ಣದಾ ಮೂ (?) ಱ ಪತಿಯುಂ ಗುತ್ತಿಯೊಡೆಯನುಂ

೬) ಗರೋಜನುಂ ಕರಣಮಾಗೆ ಮದೆವಳೆ ಱ.[೧]

ಬಾದಾಮಿ ಚಾಲುಕ್ಯ ಅರಸು ವಿಜಯಾದಿತ್ಯನ ಸಚಿವ, ರಾಜ್ಯಪಾಲ, ಗುತ್ತಿಯ ಒಡೆಯ ಗರೋಜನು ಈ ಕೊಪಣದಲ್ಲಿದ್ದನೆಂದು ಈ ಮೇಲಿನ ಶಾಸನವು ತಿಳಿಸುತ್ತದೆ.

ಮತ್ತು ೯ನೇ ಶತಮಾನದ ಚಂದ್ರಾಮಬಂಡೆಯಲ್ಲಿರುವ ಶಾಸನವು ಈ ರೀತಿ ಇದೆ.

೧) ಸ್ವಸ್ತಿ ಶಕ ವರಿಷ ಎಣ್ಬುನೂಱ ಮೂಱನೆಯ ವರಿಸ

೨) ದನ್ದು ಕುಣ್ಡಕುನ್ದಾನ್ವಯದ ಏಕ ಚಟ್ಟುಗದ ಭಟಾರರ ಶಿಷ್ಯರ್

೩) ಶ್ರೀ ಸರ್ವ್ವನನ್ದಿ ಭಟಾರರಿಲ್ಲಿಳ್ದು ಊರ್ಗ್ಗನ್ತೀರ್ಥಕದು ಪಕಾರಿಗಳಾಗಿ

೪) ಪಲಕಾಲನ್ತವಂಗೆಯ್ದು ಸನ್ಯಾಸನನ್ನೊನ್ತು ಮುಡಿಪಿದರ್

೫) ಅನವರತ ಶಾಸ್ತ್ರದಾನ ಪ್ರವಿಮಲ ಚಾರಿತ್ರ ಜಳಧರೈಶ್ಚಿತ್ರಮ್

೬) ದುರಿತ ನಿದಾಘವಿಘಾತಂ ಕುರ್ಯಾತ್ ಶ್ರೀ ಸರ್ವ್ವನನ್ದೀನ್ದ್ರ:ಮಂಗಳಮ್.[೨]

ಏಕಚಟ್ಟುಗದ ಭಟಾರರ ಶಿಷ್ಯನು ಸರ್ವನಂದಿ ಭಟಾರರು ಕೊಪಣಕೆ ಆಗಮಿಸಿ, ಸತತ ಬೋಧನೆಯಿಂದ, ಈ ತೀರ್ಥದ ಉಪಕಾರಿಗಳಾಗಿದ್ದರು ಎಂದು ಬಣ್ಣಿಸಿದ್ದಾರೆ.

೧೧ನೇ ಶತಮಾನದ, ಇಂಡಿ ತಾಲೂಕಿನ ಸಾಲೋಟಗಿ ಗ್ರಾಮದ ಶಾಸನವು ಶಿಲಾಹಾರರ ಕುಲಕೆ ತಿಲಕದಂತಿರುವ, ಮಾನನಿಧಿ ಕಂಚಿಗನು ಕೊಪಣಪುರದವನೆಂದು ತಿಳಿಸುತ್ತದೆ. ಅದು ಈ ಕೆಳಗಿನಂತಿದೆ.

೧) sri-mana - dhama - rajta -rama - a
೨) vali - kopanapura - vinirggatan = abha
೩) yem.. [1*] Bhima - balam selavara
೪) kulaka = i mahiyol tilaka -
೫) d=ante kamchigan=embom/(1*)mela
೬) rappan = ardan = atam solada gandam - pra.[೩]

---

೧) ಪಿ.ಬಿ. ದೇಸಾಯಿ ೧೯೫೬ :ಶಾಸನ ಪರಿಚಯ.ಕ. ಇ. ಸಂಶೋಧಕ ಮಂಡಳ,ಧಾರವಾಡ ಶಾಸನ ಸಂಖ್ಯೆ – ೧, ಪು–೧
೨)ಪಿ.ಬಿ. ದೇಸಾಯಿ ೧೯೫೬: ಶಾಸನ ಪರಿಚಯ. ಕ. ಇ. ಸಂಶೋಧಕ ಮಂಡಳ, ಧಾರವಾಡ, ಶಾಸನ ಸಂಖ್ಯೆ–೧೨,ಪು–೧೧
೩) ಎಫಿಗ್ರಾಫಿಯಾ ಇಂಡಿಯಾ, ಸಂಪುಟ–೧, ಪುರಾತತ್ವ ಸರ್ವೆಕ್ಷಣ ಶಾಸನ ಸಂ.೬, ಪುಟ–೫೭.ಪಿ.ಬಿ.ದೇಸಾಯಿ –೧೯೫೬

ಸೆಪ್ಪರು(ಐ) ಕೀತ್ತಿಕ್ಕೊಳಪ್ಪ ತಗವ್ವೆಯಿನ್. –[೧]

ಸೆಪ್ಪೋರನ್ ತೀರತ್ತ ಕೊಪ್ಪತ್ತಗ ವೈಯಿಲ್. –[೨]

ಶೆಱುರುಮಣಿಕೊಪ್ಪತ್ತು ಅಹವಮಲ್ಲ ನೋಡು.– [೩]

ಕೊಪ್ಪತ್ತು ವಂದಳಿ ಚಾಳಿಕ್ಕಿವಂದೆಯ್ದಿಯ ಪರಿಹವಂ.– [೪]

ತಮಿಳು ಶಾಸನದಲ್ಲಿ ಕೊಪಣದ ಉಚ್ಛಾರಣೆಗೆ 'ಕೊಳಪ್ಪ'ತೀರ ಹತ್ತಿರದ ಪದ. ಇದರಲ್ಲಿ 'ಳ' ಮತ್ತು 'ಪ್ಪ' ಗಳ ಸ್ಥಾನ ಪಲ್ಲಟವಾದರೆ, ಕೊಪ್ಪಳ. 'ಸೆಪ್ಪೋರುನ್ ತೀರತ್ತು' ತೀರತ್ತು – ತೀರ್ಥ. ಶೆಪ್ಪು–ಮಾ–ಮಾತೀರ್ಥ. ಅಥವಾ ಮಹಾತೀರ್ಥ ಎಂದು ಕೃಷ್ಣಮಾಚಾರುಲು ಮಹಾತೀರ್ಥವೆಂದು ಅರ್ಥೈಸಿರುವರು.

೧) 'ಮಾಡಿಸಿದಂ ಜಿನೇಂದ್ರ ಭವನಂಗಳಾ ಕೊಪಣಾದಿ ತೀರ್ತ್ಥದಲು.

೨) ರೂಢಿಯಿನೇಳ್ಗೆವೆತ್ತೆಸೆವ ಬೆಳ್ಗೊಳದಲು ಬಹು ಚಿತ್ರಭಿತ್ತಿಯಿಂ.

೩) ನೋಡಿದರಂ ಮನಂಗೊಳಿಪುವೆಂಬಿನ ಮೇಚ ಚಮೂಪನರ್ತ್ಥಿಕೆಯ್

೪) ಗೂಡೆ ಧರಿತ್ರಿಕೊಂಡು ಕೊನೆದಾಡೆ ಜಸಂ ನಲಿದಾಡೆ ಲೀಲೆಯಂ.[೫]

ಹೊಯ್ಸಳ ಅರಸನಾದ ವಿಷ್ಣುವರ್ಧನನ ದಂಡನಾಯಕ ಏಚರಾಜನು ಬೆಳುಗೊಳದೊಳು ಧರಿತ್ರಿ ಕೊಂಡಾಡುವಂತೆ, ಅನೇಕ ಬಸದಿಗಳನ್ನು ಕಟ್ಟಿಸಿದಂತೆ, ಆದಿ ತೀರ್ಥದಲ್ಲೂ ಅನೇಕ ಬಸದಿಗಳನ್ನು ಕಟ್ಟಿಸಿದನಂತೆ. ಕಾಲ ೧೨ನೇ ಶತಮಾನ.

೧) ಪ್ರಿಯದಿಂದಂ ಹುಳ್ಳ ಸೇನಾಪತಿ ಕೊಪಣ ಮಹಾತೀರ್ಥದೊಳ್ ಧಾತ್ರಿಯಂನಾ

೨) ರ್ದ್ಧಿಯುಮುಳ್ಳನ್ನಂ ಚತುರ್ವ್ವಿಂಶತಿ ಜಿನಮುನಿ ಸಂಘಕ್ಕೆ ನಿಶ್ಚಿಂತಮಾಗ

೩) ಕ್ಷಯದಾನಂ ಸ್ವಲ್ಪ ಪಾಂಗಿಂ ಬಹುಕನಕ ಮನಾಕ್ಷೇತ್ರ ಜರ್ಗಿತ್ತು ಸದ್ವಲ

೪) ತ್ತಿಯನಿನ್ತೀ ಲೋಕಮೆಲ್ಲಂ ಪೊಗಳೆ ಬಡಿಸಿದಂ ಪುಣ್ಯ ಪುಂಜೈಕಧಾಮಂ. [೬]

ಹೊಯ್ಸಳ ಅರಸು ವಿಷ್ಣುವರ್ಧನನ ಕುಮಾರ ನರಸಿಂಹ ಅರಸನ ಪ್ರಧಾನಿ 'ಹುಳ್ಳ' ಮಹಾತೀರ್ಥದಲ್ಲಿರುವ ಚತುರ್ವಿಂಶತಿ ಜಿನಮುನಿ ಸಂಘಕ್ಕೆ ವಿಫುಲ ಕನಕ ದಾನ ಮಾಡಿದನು ಕಾಲ ೧೨ನೇ ಶತಮಾನ.

---

೧) ನಾ.ಭಾ.ಶಾಸ್ತ್ರಿ – ಪ್ರಬಂಧಮಾಲಾ, ಕೊಪಣ–ಕೊಪ್ಪಳ. ಗಜಾನನ ಯುವಕ ಮಂಡಲ ಕೊಪ್ಪಳ ಪುಟ–೧೬, ವರ್ಷ–೧೯೮೭. ಎಸ್–೧–೧–ಸಂಪುಟ೫–ಸಂಖ್ಯೆ ೪೮೯

೨) ನಾ.ಭಾ.ಶಾಸ್ತ್ರಿ – ಅದೇ ಕಡೆ – ಸಂಖ್ಯೆ– ೬೪೪–೧–೧೯–೧೯೮೭

೩) ನಾ.ಭಾ. ಶಾಸ್ತ್ರಿ – ಅದೇ ಕಡೆ – ಸಂಖ್ಯೆ–೬೪೭–೧–೨೧–೧೯೮೭

೪) ನಾ.ಭಾ. ಶಾಸ್ತ್ರಿ – ಅದೇ ಕಡೆ–ಸಂಖ್ಯೆ–೬೪೭–೧–೨೧–೧೯೮೭

೫) ನಾ.ಭಾ.ಶಾಸ್ತ್ರಿ – ಅದೇ ಕಡೆ – ಶ್ರವಣಬೆಳಗೊಳ ಶಾಸನ ಸಂಖ್ಯೆ–೩೮೪ ಪು–೧೮–೧೯೮೭

೬) ನಾ.ಭಾ.ಶಾಸ್ತ್ರಿ – ಅದೇ ಕಡೆಗೆ ಶ್ರವಣಬೆಳಗೊಳ ಶಾಸನ ಸಂಖ್ಯೆ–೩೪೫–ಪು–೨೦–೧೯೮೭

ಈ ಮೇಲಿನ ಎಲ್ಲಾ ಶಾಸನಗಳನ್ನು ಪರಿಶೀಲಿಸಲಾಗಿ, ಕೊಪ್ಪಳಕ್ಕೆ ಹೆಸರಿನ (ಅಕ್ಷರಗಳ) ಪರಿವರ್ತನೆ ಆಗಿದ್ದು ಕಂಡು ಬರುತ್ತದೆ. ಹೈದರಾಬಾದ ಅರಸನ ಪ್ರಧಾನ ಮಂತ್ರಿ ಮೀರತುರಾಬ್ ಅಲಿ ಖಾನ್ ನವಾಬ ಸಾಲಾರಜಂಗ ಬಹದ್ದೂರ, ಇವರು ೧೮೬೧ರಲ್ಲಿ ಕೊಪ್ಪಳ ಮತ್ತು ಯಲಬುರ್ಗಾ ತಾಲೂಕುಗಳನ್ನು ಕೂಡಿಸಿ ಜಿಲ್ಲೆಯನ್ನು ಮಾಡಿದನು. ಜಿಲ್ಲಾ ಮುಖ್ಯಸ್ಥಳ ಕೊಪ್ಪಳ. ಆದರೆ ಧಾಖಲೆಗಳಲ್ಲಿ ಕೊಪ್ಪಲ್ ಎಂದಿದೆ. ಬ್ರಿಟೀಷರು ೧೮೮೪ರಲ್ಲಿ ಧಾರವಾಡದಿಂದ ಹೊಸಪೇಟೆಗೆ ರೇಲ್ವೆ ಮಾರ್ಗ ರಚಿಸಿದರು. ಕೊಪ್ಪಳ ರೇಲ್ವೆ ನಿಲ್ದಾಣವಾಯಿತು. ಅವರು ಇದಕ್ಕೆ ಕೊಪಬಾಲ ಅಂತಾ ಹೆಸರಿಸಿದ್ದರು.

<u>ಸಾಹಿತ್ಯದಲ್ಲಿ ಕೊಪ್ಪಳ</u> : ಕನ್ನಡ ಸಾಹಿತ್ಯವನ್ನು ಬೆಳೆಯಿಸಿದ ಪುಣ್ಯಭೂಮಿಗಳಲ್ಲಿ ಕೊಪ್ಪಳವೂ ಒಂದು. ಇದರ ನುಡಿಯ ಗಡಿಯನ್ನು, ಜಿನತೀರ್ಥವನ್ನು, ವೀರಧೀರರನ್ನು, ವೀರ ಮಾತೆಯರನ್ನು, ರಾಜಕೀಯವನ್ನು ಕವಿಗಳು ಈ ಕೆಳಗಿನಂತೆ ಬಣ್ಣಿಸಿದ್ದಾರೆ.

ಕಾವೇರಿಯಿಂದಮಾ, ಗೋ–
ದಾವರಿವರಮಿರ್ಪ ನಾಡದಾ, ಕನ್ನಡದೊಳ್
ಭಾವಿಸಿದ ಜನಪದಂ, ವಸು–
ಧಾವಳಯವಿಲೀನ ವಿಶದ ವಿಷಯ ವಿಶೇಷಂ[೧]

ಕವಿರಾಜ ಮಾರ್ಗ–ಸಂಧಿ–೧ ಪದ್ಯ–೩೬ ಪುಟ–೧೦ನೃಪತುಂಗ ಅರಸ (ಕ್ರಿ.ಶ. ೮೧೪–೮೭೮)ನ ಕಾಲದಲ್ಲಿ ಉತ್ತರ ಭಾರತದಲ್ಲಿ ಗೋದಾವರಿವರೆಗೂ, ದಕ್ಷಿಣ ಭಾರತದಲ್ಲಿ ಕಾವೇರಿವರೆಗೂ, ಪಶ್ಚಿಮ ಮತ್ತು ಪೂರ್ವಕ್ಕೆ ಸಾಗರಗಳವರೆಗೂ ಕನ್ನಡ ನಾಡು ಹಬ್ಬಿತ್ತು.

'ಅದಱೊಳಗಂ ಕಿಸುವೊಳಲಾ,
ವಿದಿತ ಮಹಾ ಕೊಪಣ ನಗರದಾ, ಪುಲಿಗೆಱೆಯಾ
ಸದಭೀಸ್ತುತಮ ಪ್ಪೊಂ ಕುಂ–
ದದ ನಡುವಣ ನಾಡೆ, ನಾಡೆ ಕನ್ನಡದ ತಿರುಳ್'[೨]

ಕವಿರಾಜ ಮಾರ್ಗ–ಸಂಧಿ–೧ ಪದ್ಯ–೩೬ ಪುಟ–೧೦

ನೃಪತುಂಗ ಅರಸನ ನಾಡಿನಲ್ಲಿ ತಿರುಳ್ಗನ್ನಡದ ನಾಡನ್ನು ಕವಿಯು ಕವಿರಾಜ ಮಾರ್ಗದಲ್ಲಿ ಗುರುತಿಸಿದ್ದಾನೆ. ಇಲ್ಲಿ ಕೊಪ್ಪಳದ ಉಲ್ಲೇಖ ಗಮನಾರ್ಹ.

---

೧) ಎಂ.ವಿ. ಸೀತಾರಾಮಯ್ಯ–೧೯೬೮–ಕವಿರಾಜ ಮಾರ್ಗ. ಕರ್ನಾಟಕ ಸಂಘ, ಸ.ಆ.&ಸೈ.ಕಾಲೇಜ ಬೆಂಗಳೂರು ಸಂಧಿ–೧ ಪದ್ಯ೩೬–ಪು–೧೦.
೨) ಎಂ.ವಿ. ಸೀತಾರಾಮಯ್ಯ–೧೯೬೮– ಅದೇ ಕಡೆ – ಸಂ–೧ ಪದ್ಯ–೩೭, ಪುಟ–೧೦

ಕೊಪಣ (ಕೊಪ್ಪಳ ಜಿಲ್ಲೆಯ – ಕೊಪ್ಪಳ)

ಪುಲಿಗೆರೆ (ಗದಗ ಜಿಲ್ಲೆಯ – ಲಕ್ಷ್ಮೇಶ್ವರ)

ಒಂಕುಂದ (ಬೆಳಗಾವಿ ಜಿಲ್ಲೆಯ – ಒಕ್ಕುಂದ)

ಕಿಸುವೊಳಲ (ಬಾಗಲಕೋಟೆ ಜಿಲ್ಲೆಯ– ಪಟ್ಟದಕಲ್ಲು)

ಕೊಪ್ಪಳವು ತಿರುಳ್ಗನ್ನಡದ ನಾಡಿನ ನಾಲ್ಕು ಊರುಗಳಲ್ಲಿ ಒಂದು. ಮತ್ತು ೯ನೇ ಶತಮಾನದಲ್ಲಿ ಇದು ವಿದಿತ ಮಹಾ ಕೊಪಣನಗರವು.

'ಬಿಳಿಯರಳೆಯಂತೆ ಗಂಗಾ –
ಜಳದಂತೆ ಸೆವಜಿತಸೇನ ಮುನಿಪತಿಯ ಗುಣಾ –
ವಳಿಯಂತೆ, ನಗೆಲ್ದ ಕೊಪಣಾ –
ಚಳದಂತೆ ಪವಿತ್ರ ಮತ್ತಿಮಬ್ಬೆಯ ಚರಿತಂ.'[1]

ಅಜಿತನಾಥ ಪುರಾಣದಲ್ಲಿ ಕವಿ ರನ್ನನು ಮನತುಂಬಿ ಅತ್ತಿಮಬ್ಬೆಯನ್ನು ದಾನ ಚಿಂತಾಮಣಿ ಎಂದು ಹೊಗಳಿದ್ದಾನೆ. ಅಲ್ಲದೆ ಕೊಪ್ಪಳ ನಾಡವರ ಜೀವನ ಗಂಗಾ ಜಲದಂತೆ ನಿರ್ಮಲವಾದುದು. ಇಲ್ಲಿಯ ಮನಿಗಳು ಜಿತಸೇನ ಮುನಿಯ ಹಾಗೆ ಗುಣಿಗಳು. ಜನರು, ಧರ್ಮದಲ್ಲಿ ಸ್ಥಿರಚಿತ್ತರೆಂದು ಪರ್ಯಾಯವಾಗಿ ವರ್ಣಿಸಿದ್ದಾರೆ.

ಕವಿರಾಜ ಮಾರ್ಗದ ಶ್ರೀ ವಿಜಯ ವಿದಿತ 'ಮಹಾಕೊಪ್ಪಣ' ನಗರ (ಕ್ರಿ.ಶ. ೮೧೫–೮೭೫) ಎಂದಿರುವನು. ಕವಿರನ್ನ ಅತ್ತಿಮಬ್ಬೆಯ ಚರಿತ್ರೆಯನ್ನು 'ನೆಗಳ್ದ ಕೊಪಣಾಚಳದಂತೆ, ಪವಿತ್ರವೆಂದು ಈ ಸ್ಥಳದ ಮಹತ್ವವನ್ನು ಸಾರುತ್ತದೆ. (ಕ್ರಿ.ಶ ೯೩ರಲ್ಲಿ) ಅಲ್ಲದೇ ರಾಷ್ಟ್ರ ಕೂಟರ ಕಾಲದಲ್ಲಿ 'ಕಾವೇರಿಯಿಂದಮಾ ಗೋದಾವರಿವರಮಿರ್ದ್ದ, ಕನ್ನಡ ನಾಡಿನ ತಿರುಳ್ಗನ್ನಡದ ಸೀಮೆಯನ್ನು ತಿಳಿಸುತ್ತದೆ.

ಕವಿರಾಜ ಮಾರ್ಗವಲ್ಲದೇ ಕನ್ನಡದ ಪ್ರಾಚೀನ ಕೃತಿಗಳನೇಕ ಕೊಪ್ಪಳದ ಮಹತ್ವ ಸಾರಿವೆ. ಕೊಪಣಾಂದ್ರಿಂದ್ರ ಎಂದರೆ ಕೊಪ್ಪಳ ಹಿರಿಯ ಬೆಟ್ಟವು ಜೈನತೀರ್ಥವೆಂದು ಚಾವುಂಡರಾಯ ಪುರಾಣವು ಹೇಳಿದೆ.[2]

---

೧) ಹೆಚ್. ದೇವಿರಪ್ಪ ಮತ್ತು ಜವರೇಗೌಡ(ಸಂ)– ೧೯೫೫–ರನ್ನಕವಿ ವಿರಚಿತ–ಅಜಿತ–ತೀರ್ಥಂಕರ ಪುರಾಣತಿಲಕಂ. ಜೈನ ಓರಿಯಂಟಲ್ ರಿಸರ್ಚ ಸಂಸ್ಥೆ, ಮೈಸೂರು ಸಂಧಿ–೧೨, ಪದ್ಯ–೬, ಪು– ೨೦೩.

೨) ಚಾವುಂಡರಾಯ ಪುರಾಣ ೩ನೇ ಪುಟ ೧೫ನೇ ಪದ್ಯ ಕಮಲಾ ಹಂಪನಾ ಹಾಗೂ ಕೆ.ಆರ್.ಶೇಷಗಿರಿ–೧೯೮೧

ರಾಷ್ಟ್ರಕೂಟ ೩ನೆಯ ಕೃಷ್ಣನ ಆಳ್ವಿಕೆಯ ಕ್ರಿ.ಶ.ಸು ೯೬೪ರ ಉಪ್ಪಿನ ಬೆಟ್ಟಗೇರಿ ಶಾಸನ[೧] (ಕ್ರಿ.ಶ ೧೦೪೩) ದಲ್ಲಿ ಆತನ ಮಹಾ ಸಾಮಂತಾಧಿಪತಿಯಾದ ಜಯಧೀರ ಬಿರುದಿನ ಶಂಕರಗಂಡನು ಕೊಪ್ಪಳದಲ್ಲಿ ಜಿನಾಲಯ ಕಟ್ಟಿಸಿ ಅದನ್ನು ತನ್ನ ಬಿರುದಿನಿಂದ ಕರೆದಿರುವನು.

ಸಾಹಿತ್ಯಿಕ ಆಧಾರದಿಂದ (ಕ್ರಿ.ಶ. ೯ ರಿಂದ ೧೩ನೇಯ ಶತಮಾನದ ವರೆಗೆ) ಕೊಪ್ಪಳ ಪ್ರದೇಶದ ಜೈನಮತದ ಪ್ರಭಾವ ಹಾಗೂ ಪಾವಿತ್ರ್ಯತೆಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

ಮತ್ತಿನ ಮಾತ ವಂತಿರಲಿ ಜೀರ್ಣಜಿನಾಶ್ರಯ ಕೋಟಿಯಂತ್ರಮಂ
ಬಿತ್ತಿರೆ ಮುನ್ನಿನಂತಿರಸಿತೂರ್ಗಳೊಳಂ ನೆರೆ ಮಾಡಿಸುತ್ತಮ
ತ್ಯುತ್ತಮ ಪಾತ್ರದಾನದೊದವಂ ಮೆರೆಯುತ್ತಿರೆ ಗಂಗವಾಡಿ ತೊಂ
ಭತ್ತಳಿಸಾಸಿರಂ ಕೊಪಣ ಮಾದುದು ಗಂಗಣದಂಡನಾಥನಿಂ.

ಇಲ್ಲಿ ತನ್ನ ದಾನಮನೋಭಾವನೆಯಿಂದ ಗಂಗದಂಡಾಧಿಪ ಗಂಗವಾಡಿ ತೊಂಭತ್ತಾರು ಸಾವಿರವನ್ನು 'ಕೊಪಣದೋಪಾದಿ' ಮೆರೆಯುವಂತೆ ಮಾಡಿದನೆಂದು ಈ ಪದ್ಯ ಸಾರುತ್ತದೆ.[೨] (ಕ್ರಿ.ಶ. ೧೧೧೦ರಲ್ಲಿ)

'ಕೊಪಣ ಮೊದಲಾದ ತೀರ್ಥದೊಳ
ಪರಿಮಿತ ದ್ರವ್ಯದಿಂದೆ ಹಾಜ್ಞಾವಿಧಿಯಿಂ
ಸ್ವಪವರ್ಗದ ಫಲಕಾಗಿಯೇ
ವಿಪುಲೋದಯ ಮಾಡಿ ಮೆರೆದೆ ವಿದ್ಯಾನಂದಾ.[೩]

ನಂಜರಾಯ ಪಟ್ಟಣದ ಅರಸು ನಂಜದೇವನ ಆಸ್ಥಾನದಲ್ಲಿದ್ದ 'ಮಲ್ಲಭಟ್ಟ, ಪಂಡಿತನನ್ನು ತರ್ಕದಲ್ಲಿ ಸೋಲಿಸಿದ ವಿದ್ಯಾನಂದನು, ಕೊಪಣ ತೀರ್ಥದಲ್ಲಿ ಅಪವರ್ಗ ಸುಖಕ್ಕಾಗಿ ಅಪರಿಚಿತ ದ್ರವ್ಯ ನೀಡಿ ಕೀರ್ತಿ ಪಡೆದನು. ವರ್ಧಮಾನ ಮುನೀಂದ್ರ ರಚಿತ ' ದಶಭಕ್ತ್ಯಾದಿ, ಮಹಾಶಾಸ್ತ್ರದಲ್ಲಿ ಕೊಪಣ ಸಾಗರದತ್ತ ಪೂಜಿತ ಚಂದ್ರಪ್ರಭೆ ಮೊದಲಾದ ಜಿನಮಂದಿರಗಳ ಉಲ್ಲೇಖವಿರುವದು ಗಮನಾರ್ಹ.

೧) ಶಾಸನ ಪರಿಚಯ ೫ ಉಪ್ಪಿನಬೆಟಗೇರಿ-ಪಿ.ಬಿ.ದೇಸಾಯಿ-೧೯೫೬

೨) ಎಪಿಗ್ರಾಫಿಯಾ ಕರ್ನಾಟಕ -೨ ಶ್ರವಣಬೆಳಗೊಳ-೩೨೭ Lewis Rise -1914-15

೩) ಡಾ॥ಬಿ.ವ್ಹಿ.ಶಿರೂರು ೧೯೭೬ 'ಕನ್ನಡ ಸಾಹಿತ್ಯದಲ್ಲಿ ಕೊಪ್ಪಳನಾಡು'- ಗವಿದೀಪ್ತಿ ಪು-೨೧೬

ರನ್ನ ಕವಿಯ ಸಮಕಾಲೀನನೇ ಆದ ಚಾವುಂಡರಾಯನು ತನ್ನ ಗದ್ಯ ಗ್ರಂಥವಾದ ಚಾವುಂಡರಾಯ ಪುರಾಣ (ತ್ರಿಷಷ್ಟಿ ಲಕ್ಷಣ ಮಹಾಪುರಾಣ) ದಲ್ಲಿ ಈ ಕೊಪ್ಪಳದ ಬೆಟ್ಟವನ್ನು ಹೆಸರಿಸಿರುವದು ಈ ರೀತಿ ಇದೆ.

ಅಸಿಧಾರಾವ್ರತದಿಂದೆ ಪೆಂಪೆಸೆವಿನಂ ಮುಳ್ಗುಂದದೊಳ್ ಮುನ್ನೆಸಂ
ನ್ಯಸನಕ್ಕೆಯ್ದೆ ನಿವೃತಿಗೆಯ್ದು ಕೊಪಣಾದ್ರೀಂದ್ರಕ್ಕೆ ವಂದಾಗಮೋ
ಕ್ತಸಮಾಧಾನ ವಿಧಾನದಿಂದ ಮುಡಿಪಿ ಮುಕ್ತಿ ಸ್ಥಾನಮಂ ಮುಂಚೆಸಾ
ಧಿಸಿಕೊಂಡೊಳ್ಪು ಕುಮಾರಸೇನ ಮುನಿಪಂಗಕ್ಕುಂ ಪೆರರ್ಗ್ಗಕ್ಕುಮೇ.

ಚಾವುಂಡರಾಯನು ಕ್ರಿ.ಶ.೯೭೮ ರಲ್ಲಿ ಈ ಕೃತಿಯನ್ನು ರಚಿಸಿದ್ದಾನೆ. ಕತ್ತಿಯ ಮೊನೆಯ ಮೇಲೆ ನಡೆಯುವಷ್ಟು ಕಷ್ಟವಾದ ಸನ್ಯಾಸವ್ರತವನ್ನು ಹಿರಿಮೆ ಕಂಗೊಳಿಸುವ ಹಾಗೆ ಕುಮಾರ ಸೇನ ಮುನಿಯು ಮುಳುಗುಂದದಲ್ಲಿ ಪಡೆದರು. ನಂತರ ಅವರು ಅಲ್ಲಿಂದ ಕೊಪಣದ ಬೆಟ್ಟಗಳ ಒಡೆಯನಾದ ದೊಡ್ಡಬೆಟ್ಟಕ್ಕೆ ಬಂದರು. ಇಲ್ಲಿ ಅವರು ಜೈನಶಾಸ್ತ್ರಗಳಲ್ಲಿ ಹೇಳಿರುವ ಹಾಗೆಯೇ ಕೋಪತಾಪಗಳಿಲ್ಲದ ಸಾಮಾಧಾನ ಭಾವದಿಂದ ಸಲ್ಲೇಖನ ಕ್ರಮದಲ್ಲಿ ಮರಣ ಹೊಂದಿದ ಬಗ್ಗೆ ಉಲ್ಲೇಖ ಇದೆ.ಆ ಹಿರಿಮೆ ಅವರಿಗಲ್ಲದೆ ಬೇರೆ ಯಾರಿಗಿದೆ ಎಂಬುದು ಚಾವುಂಡರಾಯನ ಪ್ರಶ್ನೆ. ರನ್ನನಲ್ಲಿ ಕೊಪಣಾಚಲವೆಂದಿದೆ. ಇಲ್ಲಿ ಕೊಪಣಾದ್ರಿ ಎಂದಿದೆ. ಕುಮಾರ ಸೇನ ಮುನಿ ಇಲ್ಲಿ ಸಮಾಧಿ ಮರಣ ಪಡೆದನಂತೆ. ಶ್ರವಣಬೆಳಗೊಳದಲ್ಲಿ ಸಮಾಧಿ ಮರಣ ಪಡದವರಲ್ಲಿ ಸಂಖ್ಯೆ ಹೆಚ್ಚು. ಹಲವು ನಿಸಿದಿಕಲ್ಲುಗಳಿವೆ. ಶ್ರವಣಬೆಳಗೊಳದ ಹತ್ತನೆಯ ಶತಮಾನದ ಶಾಸನವೊಂದರಲ್ಲಿ ಶ್ರೀಕೊಪಣ ತೀರ್ಥಎಂದಿದೆ.[೧]

---

೧) EC. ೧೧ (R) ೨೨೦(೪೭೫) ೧೦.ಶ.ಪು.೧೪೭ Mysore Archereological Series-1914 – Lewis Rise (1886 onwards)

## ಕೊಪ್ಪಳದ ಕೋಟೆ ಹಾಗೂ ಅದರ ಸಂಸ್ಕೃತಿ.

ಕೊಪ್ಪಳದ ಸಂಸ್ಕೃತಿಯಲ್ಲಿ ಕೋಟೆ ಹಾಗೂ ಇಸ್ಲಾಂ ಧರ್ಮದ ಸಂಸ್ಕೃತಿಯನ್ನು ಪರಿಶೀಲಿಸಬೇಕಾಗುತ್ತದೆ. ಗಿರಿದುರ್ಗದ ಸಾಲಿಗೆ ಸೇರಿದ ಈ ಕೋಟೆ ನೋಡಲು ಸುಂದರ ತಾಣವು. ಕೋಟೆ ಕಟ್ಟಿದ ಭಾಗವು ಎತ್ತರವಾಗಿಯೂ, ದುಂಡಾಗಿಯೂ ಮತ್ತು ಕಡಿದಾಗಿ ಇರುತ್ತದೆ. ನೋಡಲು ಒಂದೇ ಗುಡ್ಡವಾದರೂ ಮೇಲೆ ಹೋಗಿ ನೋಡಿದರೆ ಎರಡು ಗುಡ್ಡಗಳು ಸೇರಿದ್ದು ಕಂಡು ಬರುತ್ತದೆ.

ಭೂ ತಳದಿಂದ ಕೋಟೆ ಹತ್ತಬೇಕಾದರೆ ಸುಮಾರು ೩೫ ಮೆಟ್ಟಿಲು ಏರಿದ ನಂತರ ಚೌಕಾಕಾರದ ಕೋಟೆಯ ಮಹಾದ್ವಾರವಿದೆ. ಇದಕ್ಕೆ ಬಳಸಿದ ಕಲ್ಲುಕಂಬಗಳು, ತೊಲೆಗಳು ಚೌಕಾಕಾರದಲ್ಲಿ ಇದ್ದದ್ದು ಕಂಡುಬರುತ್ತವೆ. ಈ ಕಲ್ಲುಗಳು ಸ್ವಲ್ಪ ಹಸಿರು ಮಿಶ್ರಿತವಾಗಿ ಕಾಣುತ್ತವೆ. ಈ ಕಲ್ಲುಗಳಲ್ಲಿ ಅನೇಕ ಉಬ್ಬು ಚಿತ್ರಗಳಿವೆ. ಕಟ್ಟೆಗಳನ್ನು ಹತ್ತಲು ಪಡುವಣ ತುದಿಯಲ್ಲಿ ಪಾವಟಿಗೆಗಳು ಇರುತ್ತವೆ.ಛತ್ತಿನ ಒಳಭಾಗದಲ್ಲಿಯ ಕಲ್ಲಿನಲ್ಲಿ ಚೌಕ,ವರ್ತುಳ ಹಾಗೂ ನಡುವೆ ಹೂವುಗಳ ಚಿತ್ರ ಇರುತ್ತದೆ. ಚೌಕದ ಪ್ರತಿ ಮೂಲೆಗೆ ಹಾವಿನ ರೇಖಾ ಚಿತ್ರಗಳು ಕಾಣುತ್ತವೆ.

ಈ ಕೋಟೆಗೆ ರೂಢಿಯಲ್ಲಿ ಜನರು 'ಸುಲ್ತಾನಾ ದರವಾಜಾ,,ಎನ್ನುತ್ತಾರೆ.ಟೀಪು ಸುಲ್ತಾನನ ಕೋಟೆಯ ನಾಯಕ ಮುಹಮ್ಮದಖಾನ ಬಹಲ್ಲಮಿ ಯು ಈ ಹೆಸರನ್ನು ಇಟ್ಟ ಬಗೆಗೆ ಈ ಬಾಗಿಲಿನ ಮೇಲ್ಭಾಗದಲ್ಲಿರಿಸಿದ ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ಕುರಾನಿನ ಸೂಕ್ತ ಇದೆ. ಇದರ ಒಂದು ಶಾಸನ ಈ ಕೆಳಗಿನಂತಿದೆ.

ಅಲ್ಲಾಹ

ಬಿಸ್ಮಿಲ್ಲಾ ಹಿರ್ರಹಮಾನಿರ್ರಹಿಮ

ವ ನುಜ್ಜಿಲ್‌ಮಿನಲ್ ಕುರಾನಿ ಮಾ ಹುವ ಷಿಫಾವುನ್ ರಹಮತುನ್

ಲಿಲ್ ಮೋಮಿನೀನ

ಮಾಲಿಕ ಈ ಕಿಲಾರಾಬುವದ್ ಬಹಾದ್ದೂರ್ ನವಾಬ
ಟೀಪುಸುಲ್ತಾನ, ಅಜ್ ವಿತಾಲಿ ಷುದಾ ಅಸಾರೆ ಕುಲ್ ಇಮಾರತ್
ತೈಯಾರ ಕರದ್.

ಪಿದ್ವಿ ಕಿಲಾದಾರ ಮುಹಮ್ಮದ್‌ಖಾನ ಬಹಲ್ಲಮಿ ನಿಹಾರಂದರ್ ಸುಲ್ತಾನ ಬಾಬ'.[೧] ಗುಡ್ಡದ ಮೇಲೆ ಅರ್ಧಕ್ಕೆ ಏರಿದ ಕೋಟೆಯಲ್ಲಿ ನಿಂತು ನೋಡಿದಾಗ ಜೋಗಿ ಬಂಡೆಯ ಕೆಳಗಡೆಯಲ್ಲಿರುವ ಶಿವದೇವಾಲಯ ಮತ್ತು ಅಲ್ಲಿ ಕೆಲವು ಮನೆಗಳನ್ನು ಕಾಣಬಹುದು. ನಾಲ್ಕನೇ ಬಾಗಿಲಿನ ಬಳಿ ಎಲ್ಲಮ್ಮ ಶಕ್ತಿ(ದುರ್ಗಾ) ದೇವತೆಯ ಚಿಕ್ಕ ದೇವಾಲಯವಿದೆ. ಇಡೀ ಕೋಟೆಯಲ್ಲಿ ಸ್ವಚ್ಛತೆಯ ಬಗ್ಗೆ ನಿಗಾ ವಹಿಸಿದ್ದು ಕಂಡು ಬರುತ್ತದೆ. ಕಾರಣ ಪರಿಸರ ಮಾಲಿನ್ಯವಾಗದಂತೆ ಅಂದಿನ ಜನ ಕಾಪಾಡಿದ್ದಾರೆ.

ಈ ಕೋಟೆಯಲ್ಲಿನ ಕೆಳಗಿನ ಕೋಟೆಯಲ್ಲಿನ ಶಾಸನವು ಸಭಾಂಗಣ, ಪಾನಿಮಹಲ್ ನಂತಹ ಸುಂದರ ಕಟ್ಟಡಗಳಿದ್ದ ಬಗ್ಗೆ ವಿವರ ಹೇಳುತ್ತದೆಂದು ತಜ್ಞರ ಅಭಿಪ್ರಾಯ. ಈ ಶಾಸನವು ಇಂದು ಕೊಪ್ಪಳದ ಪ್ರಧಾನ ಅಂಚೆ ಕಛೇರಿಯಲ್ಲಿದೆ.[೨]

---

೧) ಸರ್ ಅಲೆಗ್ಝಾಂಡರ್, ಪಿ.ಪಿನಹೆ :- ೧೯೧೬- 'ಕೊಪ್ಪಳನಗರ ಮತ್ತು ಕೋಟೆ 'ದಿ ಜರ್ನಲ್ ಆಫ್ ಹೈದ್ರಾಬಾದ್ ಅರ್ಕಾಲಜಿಕಲ್ ಸೋಸಾಯಿಟಿ' ಆಂದ್ರಪ್ರದೇಶ (ಹಿಂದಿನ ಹೈದ್ರಾಬಾದ) ಸರಕಾರ ಭಾಗ-೫ ಶಾ.ಸಂ.೨, ಪು-೯೬. ಮತ್ತು ಬಿ.ಸಿ. ಪಾಟೀಲ - ಕೊಪ್ಪಳ ಸಾಂಸ್ಕೃತಿಕ ಪರಂಪರೆ-ಪು-೫೩-೧೯೯೮

೨) ____________ಸದರ____________ - ಪುಟ-೫೯-೧೯೯೮

## ಹೈದರಾಬಾದು ಕನ್ನಡ ಪ್ರದೇಶ

**ಚಾರಿತ್ರಿಕ ಹಿನ್ನೆಲೆ:-** ಕಲ್ಯಾಣದ ಶಿವಶರಣರಿಗೆ ನೆಲೆಬೀಡಾಗಿದ್ದ ಕಲಬುರ್ಗಿ ವಿಭಾಗವು ಇಂದು 'ಹೈದರಾಬಾದ್ ಕನ್ನಡ ಪ್ರದೇಶ' ಎಂದು ಹೆಸರಾಗಿದೆ. ನೈಜಾಮನ ಆಡಳಿತಕ್ಕೆ ಒಳಪಟ್ಟ ಇಂದಿನ ಬೀದರ, ಕಲಬುರ್ಗಿ, ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳೂ ಹೈದರಾಬಾದ ಕನ್ನಡ ಪ್ರದೇಶದಲ್ಲಿ ಸಮಾವೇಶವಾಗುತ್ತವೆ.

ಈ ಪ್ರದೇಶವು ಹಿಂದಿನಿಂದಲೂ ಕರ್ನಾಟಕದ ಆಳರಸರ ನೆಲವೇ ಆಗಿತ್ತು. ರಾಷ್ಟ್ರಕೂಟರು (ಕ್ರಿ.ಶ.೭೪೨-೯೭೩) ಕಲ್ಯಾಣದ ಚಾಲುಕ್ಯರು (ಕ್ರಿ.ಶ. ೯೭೩-೧೧೮೫), ಕಳಚೂರಿಯರ (ಕ್ರಿ.ಶ.೧೦೫೭-೧೧೮೪) ಯಾದವರು (ಕ್ರಿ.ಶ. ೧೧೮೯-೧೩೧೨), ಅಲ್ಲದೇ ಹಲವಾರು ಸಾಮಂತಾಧಿಪತಿಗಳು ಈ ನಾಡನ್ನು ಆಳಿದ ಉಲ್ಲೇಖವಿದೆ. ಈ ಪ್ರದೇಶದಲ್ಲಿ ಸಿಕ್ಕುವ ವಿಫುಲ ಶಾಸನಗಳು ನಮಗೆ ಈ ಬಗೆಗೆ ಆಧಾರಗಳನ್ನೊದಗಿಸುತ್ತವೆ.[೧]

ಗುಲ್ಬರ್ಗಾದ ಪೂರ್ವಕ್ಕೆ ಸುಮಾರು ೩೫ ಕಿ.ಮೀ.ಗಳ ಅಂತರದಲ್ಲಿರುವ ಮಳಖೇಡ, ಅಂದಿನ' ಮಾನ್ಯಖೇಟವು ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಕ್ರಿ.ಶ.೮೧೪ ರಲ್ಲಿ ಮೂರನೇ ಗೋವಿಂದನ ಮಗನಾದ ಅಮೋಘವರ್ಷನು ಮಾನ್ಯಖೇಟವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯಭಾರವನ್ನು ಮಾಡಿದನು. ಅದರಂತೆ ಗುಲ್ಬರ್ಗಾದ ಉತ್ತರದಲ್ಲಿರುವ ಕಲ್ಯಾಣವು ಚಾಳುಕ್ಯರ ಅರಸ ಒಂದನೆಯ ಸೋಮೇಶ್ವರ (ಕ್ರಿ.ಶ.೧೦೪೩) ನ ಕಾಲಕ್ಕೆ ಚಾಳುಕ್ಯರ ರಾಜಧಾನಿಯಾಗಿತ್ತು. ಮುಂದೆ ಕಳಚೂರಿಯ ಅರಸರು ಇಲ್ಲಿ ಕೆಲಕಾಲ ರಾಜ್ಯವಾಳಿದರು. ಈ ಅರಸರಲ್ಲಿ ಬಿಜ್ಜಳನ.

---

೧) ಪಿ.ಬಿ.ದೇಸಾಯಿ-ಕೊಪ್ಪಳ ಜಿಲ್ಲಾ ಶಾಸನಗಳು-ಮತ್ತು A.P.Archaeological serees. Vol.No.3,9-1954

೨) ಪಿ.ಬಿ.ದೇಸಾಯಿ-ಪ್ರಾಚೀನ ಭಾರತದ ಚರಿತ್ರೆ- ೧೯೭೩.ಪು-೩೫೨

ಆಳ್ವಿಕೆಯಲ್ಲಿಯು (ಕ್ರಿ.ಶ.೧೧೩೦-೧೧೬೭) ಅಂದು ನಡೆದ ವೀರಶೈವ ಧಾರ್ಮಿಕ ಚಳುವಳಿಯ ದೃಷ್ಟಿಯಿಂದ ಉಲ್ಲೇಖನಾರ್ಹವಾದದ್ದು.

ಕನ್ನಡಿಗರ ರಾಜಕೀಯ ಪರಂಪರೆ ಹೀಗೇ ಮುಂದುವರೆದಿದ್ದು ಹೈದರಾಬಾದು ಕನ್ನಡ ಪ್ರದೇಶವು ಇಂದಿನಂತೆ ಸಾಂಸ್ಕೃತಿಕವಾಗಿ ಹಿಂದುಳಿಯುತ್ತಿರಲಿಲ್ಲವೆಂದು ಊಹಿಸಬಹುದು. ಈ ಪ್ರದೇಶವು ಉತ್ತರದ ಮಹಮ್ಮದೀಯರ ದಾಳಿಗಳ ತೀವ್ರಾಘಾತಗಳಿಗೊಳಗಾಯಿತು. ಅನಂತರದಲ್ಲಿ ಇದು ಬಹಮನಿ ಸುಲ್ತಾನರ ಹಾಗೂ ನೈಜಾಮ ಅರಸರ ಆಳ್ವಿಕೆಯಲ್ಲಿ ವಿಲೀನಗೊಂಡು ಈ ನಾಡಿನ ರಾಜಕೀಯ, ಸಾಂಸ್ಕೃತಿಕ ಚರಿತ್ರೆಯಲ್ಲಿ ವಿಪತ್ಕಾಲದ ಹಲವು ಸನ್ನಿವೇಶಗಳನ್ನು ಕಾಣುವಂತಾಯಿತು.

<u>ನೈಜಾಮ ರಾಜ್ಯ</u> :- ಬಹಮನಿ ರಾಜ್ಯದ ಪತನವಾದನಂತರ ಅಲ್ಪ ಸಮಯದಲ್ಲಿಯೇ ದಕ್ಷಿಣಾಪಥವು ಮೊಘಲ್ ಸುಲ್ತಾನರ ಆಳ್ವಿಕೆಗೆ ಆಧೀನವಾಗಬೇಕಾಯಿತು. ಅಲ್ಲಿಂದ ಮುಂದೆ ನೈಜಾಮರು ಈ ಭಾಗವನ್ನು ತಮ್ಮ ವಶಕ್ಕೆ ತೆಗದುಕೊಂಡು ಆಳತೊಡಗಿದರು. ಹೈದರಾಬಾದ ಅರಸು ನಿಜಾಮನ ಆಡಳಿತ ಹಾಗೂ ವಂಶಾವಳಿಯನ್ನು ಇಲ್ಲಿ ಕೊಡಲಾಗಿದೆ.

## <u>ಹೈದರಾಬಾದ ಅರಸು ನಿಜಾಮನ ಆಡಳಿತ ಹಾಗೂ ವಂಶಾವಳಿ</u>

ಮುಘಲರ ಅರಸು ಮುಹಮ್ಮದಶಹಾನು ಕ್ರಿ.ವ.೧೭೭೯ ರಲ್ಲಿ ದಿಲ್ಲಿ ಸಿಂಹಾಸನವೇರಿದನು. ಈ ಅರಸು ಅಶಫಜಾಹ ವಂಶದ ಮೀರಕಮರುದ್ದೀನನ್ನು ನಿಜಾಮ ಉಲ್‌ಮುಲ್ಕ್ ಎಂದು ಕರೆದು ಮೊಘಲರ ದಕ್ಷಿಣ ಭಾರತದ ಸುಬೇದಾರನೆಂದು ನಿಯಮಿಸಿ ಅವರ ಸುಭಾ ಔರಂಗಾಬಾದಿಗೆ ಕಳುಹಿಸಿದನು. ಮುಹಮ್ಮದಶಾಹನು ವಿಲಾಸಿ ಜೀವನ ಮತ್ತು ರಾಜ್ಯದ ವ್ಯವಹಾರದಲ್ಲಿ ಅಲಕ್ಷತನ ಅರಾಜಕತೆಗೆ ಎಡೆಮಾಡಿದವು. ಅರಸು ಮುಹಮ್ಮದನ ಆಜ್ಞೆಯಂತೆ ದಿಲ್ಲಿಗೆ ಮೀರಕಮರುದ್ದೀನನು ಬಂದು ಕ್ರಿ.ಶ. ೧೭೨೨ರಲ್ಲಿ ಅವನು ಪ್ರಧಾನಿಯಾದನು. ಇತ್ತ ಸುಬಾದಲ್ಲಿ ದಂಗೆ ಏಳಲು ಔರಂಗಾಬಾದಿಗೆ ಕಮುರುದ್ದೀನನು ಮರಳಿ ದಂಗೆಗಳನ್ನು ಹತ್ತಿಕ್ಕಿ ಶಾಂತಿ ನೆಲೆಸಿದನು. ಮೊಘಲ ಸುಬಾಬೆಂಗಾಲದ ಸುಬೇದಾರ ಅಲೀವರ್ದಿಖಾನ ಸ್ವತಂತ್ರನಾದನು. ಔಂಧದ (ಅಯೋಧ್ಯಾ) ಸುಬೇದಾರ ಸಾದತಖಾನನು ಸ್ವತಂತ್ರನಾದನು. ಅಂತೆಯೇ ಮೀರ ಕಮರುದ್ದೀನ್ ನಿಜಾಮನು ಉಲ್-ಮುಲ್ಕ್ ಅಂತಾ ಕ್ರಿ.ವ. ೧೭೪೫ರಲ್ಲಿ ಸ್ವತಂತ್ರನೆಂದು ಸಾರಿದನು.

## ಅರಸು ನಿಜಾಮನ ವಂಶ ವೃಕ್ಷ

(೧೭೨೪ ರಿಂದ ೧೯೪೮ ಸಪ್ಟಂಬರ )

| | |
|---|---|
| ೧. ಮೀರ ಕಮರುದ್ದೀನ ನಿಜಾಮ ಉಲ್-ಮುಲ್ಕ | ೧೭೨೪-೧೨೪೮ |
| ೨. ನಿಜಾಮ ಅಲಿಖಾನ್ | ೧೭೬೨-೧೮೦೩ |
| ೩. ಮೀರ ಅಕ್ಬರ ಅಲಿಖಾನ ಸಿಕಂದರೆ ಬಹದ್ದೂರ | ೧೮೦೩-೧೮೨೯ |
| ೪. ಮೀರ ಅಲಿಖಾನ ನಾಸೀರುದ್ದಾಲಾ ಬಹಾದ್ದೂರ | ೧೮೨೯-೧೮೫೭ |
| ೫. ಮೀರ ಅಲಿಖಾನ ಅಫ್ಜುಲುದ್ದಾರಾ ಬಹದ್ದೂರ | ೧೮೫೭-೧೮೬೩ |
| ೬. ಮೀರ ಮೆಹಬೂಬಿ ಅಲಿಖಾನಬಹದ್ದೂರ | ೧೮೬೯-೧೯೧೧ |
| ೭. ಮೀರ ಉಸ್ಮಾನ ಅಲಿಖಾನಬಹಾದ್ದೂರ | ೧೯೧೧-೧೯೪೮ |

---

**ಆಧಾರ** ;- "A History of Deccan,, ದಲ್ಲಿ ಕೊಟ್ಟಿರುವ ವಂಶವೃಕ್ಷವನ್ನಾಧರಿಸಿ,
ಡಾ॥ S.M. ಹಿರೇಮಠ,=ಶರಣಬಸವೇಶ್ವರರು ಹಾಗೂ ಅವರ ಪರಿಸರದ ಸಾಹಿತ್ಯ=ಪುಟ-೧೧,-
೨೦೦೦

**ಕೊಪ್ಪಳ ಜಿಲ್ಲೆ, ಐತಿಹಾಸಿಕ ಹಿನ್ನೆಲೆ.**

೧೯೯೭ ರಲ್ಲಿ ಕರ್ನಾಟಕ ರಾಜ್ಯದಲ್ಲಿ ಜಿಲ್ಲೆಗಳ ವಿಂಗಡಣೆಯಾದ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯಿಂದ ಬೇರ್ಪಟ್ಟು, ಕೊಪ್ಪಳ, ಗಂಗಾವತಿ, ಯಲಬುರ್ಗಾ ಹಾಗೂ ಕುಷ್ಟಗಿ ತಾಲ್ಲೂಕುಗಳನ್ನು ಒಳಗೊಂಡು 'ಕೊಪ್ಪಳ ಜಿಲ್ಲೆಯು' ಉದಯವಾಯಿತು. ಗದಗ, ಬಾಗಲಕೋಟೆ, ರಾಯಚೂರ ಹಾಗೂ ಬಳ್ಳಾರಿ ಜಿಲ್ಲೆಗಳಿಗೆ ಹೊಂದಿಕೊಂಡಿರುವ ಈ ಜಿಲ್ಲೆಯು ತನ್ನದೇ ಆದಂತಹ ಸಂಸ್ಕೃತಿಯನ್ನು ಹೊಂದಿದೆ.

ಕರ್ನಾಟಕದ ಇತಿಹಾಸದ ಪುಟಗಳಲ್ಲಿ ಅಮರವಾಗಿ ರಾರಾಜಿಸುವ ಬಾದಾಮಿಯ ಚಾಲುಕ್ಯರು (೫೪೦-೭೫೭), ರಾಷ್ಟ್ರಕೂಟರು (೭೫೭-೯೭೩), ಕಲ್ಯಾಣದ ಚಾಲುಕ್ಯರು (೯೭೩-೧೧೮೪), ವಿಜಯನಗರದ ಅರಸರ (೧೩೩೬-೧೫೬೫) ಆಳ್ವಿಕೆಯಲ್ಲಿ ಒಂದು ಪ್ರಮುಖ ಭಾಗವಾಗಿ ಕೊಪ್ಪಳ ಪ್ರಾಂತವು ಹೆಸರು ಪಡೆದಿತ್ತು. ಇಂತಹ ಪ್ರಸಿದ್ಧ ನಾಡಿನಲ್ಲಿ ಆನೆಗುಂದಿ ಸಂಸ್ಥಾನ ಹೆಚ್ಚು ಹೆಸರು ಮಾಡಿತ್ತು. ಅದೇ ರೀತಿ ಕುರುಗೋಡು ಸಿಂದರು (ಹನ್ನೊಂದನೇ ಶತಮಾನ ) ಯಲುಬುರ್ಗಾ ಪಾಳೆಯಗಾರರು, ಮತ್ತು ಕೊಪ್ಪಳದ ಪಾಳೆಯಗಾರರು, ಕೊಪ್ಪಳವನ್ನಾಳಿದ ಕಂಪಿಲನ ಕುಮಾರರಾಮನು ಈ ನಾಡನ್ನು ಪ್ರಸಿದ್ಧಿಗೊಳಿಸಿದರು. ಫಲವತ್ತಾದ ಭೂ ಪ್ರದೇಶವನ್ನು ಹೊಂದಿದ್ದ ಈ ಎಡದೊರೆಯ ನಾಡು ಸಾಂಸ್ಕೃತಿಕ ಹಾಗೂ ಧಾರ್ಮಿಕವಾಗಿ ಹೆಚ್ಚು ಹೆಸರು ಪಡೆದಿದೆ.

ಬಳ್ಳಾರಿ ಜಿಲ್ಲೆಯಿಂದ ಬೇರ್ಪಡಿಸುವ ತುಂಗಭದ್ರಾ ನದಿ ಹರಿದು ಈ ಕೊಪ್ಪಳ ನಾಡನ್ನು ಪಾವನಗೊಳಿಸಿದೆ. ತುಂಗಭದ್ರಾ ಜಲಾಶಯದಿಂದ ಗಂಗಾವತಿ, ಮತ್ತು ಕೊಪ್ಪಳದ ಕೆಲವು ಭಾಗಗಳು ಆರ್ಥಿಕವಾಗಿ ಬೆಳೆಯಲು ನೀರಾವರಿ ಅನುಕೂಲತೆಯಿಂದ ಅಭಿವೃದ್ಧಿಗೊಂಡಿವೆ. ಅದೇ ರೀತಿ ಅಪರೂಪದ ಕಲ್ಲುಗಣಿಗಳಿಂದ ಈ ಜಿಲ್ಲೆ ಆರ್ಥಿಕ ಆದಾಯದ ಮೂಲವಾಗಿ ಜಿಲ್ಲೆಯನ್ನು ಶ್ರೀಮಂತಗೊಳಿಸಿದೆ.

ಈ ಜಿಲ್ಲೆಯು ಧಾರ್ಮಿಕವಾಗಿಯೂ ಹೆಸರು ಮಾಡಿದೆ. ಕೊಪ್ಪಳವು ಮಹಾಭಾರತದಲ್ಲಿ ತನ್ನ ಚರಿತ್ರೆಯನ್ನು ಗುರುತಿಸಿಕೊಂಡಿದೆ. ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯಲು

ತಪಸ್ಸು ಮಾಡಿದ ಇಂದ್ರಕೀಲ ಪರ್ವತ, ಇಲ್ಲಿಯ ಪರ್ವತದ ಸಾಲುಗಳಲ್ಲಿ ಒಂದಾಗಿದೆ. ಇದನ್ನು ಇಂದಿಗೂ ಅರ್ಜುನನು ತಪಸ್ಸುಮಾಡಿದ ಸ್ಥಳವೆಂದು ಗುರುತಿಸಲಾಗಿದೆ. ಕೊಪ್ಪಳ, ತಡಕಲ್ಲು, ಹೆಬ್ಬಾಳ ಮುಂತಾದ ಕಡೆ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳು ದೊರೆತಿವೆ.

## ಬೇಟೆಯ ನೋಟ

ಸ್ಥಳೀಯರು ಕರೆಯುವ ಗವಿಮಠ ಗುಡ್ಡದ ದಕ್ಷಿಣ ತುದಿಯಲ್ಲಿರುವ ಅಶೋಕನ ಶಾಸನದ ಈಶಾನ್ಯಕ್ಕೆ ಮತ್ತು ಗವಿಮಠ ಶ್ರೀಗಳವರು ಧ್ಯಾನಾಸಕ್ತರಾಗಿ ಕುಳಿತುಕೊಳ್ಳುವ ತಾಣದಿಂದ ಉತ್ತರಕ್ಕೆ ಕಿರಿ ಅಂತರದಲ್ಲಿದ್ದ ಪಲ್ಲಕ್ಕಿ ಆಕಾರದ ಬಂಡೆಯು ಎರಡು ತುದಿಗಳು ಕೆಳಗಿನ ಅಖಂಡ ಬಂಡೆಗೆ ಹತ್ತಿರ ಅವೆರಡು ಮಧ್ಯಂತರ ಪೊಳ್ಳು ಅತಿ ಕಿರಿದಾಗಿರುವುದರಿಂದ, ಪಲ್ಲಕ್ಕಿ ಆಕಾರದ ಬಂಡೆಯ ಒಡಲಲ್ಲಿರುವ ಚಿತ್ರಗಳನ್ನು ಮೇಲ್ಮುಖವಾಗಿ ಮಲಗಿ ನೋಡಲು ಮಾತ್ರ ಸಾದ್ಯ. ಬೇಟೆಗಾರನು ಬಿಟ್ಟ ಬಾಣ ಮುನ್ನಡೆದಿದೆ. ಗಾಯಗೊಂಡ ಜಿಂಕೆ ನೆಲಕಚ್ಚಿದೆ. ಉಳಿದ ಪ್ರಾಣಿಗಳು ಪ್ರಾಣ ಭಯದಿಂದ ಓಡಾಡುತ್ತಿವೆ. ಬಿಲ್ಲಿನ ಹೆದೆಯನ್ನೇರಿಸಿ ನಿಂತ ಬೇಟೆಗಾರನು ಬನ್ನಿ 'ಬನ್ನಿ ಬೇಟೆಯಾಡೋಣ' ಎಂದು ಕರೆಯುತ್ತಾನೆ. ಈ ಚಿತ್ರದಲ್ಲಿ ಮಾನವನು ಕಲ್ಲಿನ ಕೊಡಲಿಗೆ ಪ್ರತಿಯಾಗಿ ಬಿಲ್ಲು ಬಾಣಗಳನ್ನು ಉಪಯೋಗಿಸಿರುವುದು ಅಂದಿನ ಮಾನವನ ಬದುಕಿನ ವಿಕಾಸ ತಿಳಿಸುತ್ತಿದೆ. ಮತ್ತು ಈ ಚಿತ್ರ ಬೃಹತ್ ಶಿಲಾಯುಗದ ಮುಂದಣ ಕಬ್ಬಿಣ ಬೃಹತ್ ಶಿಲಾಯುಗದ ಹಂತದ ಮುನ್ಸೂಚನೆಯನ್ನು ತಿಳಿಸುತ್ತದೆ.

## ಗವಿಮಠದ ಬೆಟ್ಟದಲ್ಲಿ
## ವಿವಿಧ ಪ್ರಾಣಿಗಳ ರೇಖಾ ಚಿತ್ರಗಳು.

ಸ್ಥಳೀಯರು ಕರೆಯುವ ಗವಿಮಠದ ಬೆಟ್ಟದ ಮಧ್ಯದ ಪೂರ್ವ ಅಂಚಿನಲ್ಲಿ ಭೂಮಟ್ಟದಿಂದ ಸುಮಾರು ೫ ಮೀಟರ್ ಎತ್ತರದಲ್ಲಿರುವ ವಿಶಾಲವಾದ ಉದ್ದನೆಯ ಗವಿಯಲ್ಲಿ ವಿವಿಧ ಪ್ರಾಣಿಗಳ ಚಿತ್ರಗಳಿವೆ. ಕೋಣ, ಜಿಂಕೆ, ಗೂಳಿ, ಆಕಳು, ಮೊಲ, ಟಗರು, ಕುದುರೆ, ವಿವಿಧ ಬಂಗಿಯಲ್ಲಿ ಎತ್ತುಗಳು ಇವೆಲ್ಲ ಮೂಡಿ ಬಂದಿವೆ. ಶಿಲಾಯುಗದ ಮಾನವರು ಇವೆಲ್ಲವುಗಳನ್ನು ಯಥಾವತ್ತಾಗಿ ಚಿತ್ರಿಸಿರುವರು. ಈ ಚಿತ್ರದಲ್ಲಿರುವ ಎಲ್ಲಾ ಪ್ರಾಣಿಗಳು ಒಂದಕ್ಕಿಂತ ಹೆಚ್ಚಿನ ಸಾಂಸ್ಕೃತಿಕ ಹಂತದಲ್ಲಿದ್ದವುಗಳಾಗಿವೆ. ಶೈಲಿ ಮತ್ತು ಲಕ್ಷಣಗಳ ದೃಷ್ಟಿಯಿಂದ ಜಿಂಕೆ, ಗೂಳಿ,

ನೂತನ ಶಿಲಾಯುಗಕ್ಕೆ ಸೇರಿದವುಗಳೆಂದು ಹೇಳಬಹುದು. ಇವುಗಳಲ್ಲಿ ಕುದುರೆ ಆಕಾರದ ಚಿತ್ರ ಸಂಚಾರಿ ಜನಾಂಗದವರು ಇದ್ದರೆಂದು ತಿಳಿಸುತ್ತಿದೆ. ಇವೆಲ್ಲ ಚಿತ್ರಗಳು ಒಂದೆಡೆ ಕೆಲ ಅಂತರದಲ್ಲಿ ಚಿತ್ರಿಸಿರುವುದರಿಂದ ವಿವಿಧ ಹಂತಗಳ ಅಂದಿನ ಮಾನವನ ಸಂಸ್ಕೃತಿಯು ಪ್ರಗತಿಯಾದುದನ್ನು ತಿಳಿಸುತ್ತಿವೆ. ಕೊಪ್ಪಳದಿಂದ ಸುಮಾರು ೩೦ ಕೀ.ಮೀ. ಅಂತರದಲ್ಲಿರುವ ಬಿಳೆಭಾವಿ, ಹಿರೇಬೆಣಕಲ್ ಇಲ್ಲಿ ರೇಖೆಗಳಲ್ಲಿ ಪ್ರಾಣಿಗಳ ಚಿತ್ರಗಳಿವೆ. ಆದರೆ ಕೊಪ್ಪಳದಲ್ಲಿರುವ ರೇಖೆಯಲ್ಲಿರುವ ಪ್ರಾಣಿಗಳ ಚಿತ್ರ ಬೇರೆಡೆ ಇನ್ನೂವರೆಗೆ ಕಂಡು ಬಂದಿಲ್ಲವೆಂದು ಸಂಶೋಧಕರು ಅಭಿಪ್ರಾಯ ಪಟ್ಟಿರುವರು. ಈ ಪ್ರಾಣಿಗಳು ಪಶು ಸಂಗೋಪನ, ಸಂಚಾರಿ ಜೀವನ, ಮತ್ತು ಬೇಸಾಯ ಹಂತಗಳನ್ನು ತಿಳಿಸುತ್ತವೆ. ಇವೆಲ್ಲವುಗಳು ಕೆಮ್ಮಣ್ಣು ಬಣ್ಣದ ರೇಖೆಗಳಲ್ಲಿ ಇವೆ. ಇವು ಹದಿನೇಳು ಇರುತ್ತವೆ.

## ಕುದುರೆ, ಎತ್ತುಗಳು

ಗವಿಮಠದ ಗಿರಿಯ ದಕ್ಷಣ ತುದಿಯಲ್ಲಿ ಅಶೋಕನ ಶಾಸನವಿರುವ ತಾಣ ಭೂ ಮಟ್ಟದಿಂದ ಸುಮಾರು ೫೦ ಮೀ. ಎತ್ತರದಲ್ಲಿದೆ. ಈ ಶಾಸನದ ಈಶಾನ್ಯಕ್ಕೆ ಗುಂಡುಗಳ ಬೆಡಗಿನಲ್ಲಿರುವ ನೀಲವಾದ ಗುಂಪೊಂದರ ಒಡಲನ್ನು ಸೀಳಿ ಅಲ್ಲಿ ಹುಲಿಯ ಚಿತ್ರ ಬಿಡಿಸಿರುವರು. ಈ ಚಿತ್ರದ ಕೆಳಗೆ ಕುದುರೆ ಮತ್ತು ಎರಡು ಎತ್ತುಗಳನ್ನು ರೇಖೆಯಲ್ಲಿ ಚಿತ್ರಿಸಿರುವರು. ಒಂದು ಎತ್ತಿನ ಕೊಂಬು ಎತ್ತಿನ ಸೌಂದರ್ಯ ನೀಡಿವೆ. ಇನ್ನೊಂದು ವಯಸ್ಸಾದ ಎತ್ತು ಬೆಡಗಿನಿಂದ ಮುನ್ನಡೆಯುತ್ತಿದೆ. ನಿರೂಪಣೆ ಇಳಿ ವಯಸ್ಸಿನ ಮತ್ತು ವಯಸ್ಸಿನ ಎತ್ತು ಎಂದು ತೋರಿಸುತ್ತದೆ.

**ಬಸದಿಗಳ ಬೀಡು** :- ಕೊಪ್ಪಳವು ತೀರ್ಥಕ್ಷೇತ್ರ ಆದಿ ತೀರ್ಥ, ಮಹಾತೀರ್ಥ ಎಂದು ಎನಿಸಿ ಕೊಂಡಂತೆಯೇ ಬಸದಿಗಳ ಬೀಡು ಎಂದು ಹೆಸರು ವಾಸಿಯಾಗಿದೆ. ಸ್ಥಳೀಯ ಐತಿಹ್ಯಗಳೂ ಲಭ್ಯಪೂರಕ ಆಕರಗಳೂ ಈ ಸಂಗತಿಯ ಸತ್ಯಕ್ಕೆ ಕನ್ನಡಿ ಹಿಡಿದಿವೆ.[೧] ಕೊಪ್ಪಳದ ಬಸದಿಗಳನ್ನು ಕುರಿತು ಈಗಾಗಲೇ ಅಚ್ಚಾಗಿರುವ ಬರಹಗಳಲ್ಲಿ ಪ್ರಸ್ತಾಪನೆಗಳು ಇವೆ. ಅಲ್ಲದೇ ಹಿಂದಿನ ಶಾಸನಗಳಲ್ಲಿ ನಮೂದಾಗಿರುವ ಪ್ರಾಚೀನ ಉಲ್ಲೇಖಗಳನ್ನು ಉದಾಹರಿಸಲಾಗಿದೆ. ಅವುಗಳಲ್ಲಿನ ವಿಶೇಷವೆಂದರೆ ಯಾವುದೇ ಊರು, ಕೇರಿ, ನಗರ, ಪಟ್ಟಣ ರಾಜಧಾನಿಗಳಲ್ಲಿ ಸುಂದರ ಬಸದಿಗಳನ್ನು ಕಟ್ಟಿಸಿದರೆ ಜನರ ಪ್ರತಿಕ್ರಿಯೆ “ಆಹಾ ಇದು ಕೊಪಣದಂತಿದೆ” ಎಂಬುದಾಗಿರುತ್ತಿತ್ತು. ಗಂಗವಾಡಿ ತೊಂಭತ್ತಾರು ಸಾವಿರದಲ್ಲಿನ ಇಂತಹ ಜಿನಾಲಯ ಪುನರುತ್ಥಾನ ಪ್ರಕ್ರಿಯೆಯಲ್ಲಿ ತೊಡಗಿದ ಗಂಗರಾಜನು ಗಂಗವಾಡಿ ನಾಡನ್ನು ಕೊಪಣದಂತೆ ಜಿನ ಮಂದಿರಗಳಿಂದ ಕಂಗೊಳಿಸಿದನು ಎನ್ನಲಾಗಿದೆ.

---

೧) ಹಂಪ ನಾಗರಾಜಯ್ಯ - ಕೊಪ್ಪಳದ ಶಾಸನಗಳು ೧೯೯೮ ಪು-೭

ಬೊಪ್ಪ-ಬಾಗಣಬ್ಬೆ ಗಂಗನಾಯಕನ ಮಗ ಮತ್ತು ಗಂಗರಾಜ ದಂಡಾಧಿಪತಿಯ ಮೊಮ್ಮಗ ಏಚ ದಂಡಾಧೀಶನು ಶ್ರವಣ ಬೆಳಗೊಳದ ಬಸದಿಗಳು ಕೊಪಣದ ಬಸದಿಗಳಂತೆ ಫಳ ಫಳ ಹೊಳೆಯಿಸಿದನೆನ್ನಲಾಗಿದೆ. ಹುಳ್ಳ ಬಂಡಾರಿಯಂತೂ ಮಹಾತೀರ್ಥ ಕೊಪಣದಲ್ಲಿ ಹೇರಳವಾಗಿ ಹೊನ್ನನ್ನು ಇತ್ತು ಭೂಮಿಯನ್ನು ಕೊಂಡು ಅದನ್ನು ಅಲ್ಲಿನ ಜಿನಾಲಯಗಳಿಗೂ, ಸವಣ ಸಂಘದ ಆಹಾರ ದಾನಕ್ಕೂ ಸಮರ್ಪಿಸಿ ಪ್ರಶಂಸಿತನಾದನು.

ಹೀಗೆ ಕೊಪಣೇತರ ಶಾಸನಗಳಲ್ಲಿ ಕೊಪ್ಪಳದ ಬಸದಿಗಳ ಹತ್ತಾರು ಉಲ್ಲೇಖಗಳಿದ್ದು ಅವೆಲ್ಲವೂ ಏಕ ಕಂಠದಿಂದ ಇಲ್ಲಿನ ಜಿನಗೃಹಗಳ ಹಿರಿಮೆಯನ್ನು ಹಾಡಿವೆ. ವಿದ್ವಾಂಸರು ಇದುವರೆಗೂ ಸೂಚಿಸಿರುವ ಪ್ರಕಾರ ಕೊಪ್ಪಳದಲ್ಲಿ ಅರಸಿಯ ಬಸದಿ, ಕುಶ ಜಿನಾಲಯ, ಚಂದ್ರನಾಥ ಬಸದಿ, ಜಯಧೀರ ಜಿನಾಲಯ, ತಿಮಂಬರಸಿಯ ಬಸದಿ, ತೀರ್ಥದ ಬಸದಿ, ಶಾಂತಿನಾಥ ಬಸದಿ ಇತ್ಯಾದಿಗಳು ಇದ್ದುವು.

೧೬-೧೭ನೇ ಶತಮಾನದ ವರೆಗೂ ಕೊಪಣವು ಜೈನರ ತೀರ್ಥ ಕ್ಷೇತ್ರವಾಗಿ ಮುಂದುವರೆದಿತ್ತು ಎಂಬುದಕ್ಕೆ ತಕ್ಕ ಸಾಕ್ಷಿ ಪುರಾವೆಗಳು ಶಾಸನಗಳಲ್ಲಿವೆ. ಸಕಲ ಕಲಾ ಪ್ರವೀಣ ಚಂದ್ರ ಕೀರ್ತಿ ದೇವರು ಮೂಲ ಸಂಘ ಇಂಗುಳೇಶ್ವರ ಬಳಿಗೆ ಸೇರಿದ ಶುಭ ಚಂದ್ರ ದೇವರ ಪ್ರಮುಖ ಶಿಷ್ಯರು. ಇಲ್ಲಿ ಚಂದ್ರಪ್ರಭ ಪ್ರತಿಮೆ ಮಾಡಿಸಿದ್ದು ಸುಮಾರು ೧೪೦೦ ರಲ್ಲಿ. ವಾದಿ ವಿದ್ಯಾನಂದರು ತಮ್ಮ ಜಿನ ಧರ್ಮ ಪ್ರಭಾವನೆ ಪೂಜೆ ಉತ್ಸವಗಳನ್ನು ಕೊಪಣದಲ್ಲಿ ಮಾಡಿಸಿದ್ದು ೧೫೩೦ ರಲ್ಲಿ. ಆದರೆ ಆ ವೇಳೆಗೆ ಕೊಪಣದಲ್ಲಿಯ ಜಿನಾಲಯ ಒಂದು ಚೆನ್ನಕೇಶವ ದೇವಾಲಯವಾಗಿ ಮತಾಂತರವಾಗಿತ್ತು. ವಿಜಯ ನಗರ ಸಾಮ್ರಾಜ್ಯದ ಸೀಮಾ ಪ್ರದೇಶಗಳಲ್ಲಿ ಕೊಪ್ಪಳವು ಒಂದು. ಚಕ್ರವರ್ತಿ ಕೃಷ್ಣದೇವರಾಯನು ಕೊಪ್ಪಳ ಸೀಮೆಯ ನಾಯಕನನ್ನಾಗಿ ಭಂಡಾರಿ ತಿಮ್ಮಪ್ಪಯ್ಯ ನಾಯ್ಕನನ್ನು ನೇಮಿಸಿದ್ದನು. ಈತನು ೧೫೨೧ ರಲ್ಲಿ ಕೊಪಣದ ಚೆನ್ನಕೇಶವ ದೇವಾಲಯಕ್ಕೆ 'ಹಿರೇಸಿಂದೋಗಿ' ಗ್ರಾಮವನ್ನು ದತ್ತಿ ಇತ್ತನು. ಕೊಪ್ಪಳದಲ್ಲಿ ಜೈನ ದೇವಾಲಯವನ್ನು ಹಿಂದೂ ದೇವಾಲಯವಾಗಿ ಪರಿವರ್ತಿಸಿದ್ದು, ಅದಕ್ಕೆ ಅಧಿಕೃತವಾಗಿ ರಾಜ ಮನ್ನಣೆಯ ಮೊಹರು ಬಿದ್ದದ್ದು ಇದೇ ಪ್ರಥಮ. ಇದರಿಂದ ಪ್ರಚೋದಿತರಾದ ವೀರಶೈವ ಲಿಂಗಾಯತ ಮತ ಧರ್ಮದವರು ವಿಶಾಲವೂ, ವಿಖ್ಯಾತವೂ, ಪ್ರಾಚೀನವೂ ಆದ ಜೈನ ಧರ್ಮದ ಮಠವಾಗಿದ್ದ ಗವಿಮಠ ಪರಿಸರವನ್ನು ತಮ್ಮದಾಗಿಸಿಕೊಂಡರು. ಇದು ಸುಮಾರು ೧೭-೧೮ನೇ ಶತಮಾನದ ಅವಧಿಯಿಂದ ನಡೆದ ಬದಲಾವಣೆ.[೧]

೧) ಹಂಪ ನಾಗರಾಜಯ್ಯ - ಕೊಪ್ಪಳದ ಶಾಸನಗಳು ೧೯೯೮ ಪು-೭

## ಗಂಗರು ಮತ್ತು ಕೊಪ್ಪಳ

ಗಂಗರ ಸಂಬಂಧವು ರಾಜಕೀಯವಾಗಿ ಸಮಗ್ರ ಕರ್ನಾಟಕವನ್ನು ತಬ್ಬಿಕೊಂಡಿದೆ. ಆದರೆ ಧಾರ್ಮಿಕವಾಗಿ ಈ ನಂಟು ಕೆಲವು ನಿರ್ದಿಷ್ಠ ಸ್ಥಳಗಳಿಗೆ ನಿಕಟವಾಗಿ ಅಂಟಿಕೊಂಡಿದೆ. ಶ್ರವಣ ಬೆಳಗೊಳ, ತಲಕಾಡು, ಅಣ್ಣಿಗೇರಿ, ಹೊಂಬುಜ, ಮಂಡಲಿ, ಸಾಸಿರ ಪ್ರದೇಶ ಮತ್ತು ಕೊಪ್ಪಳ. ಇವು ಅವರಿಗೆ ಮುಖ್ಯ ಕ್ಷೇತ್ರಗಳಾಗಿ ತೀರ್ಥ ಕ್ಷೇತ್ರಗಳಾಗಿದ್ದವು. ಶ್ರವಣಬೆಳಗೊಳವು ಗಂಗವಾಡಿ ೯೬೦೦೦ ಪ್ರದೇಶದಲ್ಲಿತ್ತು. ಕೊಪ್ಪಳವು ಗಂಗವಾಡಿಯಲ್ಲಿರಲಿಲ್ಲ ಆದರೆ ಕೊಪ್ಪಳ ಅವರಿಗೆ ತುಂಬ ಹತ್ತಿರವಾದದ್ದು ೧೦ನೇಯ ಶತಮಾನದಲ್ಲಿ. ಗಂಗರ ದುರ್ವಿನೀತನು ಕೊಪ್ಪಳ ಸಮೀಪದ ಕೋಗಳಿಯಲ್ಲಿ ಒಂದು ಬಸದಿಯನ್ನು ಕಟ್ಟಿಸಿದ್ದು, ಅದು ಮತ್ತೆ ಜೀರ್ಣೋದ್ಧಾರವಾಗಿದ್ದು ಶಾಸನೋಕ್ತವಾಗಿದೆ. ರಾಷ್ಟ್ರಕೂಟರ ಸಾಮ್ರಾಜ್ಯ ಅಸ್ಥಿರವಾಗುತ್ತಾ ಅಲ್ಲಾಡ ತೊಡಗಿ ಕೊನೆಗೆ ಅಸ್ತಂಗತವಾಗಿದ್ದರ ಪರಿಣಾಮ ಪ್ರತಿಷ್ಠಿತ ಗಂಗರ ಕುಟುಂಬಗಳ ಮೇಲೆ ಗಾಢವಾಗಿ ಆಯಿತು. ಗಂಗರು ಒಬ್ಬರಾದ ಮೇಲೆ ಒಬ್ಬರು ಕೊಪ್ಪಳದಲ್ಲಿ ಬಂದು ಧಾರ್ಮಿಕ ಮರಣ ಪಡೆದರು ಗಂಗರ ರಾಜ – ರಾಣಿಯರು ಅನೇಕರು ಕೊಪ್ಪಳದಲ್ಲಿ ಅನೇಕ ಬಸದಿ ಕಟ್ಟಿಸಿ ಸಲ್ಲೇಖನ ವಿಧಿಯಿಂದ ಸಮಾಧಿ ಮರಣ ಪಡೆದದ್ದು, ಕೊಪ್ಪಳದ ಶಾಸನಗಳಿಂದ ತಿಳಿದು ಬರುತ್ತದೆ. [೧]

ಇದು ಗಂಗರ ಇತಿಹಾಸದ ಹಾಸಿಗೆ ಹೊಸ ಸಾಮಗ್ರಿಯ ಸೇರ್ಪಡೆ. ರಾಜಮಲ್ಲ, ಅರುಮೊಳಿ ದೇವ, ಮಾರಸಿಂಹ, ಲೋಕಾಧಿತ್ಯ, ಪದ್ಮಬ್ಬೆ, ಕುಂದಣಸಾಮಿ, ರೇವಕನಿಮ್ಮಡಿ, ಚಂಗಾಂಬೆ, ಬಿಜ್ಜಾಂಬಾ– ಮೊದಲಾದವರೆಲ್ಲ ಮುಡಿಪಿದ್ದು ಧಾರ್ಮಿಕ ವಿಧಿಯಿಂದ ಮತ್ತು ಇವರಲ್ಲಿ ಕೆಲವರು ಕೊಪ್ಪಳದಲ್ಲಿ ಬಂದು ಮುಡಿಪಿದ್ದಾರೆ. ಕ್ರಿ.ಶ. ೩–೪ನೇಯ ಶತಮಾನದ ವೇಳೆಗೆ ಗಂಗರು ಸಿಂಹ ನಂದಿ ಆಚಾರ್ಯರ ಮುಂದಾಳಿಕೆಯಲ್ಲಿ ಕರ್ನಾಟಕದಲ್ಲಿ ಹೆಜ್ಜೆ ಊರಿದರೆಂಬುದು ಖಚಿತವಾಗಿದೆಂದು ಹಂಪ ನಾಗರಾಜಯ್ಯನವರ 'ಕೊಪ್ಪಳದ ಶಾಸನಗಳು' ಎಂಬುದರಿಂದ ತಿಳಿದುಬರುತ್ತದೆ. ಆದಿ ಕದಂಬರು, ಆದಿ ಚಾಲುಕ್ಯರು, ರಾಷ್ಟ್ರಕೂಟರು ತೋರಿಸಿದ ಆಸಕ್ತಿಗೂ ಸರಿಯಾಗಿ ಮತ್ತು ದೀರ್ಘಕಾಲಿಕ ಆಸಕ್ತಿ, ಅನುರಾಗ, ಶ್ರದ್ಧೆಯನ್ನು ಜೈನ ಧರ್ಮದಲ್ಲಿ ಆದಿ ಗಂಗರು ತೋರಿಸಿದ ಬಗ್ಗೆ ಉಲ್ಲೇಖವಿದೆ. [೨]

---

೧) ಹಂಪ ನಾಗರಾಜಯ್ಯ – ಕೊಪ್ಪಳದ ಶಾಸನಗಳು ಪ್ರಸ್ತಾವನೆ ಪು–೯–೧೯೯೮

೨)__________ ಸದರ __________ ಪು–೧೦–೧೯೯೮

ಗಂಗರು ಜೈನ ಧರ್ಮದ ನಿಷ್ಠೆಯಿಂದ ಅನುಸರಿಸಿ ಆಚರಿಸಿದ ಸಂಗತಿಯನ್ನು ಕೊಪ್ಪಳದಲ್ಲಿ ಈಗ ಹೊಸದಾಗಿ ದೊರೆತಿರುವ ಶಾಸನಗಳಲ್ಲಿ ವ್ಯಾಪಕವಾಗಿ ಪ್ರಕಟವಾಗಿರುವ ವಿಷಯ ಅಲ್ಲಲ್ಲಿ ಬರೆದಿರುವ ವಿವರಣೆಯಲ್ಲಿ ಕಾಣಬಹುದಾಗಿದೆ. ಗಂಗರ ಮನೆತನದ ಮುಖ್ಯಸ್ಥರೆಲ್ಲ ವರಸೆಯಾಗಿ ಕೊಪ್ಪಳಕ್ಕೆ ಬಂದು ಮುಡಿಪಿದ್ದಾರೆ. ಕೊಪ್ಪಳದಲ್ಲಿ ದೊರೆತ ಶಾಸನಗಳಲ್ಲಿ ಕೆಲವು ಮಹಿಳೆಯರು ಮುಡಿಪಿದ ನೆನಪಿಗೆ ನಿಲ್ಲಿಸಿದ ಸುಂದರ ಶಿಲಾ ಸ್ತಂಭಗಳಿವೆ. ಕೊಪಣ ತೀರ್ಥದಲ್ಲಿ ಮರಣವು ಮಹಾನವಮಿಯಾಗಿತ್ತು. ಕೊಪ್ಪಳದ ನಿಸಿದಿಗಳಲ್ಲಿ ಬಹುಮಟ್ಟಿನವು ಚಿತ್ರ ಸಹಿತವಾಗಿವೆ. ನಿಸಿದಿಯ ತಲೆಭಾಗ ಚೌಕವಾಗಿ, ತ್ರಿಕೋನವಾಗಿ, ಗೋಪುರ ಆಕೃತಿಗಳಿವೆ. ಕೆಲವಕ್ಕೆ ಎಡ-ಬಲ-ಪಕ್ಕಗಳಲ್ಲಿ ಶಾಸನವಿದೆ. ಕೆಲವಕ್ಕೆ ಕೆಳಗಡೆ ಇವೆ. ಶಿಲ್ಪಲಕ್ಷಣಗಳ ದೃಷ್ಟಿಯಿಂದ ಇವು ನಿಸ್ಸಂಶಯವಾಗಿ ಗಂಗರ ಕಾಲಕ್ಕೆ ಸೇರಿದುವಾಗಿವೆ. ಅವುಗಳ ಆಭರಣ, ವಸ್ತ್ರಧಾರಣೆ, ಮುಖಭಾವದಿಂದ ಇವುಗಳನ್ನು ಕ್ರಿ.ಶ. ೮೫೦ ರಿಂದ ೯೦೦ ರ ಕಾಲಕ್ಕೆ ಸೇರಿಸಬಹುದಾಗಿದೆ.[೧]

ಶ್ರವಣಬೆಳಗೊಳದ ನಂತರ ಇಡೀ ಕನ್ನಡ ನಾಡಿನಲ್ಲಿ ಅಧಿಕ ಸಂಖ್ಯೆಯಲ್ಲಿ ಸಿಕ್ಕಿರುವ ನಿಸಿದಿಗಳ ಸ್ಥಳ ಕೊಪ್ಪಳ ಎಂದೆನಿಸುವ ಕೀರ್ತಿಗೆ ಪಾತ್ರವಾಗಿರುವುದು ಹೊಸ ಸಂಶೋಧನೆಯಿಂದ ಸಾಧ್ಯವಾಗಿದೆ.

---

೧) ಡಾ॥ ದೇವರ ಕೊಂಡಾರೆಡ್ಡಿ - ಶ್ರವಣಬೆಳಗೊಳ ಬಸದಿಗಳ ವಾಸ್ತುಶಿಲ್ಪ - ೧೯೯೩- ಪು-೩೦

## ಅಧ್ಯಾಯ– ಮೂರು

### ಮಠಗಳ ಪರಂಪರೆ ಮತ್ತು ಧರ್ಮ ಸಾಮರಸ್ಯ

#### ೧) ಮಠದ ಅರ್ಥ

ಮಠವೆಂದರೆ ಮೂಲತ: ಮುನಿಗಳ ವಾಸಸ್ಥಾನ ಎಂದರ್ಥ. ಸಂಸ್ಕೃತದ ನಿಘಂಟುಕಾರನಾದ ಅಮರಸಿಂಹನ ಅಭಿಪ್ರಾಯದಂತೆ ಮಠ: ಛಾತ್ರಾದಿ ನಿಲಯ:[೧] ಎಂದು ಅರ್ಥ. ಅಂದರೆ ವಿದ್ಯಾರ್ಥಿಗಳು ವಾಸಿಸುವ ಸ್ಥಳವೇ ಮಠ. ಇಲ್ಲಿ ಗುರುಗಳೂ, ಶಿಷ್ಯರೂ,ಸನ್ಯಾಸಿಗಳೂ, ಬ್ರಹ್ಮಚಾರಿಗಳೂ ವಾಸಮಾಡುತ್ತಿದ್ದರು. ಇದರಲ್ಲಿ ವಿದ್ಯೆ, ಜ್ಞಾನ, ಮತ, ಧರ್ಮಗಳ ಪ್ರಸಾರ ಕಾರ್ಯ ನಡೆಯುತ್ತಿತ್ತು.[೨]

ವೇದಗಳ ಕಾಲದಲ್ಲಿ ವನವಾಸಿಗಳಾಗಿದ್ದ ಋಷಿ–ಮುನಿಗಳು ತಮ್ಮ ಆಶ್ರಯಗಳಲ್ಲಿ ವಿಧ್ಯಾರ್ಥಿಗಳಿಗಾಗಿ ಪರ್ಣಶಾಲೆಗಳನ್ನು ರಚಿಸಿ, ಅಲ್ಲಿ ಅವರಿಗೆ ವಿಧ್ಯೆ ಕಲಿಸುತ್ತಿದ್ದರು. ಇವೇ ಗುರುಕುಲಗಳು. ಈ ಗುರುಕುಲದ ಪರ್ಯಾಯ ನಾಮವೇ ಮಠ.[೩] ಪ್ರಾಚೀನ ಭಾರತದಲ್ಲಿ ತತ್ವಚಿಂತನೆ ಮತ್ತು ಧರ್ಮಭೋಧನೆಯು ಅರಣ್ಯಗಳ ನಡುವೆ ಆಶ್ರಮಗಳಲ್ಲೇ ನಡೆಯುತ್ತಿತ್ತು. ಈ ಮಾದರಿಯ ವಿಧಾನಗಳನ್ನು ಪ್ರಾಚೀನ ಗ್ರೀಸ್ ದಲ್ಲಿ "ಜಿಮ್ನಾಶಿಯಂ, ಎಂದು ಕರೆಯಲಾಗುತ್ತಿತ್ತು.[೪]

ಮಠ ಎಂಬುದಕ್ಕೆ ಆಂಗ್ಲ ಭಾಷೆಯಲ್ಲಿ 'Monastery, ಎಂಬ ಪದವಿದೆ. ಇದು ಗ್ರೀಕ್ ಮೂಲದ Monachos ನಿಂದ ಬಂದದ್ದು. Living alone ಎಂಬ ಅರ್ಥ ಒಳಗೊಂಡಿದೆ.[೫] ಏಕಾಂತತೆ ಅಥವಾ ಮುಕ್ತತೆ ಎಂಬುದೇ ಇದರ ತಾತ್ಪರ್ಯ. ಮ್ಯಾಕ್ ಡೊನೆಲ್‌ರ, ಸಂಸ್ಕೃತ ಶಬ್ದಕೋಶದಲ್ಲಿ ಒಬ್ಬ ಸನ್ಯಾಸಿಯ ಇಲ್ಲವೇ, ವಿದ್ಯಾರ್ಥಿಯ ಕುಟೀರ; ಒಂದು ಧಾರ್ಮಿಕ ಪಾಠಶಾಲೆ,[೬] ಆಧ್ಯಾತ್ಮ ಗುರುವೊಬ್ಬರ ನಿವಾಸಸ್ಥಾನ; ವಿಧ್ಯಾಭ್ಯಾಸಕ್ಕಾಗಿ ಅಲ್ಲಿಗೆ ಬರುವವರಿಗೆ ಆಶ್ರಯ ಕೊಡುವಸ್ಥಾನ, ಎಂದು ವಿವರಿಸಲಾಗಿದೆ.[೭]

---

೧. ಅಮರಕೋಶ ಸಂ. ರೈಸ್ ಪುಟ ೪೭,-೧೯೭೦

೨. ಕನ್ನಡ ನಿಘಂಟು ಸಂ ೭ ಕ.ಸಾ.ಪ.ಪ್ರ ಪುಟ ೬೮೬೦-೧೯೭೬

೩. ಅಮರವಾಣಿ-ಎಂ.ಜಿ.ನಂಜುಡಾರಾಧ್ಯ ಸ್ಮರಣ ಸಂಪುಟ ಸಂ ಡಾ||ಹೆಚ್.ಪಿ.ಮಲ್ಲೇದೇವರು ಪು೮೩-೧೯೯೪

೪. 'ಚಿತ್ರಭೆ' ಸಂ ಜಿ.ಹೆಚ್.ಹನ್ನೆರಡುಮಠ ಪು ೫೭೬-೧೯೭೨

5. The New Encyclopadia Britannica Vol-12 P-335-1973

೬. 'ಕಾಯಕ ಪರಿಣಾಮಿ' ಸಂ ಶಾಂತರಸ ಮತ್ತು ಚನ್ನಬಸಪ್ಪ ಬೆಟ್ಟದೂರ-ಪು ೪೬೮-೧೯೯೧

೭. ------------------------ಸದರ----------------------------

ಒಟ್ಟಾರೆ ಮಠವೆಂದರೆ ಸನ್ಯಾಸಿಗಳು ವಾಸಿಸುವ ಸ್ಥಳ ಅಥವಾ ಕುಟೀರ; ತಪಸ್ಸಿನ, ಜ್ಞಾನಾನ್ವೇಷಣೆಯ ಕೇಂದ್ರ. ಕಾಲಕ್ರಮೇಣ ಆಶ್ರಯ, ಗುರುಮನೆ, ಗುರುಕುಲಗಳಾಗಿ ಮಾರ್ಪಟ್ಟು ಮುಂದೆ ವಿದ್ಯಾಪ್ರಸಾರ, ಜ್ಞಾನಪ್ರಸಾರ, ಮತಪ್ರಸಾರ ಮಾಡುವ ಕೇಂದ್ರವಾಗಿ ಬೆಳೆಯಿತು.

**೨) ಮಠಗಳ ಹಿನ್ನೆಲೆ:-**

ಭಾರತೀಯ ಇತಿಹಾಸದಲ್ಲಿ ಕ್ರಿ.ಪೂ. 5ನೇ ಶತಮಾನದಷ್ಟು ಪುರಾತನಕಾಲದಿಂದಲೇ ಗುರುಕುಲಗಳಿದ್ದುದಾಗಿ ತಿಳಿದು ಬರುತ್ತದೆ. ರಾಮಾಯಣ ಕಾಲದಲ್ಲಿ ಅನೇಕ ಋಷಿ ಮುನಿಗಳ ಆಶ್ರಯಗಳು, ತಪೋಕೇಂದ್ರಗಳು ಕರ್ನಾಟಕದಲ್ಲಿದ್ದವು. ಮುಂದೆ ಪ್ರಾಚೀನ ಕಾಲದ ಬೌದ್ಧ ವಿಹಾರಗಳು ಹಾಗೂ ಜೈನ ಬಸದಿಗಳು ಇಂದಿನ ಮಠಗಳ ಸ್ವರೂಪವನ್ನೇ ಹೊಂದಿದ್ದವು.[೧] ಅಶೋಕನ ಕಾಲಕ್ಕಾಗಲೇ (ಕ್ರಿ.ಪೂ. ೩ನೇ ಶತಮಾನ) ಬೌದ್ಧವಿಹಾರಗಳು ಹುಟ್ಟಿದ್ದಿರಬೇಕು. ಈ ಹಿನ್ನಲೆಯಲ್ಲಿ ಭಾರತೀಯ ಇತಿಹಾಸದಲ್ಲಿ ಭೌದ್ಧ ಧರ್ಮದ ನವೋದಯ ಕಾಲಕ್ಕೆ ಸನ್ಯಾಸಿಮಠಗಳು ಅಸ್ತಿತ್ವದಲ್ಲಿ ಇದ್ದ ಬಗೆಗೆ ಸ್ಪಷ್ಟ ಸೂಚನೆಗಳು ದೊರೆಯುತ್ತವೆ. ಮಠಗಳಿಗೆ ಬೌದ್ಧರು ವಿಹಾರ ಅಥವಾ ಸಂಘ ಎನ್ನುತ್ತಿದ್ದರು. ಬೌದ್ಧ ಧರ್ಮದಲ್ಲಿ ಮಠಗಳಿಗೆ ಉನ್ನತವಾದ ಸ್ಥಾನವಿತ್ತು. ಬೌದ್ಧ ಸನ್ಯಾಸಿಗಳನ್ನು ಪರಿವ್ರಾಚಕರೆಂದು ಕರೆಯುತ್ತಿದ್ದರು. ಮನುಷ್ಯ ತನ್ನ ಕೈಯಲ್ಲಿ ಕಮಲ ಹಿಡಿದಿರುವದು ಬೌದ್ಧಸಂಘದ ಚಿನ್ಹೆ. ಇದು ಸ್ವಚ್ಛತೆಯ ಸ್ವರೂಪ. ಬೌದ್ಧ ವಿಹಾರಗಳು, ಅಥವಾ ಸಂಘಗಳು ಹಿಂದಿನ ಆಶ್ರಮ, ಗುರುಕುಲಗಳಂತೆ ಅರಣ್ಯಕೇಂದ್ರೀಕೃತವಾಗಿರದೇ ಪಟ್ಟಣ ಪ್ರದೇಶದಲ್ಲಿ ಇದ್ದುದು ಒಂದು ವಿಶೇಷ.

ಧರ್ಮಕ್ಕೆ ಸಂಘಟನಾ ಸ್ವರೂಪ ಬಂದದ್ದೇ ಬೌದ್ಧ ಹಾಗೂ ಜೈನ ಧರ್ಮಗಳ ಕಾಲದಲ್ಲಿ.[೨] ಮಠಗಳಂತಹ ಧಾರ್ಮಿಕ ಕೇಂದ್ರಗಳು ಆವಾಗ ಪ್ರಾರಂಭವಾದವು. ಜನಸಾಮಾನ್ಯರನ್ನು ಗಮನದಲ್ಲಿ ಇರಿಸಿಕೊಂಡಿದ್ದ ಈ ಧರ್ಮಗಳು, ಸಂಘ ಸ್ವರೂಪದ ಧರ್ಮೋಪದೇಶ ಕೈಕೊಂಡವು.[೩] ಮುಂದೆ ಇಂಥಹದೇ ಸಂಘಟನೆಯನ್ನು ಅನುಸರಿಸಿ, ಧರ್ಮಪ್ರಚಾರಕ್ಕೆಕೊಂಡವು.

---

೧. ಕನ್ನಡ ವಿಶ್ವಕೋಶ ಸಂ ೧೨ ಸಂ ಡಾ।।ಹೆಚ್.ತಿಪ್ಪೇರುದ್ರಸ್ವಾಮಿ ಪು ೧೦೦೪-ಕ ಅಧ್ಯಯನ ಸಂಸ್ಥೆ ಮೈಸೂರ-೧೯೮೬

೨. ಮುಂದೆ ಇದು ಕ್ರೈಸ್ತಧರ್ಮಕ್ಕೂ ಮಾದರಿಯಾಗಿತ್ತು

೩. ಪಿ.ವ್ಹಿ.ಆಚಾರ್ಯ ಲೇಖನ-ಮಠಗಳು ಏನು ಮಾಡಬಲ್ಲವು ವಿಶ್ವಪ್ರಭೆ ಪು-೫೭೬-ಸಂ ಜಿ.ಹೆಚ್.ಹನ್ನೆರಡುಮಠ ಹುಬ್ಬಳ್ಳಿ ೧೯೭೨.

ಮಠಗಳ ಇತಿಹಾಸವನ್ನು ಗುರುತಿಸುವಾಗ ಕ್ರಿ. ಶ. 8ನೇ ಶತಮಾನವು ಮಹತ್ವದ ಘಟ್ಟವಾಗಿದೆ. ಇದು ಬೌದ್ಧ, ಜೈನ ಧರ್ಮಗಳ ವಿರುದ್ಧ ಹಿಂದೂ ಧರ್ಮವು ಪುನರುತ್ಥಾನಗೊಂಡ ಕಾಲ. ಹಿಂದೂ ಧರ್ಮದ ಪರಂಪರೆಯಲ್ಲಿ ಪ್ರಥಮವಾಗಿ ಒಂದು ನಿರ್ದಿಷ್ಟ ಮಾದರಿಯ ಮಠಗಳನ್ನು ನಿರ್ಮಾಣ ಮಾಡಿದವರು ಶ್ರೀ ಶಂಕರಾಚಾರ್ಯರು. ಬೌದ್ಧಧರ್ಮವನ್ನು ವಿರೋಧಿಸಿದರೂ, ಬುದ್ಧನು ಉಪದೇಶಿಸಿದ ಸನ್ಯಾಸದ ಆದರ್ಶದ ಪರವಾಗಿದ್ದರು. ಹಿಂದೂ ಸಂಸ್ಕೃತಿಯಲ್ಲಿ ಬೌದ್ಧ ಸನ್ಯಾಸಿ ಸಂಸ್ಥೆಗಳನ್ನು ಅಳವಡಿಸಿ ಅವಕ್ಕೆ ವೈದಿಕ ಹೊದಿಕೆ ಕೊಟ್ಟರು.[೧] ಹಿಂದೂ ಧರ್ಮದಲ್ಲಿದ್ದ ಕಳಂಕರೂಪದ ಕೀಳುಪದ್ಧತಿಗಳನ್ನು ಮೂಲೋತ್ಪಾಟನೆ ಮಾಡಿ, ಹಿಂದೂ ಧರ್ಮದ ತತ್ವ ಪ್ರಚಾರ ಮಾಡುವದು ಇವರ ಮಠಗಳ ಮುಖ್ಯ ಉದ್ದೇಶವಾಗಿತ್ತು.

ಇತ್ತೀಚಿಗೆ ಭಾರತೀಯ ಮಠಗಳನ್ನು ಕುರಿತು ಅಧ್ಯಯನ ನಡೆಸಿದ Hindu Religious Endowment commission ಪ್ರಕಾರ ಕೇವಲಾದ್ವೈತ ಸಿದ್ಧಾಂತ ಪ್ರವರ್ತಕರೂ ಬೌದ್ಧ-ಜೈನ ಧರ್ಮಗಳ ಪ್ರಭಾವವನ್ನು ಬಹುಮಟ್ಟಿಗೆ ಕಡಿಮೆ ಮಾಡಿ ವೇದೋಪನಿಷತ್ ಪ್ರತಿಪಾದಿತ ಧರ್ಮವನ್ನು ಪುನರುತ್ಥಾನಗೊಳಿಸಿದವರೂ ಆದ ಆದಿಶಂಕರಾಚಾರ್ಯರೇ ಮೊಟ್ಟಮೊದಲು ಇಂದಿನ ಮಠಗಳನ್ನು ಸ್ಥಾಪಿಸಲಾರಂಭಿಸಿದರು.[೨] ಮೊದಲಿಗೆ ಭಾರತದಾದ್ಯಂತ ತಮ್ಮ ವ್ಯಾಪಕತೆಯನ್ನು ಹರಡಿದ್ದ ಬೌದ್ಧಮತೀಯರು ಬೌದ್ಧ ವಿಹಾರ ಹಾಗೂ ಸಂಘಾರಾಮಗಳನ್ನು ನಿರ್ಮಿಸಿದ್ದರು. ಇವೇ ಮುಂದೆ ಹಿಂದೂ ಮತೀಯರು ಮಠಗಳನ್ನು ನಿರ್ಮಿಸಿಕೊಳ್ಳಲು ಮೂಲ ಪ್ರೇರಣೆಗಳಾಗಿದ್ದಿರಬೇಕು. ನಂತರ ಆದಿಶಂಕರಾಚಾರ್ಯರನ್ನು ಅನುಸರಿಸಿ ರಾಮಾನುಜ, ಮಧ್ವ ಮತ್ತು ಶೈವ ಮೊದಲಾದ ಬೇರೆ ಬೇರೆ ಮತ ಧರ್ಮಗಳ ಮಠಗಳು ನಿರ್ಮಾಣವಾದುದಾಗಿ ವರದಿಯಲ್ಲಿ ಹೇಳಿದೆ. ಆದರೆ ಆದಿಶಂಕರಾಚಾರ್ಯರಿಗಿಂತ ಬಹಳ ಹಿಂದೆಯೇ (ಕ್ರಿ.ಶ. ೬ನೇ ಶತಮಾನಕ್ಕಿಂತ ಮೊದಲು) ಬಹುಶ: ಇದೇ ವೇಳೆಗೆ ಭಾರತ ಖಂಡದಲ್ಲೇ ಬಹು ಪ್ರಾಚೀನ ಧರ್ಮಗಳಲ್ಲೊಂದಾದ ಶೈವ ಅಥವಾ ಲಾಕುಳ ಶೈವದಲ್ಲಿ ಮಠಗಳಿದ್ದುದಕ್ಕೆ ಸಾಕಷ್ಟು ಆಧಾರಗಳಿವೆ.[೩]

---

೧. "ಕಾಯಕಪರಿಣಾಮಿ" ಸಂ.ಶಾಂತರಸ & ಚನ್ನಬಸಪ್ಪ ಪು. ೪೯೬-೧೯೯೧

೨. "ವಿಶ್ವಪ್ರಭೆ" ಸಂ ೩ ಸಂ.ಜಿ.ಎಚ್.ಹನ್ನೆರಡುಮಠ ಪು. ೫೦೩-೫೦೪-೧೯೭೨

೩. ಡಾ|| ಎಂ. ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾ. ಅಧ್ಯಯನ ಪು. ೧೩೫-೧೯೬೬ (ಶೈವ ಧರ್ಮಕ್ಕೆ ಲಾಕುಳ, ಪಾಶುಪತ, ಕಾಳಾಮುಖ ಎಂಬ ಹೆಸರುಗಳಿವೆ. ಶಾಸನಗಳಲ್ಲಿ ಇದನ್ನು ಶಿವ ಸಮಯ, ಶಿವ ಧರ್ಮ, ಲಗುಡಿಗಳ ಧರ್ಮ. ಕಾಳಾಮುಖ ಸಮಯ ಎಂದು ಇದೆ.

ಬಹಳ ದೊಡ್ಡ ದೇವಾಲಯಗಳ ನಿರ್ಮಾಣಕಾರರಾಗಿದ್ದ ಶೈವಯತಿಗಳು ದೇವಾಲಯಗಳಲ್ಲೇ ವಾಸಮಾಡುತ್ತಾ, ಆಧ್ಯಾತ್ಮ ಸಾಧನೆಯ ಜೊತೆಗೆ ವಿದ್ಯಾ ಪ್ರಸಾರವನ್ನು ನಡೆಸುತ್ತಿದ್ದರು. ಆಗಿನ ಅವರ ದೇವಸ್ಥಾನವೇ ಮಠವಾಗಿ, ಮಠವೇ ಶಾಲೆಯೂ ಆಗಿತ್ತು. ಕರ್ನಾಟಕದಲ್ಲಿ ಅಂತಹ ಲಾಕುಳ ಶೈವರ ಅತ್ಯಂತ ಪ್ರಾಚೀನ ದೇವಾಲಯ ಬಾದಾಮಿಯ ಹತ್ತಿರವಿರುವ ಮಹಾಕೂಟೇಶ್ವರ (ಮಕುಟೇಶ್ವರ) ಇದರ ಕಾಲ ಕ್ರಿ. ಶ. ೬೦೨.[೧] ಈ ಹಿನ್ನಲೆಯಲ್ಲಿ ಕರ್ನಾಟಕದಲ್ಲಿ ಆರನೇ ಶತಮಾನದ ವೇಳೆಗೆ ಶೈವಧರ್ಮವಿತ್ತು. ಬೌದ್ಧಧರ್ಮೀಯರ ವಿಹಾರಗಳು ಸಂಘಾರಾಮಗಳಿಂದ ಪ್ರಭಾವಿತವಾಗಿದ್ದ ಶೈವ ಮಠಗಳು ಕ್ರಿ.ಶ. ೭ನೇ ಶತಮಾನದ ವೇಳೆಗಾಗಲೇ ಅಸ್ತಿತ್ವದಲ್ಲಿದ್ದವು ಎಂಬ ಕಪಟರಾಳ ಕೃಷ್ಣರಾಯರ ಮಾತುಗಳು ಒಪ್ಪುವಂತಹವು.[೨]

ಕ್ರಿ. ಶ. ೧೦–೧೨ ನೇ ಶತಮಾನಗಳಲ್ಲಿ ಲಾಕುಳಶೈವ ಪರಂಪರೆಯ ಅನೇಕ ದೇವಾಲಯ – ಮಠಗಳು ನಾಡಿನ ಅನೇಕ ಭಾಗಗಳಲ್ಲಿ ಹರಡಿದ್ದುದಕ್ಕೆ ಶಾಸನಾಧಾರಗಳಿವೆ.[೩] ಮಲಕಾಪುರದ ಶಾಸನ (ಕ್ರಿ.ಶ. ೧೨೬೧)ದ ಪ್ರಕಾರ ಕ್ರಿ.ಶ. ೧೦ನೇಯ ಶತಮಾನದ ಪೂರ್ವಾರ್ಧದಲ್ಲಿ ಪ್ರಾರಂಭವಾಗಿದ್ದ ಮಯೂರಮಠ ಮತ್ತು ಗೋಳಕಿ ಮಠಗಳು ಪ್ರಾಚೀನ ಚೇದಿ ಪ್ರಾಂತ್ಯದಲ್ಲಿ ಕ್ರಿ.ಶ. ೧೩ನೇ ಶತಮಾನದವರೆಗೂ ತಮ್ಮ ಪರಂಪರೆಯನ್ನು ಮುನ್ನಡೆಸಿಕೊಂಡು ಬಂದಿದ್ದವು.[೪] ಲಾಕುಳ ಶೈವರ ಬಹುಮುಖ್ಯ ಕೇಂದ್ರ ಬಳ್ಳಿಗಾವೆಯ ಕೇದಾರೇಶ್ವರ ಮಠ ಅಥವಾ ಕೋಡಿಯ ಮಠ. ಇದು ಕ್ರಿ. ಶ. ೧೧–೧೨ ನೇ ಶತಮಾನಗಳಲ್ಲಿ ಪ್ರಸಿದ್ದ ಕೇಂದ್ರವಾಗಿ ದಕ್ಷಿಣದ ಕೇದಾರವೆಂದೇ ಪ್ರಸಿದ್ಧಿಯಾಗಿತ್ತು. ನೈಷ್ಠಿಕ ಬ್ರಹ್ಮಚಾರಿಗಳ ವಾಸಸ್ಥಾನವೂ ಆಗಿತ್ತು.[೫]

೧) ಡಾ॥ಎಂ.ಚಿದಾನಂದಮೂರ್ತಿ ಕ.ಶಾ.ಸಾ.ಅಧ್ಯಯನ–ಪುಟ–೧೩೮–೧೯೬೬

೨) ಕಪಟರಾಳಕೃಷ್ಣರಾಯರು :– ಕರ್ನಾಟಕಲಾಕುಳ ಶೈವರ ಇತಿಹಾಸ ಪುಟ ೧೦೦–೧೯೫೫.

೩) ದೇವಾಲಯಗಳುಅಶೋಕನ ಕಾಲ (ಕ್ರಿ.ಶ.೩.ನೆ ಶತಮಾನ) ದಿಂದ ಈಚಿನವು ಕ್ರಿ.ಶ.ದ ಆರಂಭದ ವೇಳೆಗೆ ದೇವಸ್ಥಾನಗಳಿದ್ದುದಕ್ಕೆ ಶಾಸನಾಧಾರಾಗಲಿವೆ. ನಂತರ ಕ್ರಿ.ಶ.೧೫೦ ರ ಕದಂಬರ ಪ್ರಾಕೃತ ಶಾಸನ ಮತ್ತು ಕ್ರಿ.ಶ.೪೫೦ರ ತಾಳಗುಂದದ ಶಾಸನಗಳು ದೇವಾಲಯಗಳ ಬಗ್ಗೆ ತಿಳಿಸುತ್ತವೆ ಡಾ॥.ಎಂ.ಚಿದಾನಂದಮುರ್ತಿ. ಕನ್ನದ ಶಾಸನಗಳ ಸಾ,ಅಧ್ಯಾಯನ . ಪು.೧೭೩–೧೭೪–೧೯೬೬

೪) ಕಪಟರಾಳ ಕೃಷ್ಣರಾಯ –ಕರ್ನಾಟಕ ಲಾಕುಳ ಶೈವರ ಇತಿಹಾಸ ಪುಟ–೧೪೬–೧೯೫೫

೫) Epigraphia carnatica-vol vii- ಶಿಕಾರಿಪುರ ಪುಟ ೧೦೦–೧೧೨೯–A.D ಉದ್ರುತ–ಬೆಂಗಳೂರು ನಗರದ ವೀರಶೈವ ಮಠಗಳು–ಒಂದು ಸಾಂಸ್ಕೃತಿಕ ಅಧ್ಯಯನ–ಡಾ॥ ಬಿ.ಸಿ.ವೀರಪ್ಪ–೨೦೦೧.

ಪ್ರಾಚೀನ ಕರ್ನಾಟಕದಲ್ಲಿದೇವಾಲಯ ಮತ್ತು ಮಠಗಳಿಗೆ ನಿಕಟ ಸಂಬಂಧವಿತ್ತು. ಸಾಮಾನ್ಯವಾಗಿ ಇಲ್ಲಿ ದೇವಾಲಯವೇ ಮುಖ್ಯವಾಗಿದ್ದು ಮಠವು ಅದರ ಅಂಗವಾಗಿತ್ತು. ಮಠವಿದ್ದುದು ದೇವಾಲಯದ ಮುಖ್ಯಸ್ಥರಾಗಿದ್ದ ಮುನಿಗಳ ವಾಸಸ್ಥಳವಾಗಿ ಮಾತ್ರ. ಹೀಗಾಗಿ ಮಠಗಳ ಹೆಸರು ಹೇಳುವಾಗ ದೇವಾಲಯಗಳ ಹೆಸರನ್ನು ಸೂಚಿಸಿಯೇ ಹೇಳಲಾಗುತ್ತಿತ್ತು. ಉದಾ: ಮುಳುಗುಂದದ ನಗರೇಶ್ವರಮಠ ಶ್ರೀ ಪರ್ವತದಗಸ್ತ್ಯೇಶ್ವರದ ಮಠ ಇತ್ಯಾದಿ. ಕರ್ನಾಟಕದಲ್ಲಿ ಲಾಕುಳ ಶೈವಧರ್ಮವು ಪ್ರಚಾರವಾದ ಬಳಿಕವೇ (ಕ್ರಿ.ಶ. ೬-೭ ನೆಯ ಶತಮಾನದಿಂದ) ಈ ತರದ ದೇವಸ್ಥಾನದ ಅಂಗವಾದ ಮಠಗಳು ಕಾಣಿಸಿಕೊಳ್ಳಲಾರಂಭಿಸಿದ್ದು .[೧]

---

೧) ಡಾ॥ ಎಂ.ಚಿದಾನಂದಮೂರ್ತಿ. ಕ.ಶಾ.ಸಾ.ಅಧ್ಯಯನ-ಪು. ೧೮೮-೧೯೬೭

ಶೈವ ಗುರುಗಳು ವಾಸವಾಗಿದ್ದ ದೇವಸ್ಥಾನಗಳೇ ವಾಸಸ್ಥಾನಗಳಾಗಿದ್ದವು. ದೇವಾಲಯದ ಮುಖ್ಯ ಸ್ಥಾನವನ್ನು ಸ್ಥಾನಿಕ, ಅಥವಾ 'ಸ್ಥಾನಪತಿ, ಎಂದು ಕರೆಯಲಾಗುತ್ತಿತ್ತು. ಇಂತ ಸ್ಥಾನಪತಿಯು ದೇವಸ್ಥಾನದಲ್ಲಿ ಅಥವಾ ಅದಕ್ಕೆ ಸಂಬಂಧಿಸಿದ ಮಠದಲ್ಲಿ ವಾಸಿಸುತ್ತಾ, ಅದರ ಆಡಳಿತದ ಮೇಲ್ವಿಚಾರಕರಾಗಿ, ತಪಸ್ವಿಯಾಗಿ, ವಿದ್ಯಾದಾನ ಮಾಡುತ್ತಿದ್ದನು. ಇಂತಹ ಶೈವ ಸನ್ಯಾಸಿಯನ್ನು ಸ್ಥಾನಾಚಾರ್ಯನೆಂದೂ,[೧] ಇವರಿದ್ದ ಕೇಂದ್ರಗಳಿಗೆ ನೈಷ್ಠಿಕ ಸ್ಥಾನವೆಂದೂ ಕರೆಯಲಾಗುತ್ತಿತ್ತು. ಈ ಪ್ರಾಚೀನ ದೇವಾಲಯ-ಮಠಗಳು ಏಕಕಾಲದಲ್ಲಿ ಸಮಾಜೋಧಾರ್ಮಿಕ ಸೇವಾಕ್ಷೇತ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಸಾಮಾನ್ಯವಾಗಿತ್ತು. ಕರ್ನಾಟಕದಲ್ಲಿ ಲಾಕುಲೀಶ, ಪಾಶುಪತಿ, ಕಾಳಾಮುಖಿ, ಶೈವಮುನಿಗಳು ಸ್ಥಾನಪತಿಗಳಾಗಿದ್ದು ಸಮಯದಲ್ಲಿ ತಂದಿದ್ದ ದೇವಾಲಯಗಳನ್ನೇ ಮಠಗಳನ್ನಾಗಿ ಮಾತ್ರವಲ್ಲದೇ ಶ್ರೇಷ್ಠ ಧಾರ್ಮಿಕ ಮತ್ತು ಶೈಕ್ಷಣಿಕ ಕೇಂದ್ರಗಳನ್ನಾಗಿ ಮಾಡಿದ್ದರು.[೨] ಸುಮಾರು ೧೧ನೇ ಶತಮಾನದಿಂದ ೧೪ನೇಯ ಶತಮಾನದವರೆಗೆ ಇಂತಹ ಅಪಾರ ಸಂಖ್ಯೆಯ ಶೈವ ಮಠಗಳು ಉತ್ತುಂಗ ಸ್ಥಿತಿಯಲ್ಲಿದ್ದವು. ಉದಾ: ಬೆಳಗಾವಿ ಜಿಲ್ಲೆಯ ಹೂಲಿಮಠ, (ಪೂವಲ್ಲಿಮಠ) ಶಿವಮೊಗ್ಗ ಜಿಲ್ಲೆಯ ಕೋಡಿಯಮಠ, (ಕೇದಾರೇಶ್ವರ ಮಠ) ವಿಜಾಪುರ ಜಿಲ್ಲೆಯ ಸಾಲೋಟಗಿ ಮಠ ಮುಂತಾದವು. ಈ ಮಧ್ಯೆ ಬಸವಾದಿ ಪ್ರಮಥರ ಉತ್ಕರ್ಷದ ಫಲವಾಗಿ ವೀರಶೈವ ಧರ್ಮದೊಂದಿಗೆ ಸರಿಸಾಟಿಯಾಗಿ ನಿಲ್ಲಲಾಗದ ಬಹುತೇಕ ಶೈವ ಮಠಗಳು ವೀರಶೈವ ಮಠಗಳಾಗಿ ಪರಿವರ್ತನೆ ಆಗಿಬಿಟ್ಟವು.[೩] ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿಯ ಅನೇಕ ಕಡೆಗಳಲ್ಲಿ ಅನೇಕ ದೇವಸ್ಥಾನಗಳು, ಮಠಗಳು ವೀರಶೈವರಿಗೆ ವರ್ಗಾಯಿಸಲ್ಪಟ್ಟವು.[೪] ೧೨ನೇ ಶತಮಾನದ ಪ್ರಸಿದ್ಧ ವಚನಕಾರ ಸಿದ್ಧರಾಮನು ಮೊದಲು ಲಾಕುಳ ಪಾಶುಪತ ಶೈವ ಪಂಥಕ್ಕೆ ಸೇರಿದವನಾಗಿದ್ದು, ಮುಂದೆ ಚನ್ನಬಸವಣ್ಣನಿಂದ ದೀಕ್ಷೆ ಪಡೆದು, ವೀರಶೈವನಾಗುತ್ತಾನೆ.[೫] ಈ ದೃಷ್ಟಿಯಿಂದ ಈಗಿನ ವೀರಶೈವ ಜಂಗಮರಿಗೆ ಕಾಳಾಮುಖಿ ಗುರುಗಳೇ ಪೂರ್ವಜರು[೬] ಎಂಬ ಕಪಟರಾಳ ಕೃಷ್ಣರಾಯರ ಮಾತು ಸತ್ಯಕ್ಕೆ ಹತ್ತಿರವೆನ್ನಬಹುದು. ಒಟ್ಟಾರೆ ಇಂದಿನ ವೀರಶೈವರ ಗುರು-ವಿರಕ್ತರ ಮಠಗಳಿಗೆ ಎಲ್ಲಾ ವಿಧದಲ್ಲಿಯೂ ಹಿಂದಿನ ಶೈವ ಮಠಗಳೇ ಮಾದರಿ ಎಂದು ಹೇಳಬಹುದು.

---

೧ ಕಾಳಾಮುಖಿ ಆಚಾರ್ಯರಲ್ಲಿ ನಾಲ್ಕು ಪಂಗಡಗಳಿವೆ. ಪರ್ಷೆ, ಆವಳಿ ಸಂತತಿ, ಅನ್ವಯ,(ವಿಶ್ವಪ್ರಭೆ-ಸಂ 3 ಪು 506) ಜಿ.ಎಚ್ ಹನ್ನೆರಡು ಮಠ.-೧೯೭೨

೨ ವೀರಶೈವ ಮಠಗಳ ಹಿನ್ನೆಲೆ ವಿಶ್ವಪ್ರಭೆ, ಸಂ 3 ಸಂ ಜಿ.ಹೆಚ್. ಹನ್ನೆರಡು ಮಠ ಪು 506.-1972

೩ S.C Nandimath , A Hand Book of Virasaivism, ' P .9-10-1942

೪ G.S.Dikshit. "Social & Religious conditions of Karanataka Before Basava, P-123-Extract From A Study of B.N.V.M. By Dr. B.C.Veerappa. -2001

೫ ಡಾ// ಎಂ.ಚಿಂದಾನಂದಮೂರ್ತಿ. ಕ.ಶಾ.ಸಾ.ಅಧ್ಯಯನ-ಪು.153.-೧೯೬೬

೬ ಕಪಟರಾಳ ಕೃಷ್ಣರಾಯ.- ಕರ್ನಾಟಕ ಲಾಕುಳ ಶೈವರ ಇತಿಹಾಸ ಪು.130.-1955

ಶೈವ ದೇವಾಲಯ-ಮಠಗಳಲ್ಲಿ ಆಚಾರ್ಯರಾಗಿದ್ದು ಸ್ಥಾನಪತಿಗಳ ವಿದ್ವತ್ತು ತಪಃಪ್ರಭಾವಗಳನ್ನು, ಅಲ್ಲಿ ನಡೆಯುತ್ತಿದ್ದ ಅನ್ನಛತ್ರ, ಔಷಧಾಲಯ, ವಿದ್ಯಾಭ್ಯಾಸವನ್ನು ಮತ್ತು ರಾಜಮಹಾರಾಜರು ಅಧಿಕಾರಿವರ್ಗದವರು ಹಾಗೂ ಸಾಮಾನ್ಯರೂ ಕೂಡ ಅಲ್ಲಿನ ಆಚಾರ್ಯರಿಗೆ ಕಾಲುತೊಳೆದು, ಊರು, ಭೂಮಿ, ಧನಕನಕಾದಿಗಳನ್ನು ಇತ್ತುದು, ಈ ಮೊದಲಾದ ಹಲವಾರು ವಿಷಯಗಳನ್ನು ಶಾಸನಗಳು ತಿಳಿಸುತ್ತವೆ.[೨] ಇಂಥ ಮಠಗಳ ಸ್ಥಾನಾಚಾರರನ್ನು ಶಾಸನಗಳು ರಾಜಗುರುಗಳೆಂದು ಬಣ್ಣಿಸಿವೆ. ಹೀಗೆ ಕರ್ನಾಟಕದ ಇತಿಹಾಸದಲ್ಲಿ ಕ್ರಿ.ಶ. ೬-೭ನೇಯ ಶತಮಾನದ ವೇಳೆಗಾಗಲೇ ಕಾಣಸಿಗುವ ಶೈವ ದೇವಾಲಯ-ಮಠಗಳು ಕ್ರಿ.ಶ. ೧೦ ರಿಂದ ೧೪ ನೇ ಶತಮಾನದವರೆಗೆ ಸಮೃದ್ಧವಾದ ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿದ್ದವು. ಮುಂದಿನ ವೀರಶೈವ ಮಠ-ಮಾನ್ಯಗಳಿಗೆ ಆದರ್ಶಪ್ರಾಯವಾಗಿದ್ದು ಈ ಶೈವ ದೇಗುಲ-ಮಠಗಳು ೧೫ನೇಯ ಶತಮಾನದ ವೇಳೆಗೆ ವೀರಶೈವ ಮಠಗಳೊಂದಿಗೆ ವಿಲೀನವಾಗಿ ಹೋದಂತೆ ತೋರುತ್ತದೆ.

### ೩. ವೀರಶೈವ ಧರ್ಮದ ಹಿನ್ನೆಲೆ:-

ವೀರಶೈವ ಧರ್ಮವು ಕರ್ನಾಟಕದ ಪ್ರಮುಖ ಧರ್ಮಗಳಲ್ಲಿ ಒಂದು ಪ್ರಬಲವಾದ ಧರ್ಮ. ಬಹುತೇಕ ಕನ್ನಡ ನಾಡಿನಲ್ಲೇ ರೂಪಗೊಂಡ ಈ ಧರ್ಮವು ಕಾಲಾನಂತರದಲ್ಲಿ ನೆರೆಯ ಮಹಾರಾಷ್ಟ್ರ, ಆಂದ್ರ ಹಾಗೂ ತಮಿಳುನಾಡಿಗೂ ವ್ಯಾಪಿಸಿತು. ವೈದಿಕ ವಿರೋಧಿ ಚಿಂತನೆಗಳ ಹಿನ್ನೆಲೆಯಲ್ಲಿ ಪ್ರಾರಂಭವಾದ ಈ ಧರ್ಮವು ಶಿವಾಗಮಗಳ ತಳಹದಿಯ ಮೇಲೆ ಬೆಳೆದುಬಂದಿದೆ.

---

೧ Epigraphia Carnatica-VII Shikaripur-94. 1094. A.D South Indian Inscriptions. IX-1,24,936, A.D

೨ ಡಾ// ಎಂ.ಚಿದಾನಂದಮೂರ್ತಿ ಕ.ಶಾ.ಸಾ.ಅಧ್ಯಯನ. ಪು.174-1966

ವೀರಶೈವ ಧರ್ಮವು ಶೈವಧರ್ಮದ ವಿಕಸಿತ ರೂಪವೆಂದು ಬೇರೆ ಹೇಳಬೇಕಿಲ್ಲ. 'ವೀರ, ಎಂಬುದೇ ಈ ಶಾಖೆಯ ವೈಶಿಷ್ಟ್ಯ. ಶಿವನಲ್ಲಿ ಅಚಲವಾದ ಭಕ್ತಿ-ನಿಷ್ಠೆಗಳಿರುವುದನ್ನು ಇದು ಸೂಚಿಸುತ್ತದೆ, ಎಂಬುದಾಗಿ ಪಾರಮೇಶ್ವರಾಗಮ ಹಾಗೂ ವೀರಶೈವ ಶಿರೋಮಣಿಗಳು ಹೇಳುತ್ತವೆ.[೧] ಯಾರು ತನ್ನ ಕರಸ್ಥಲದಲ್ಲಿ ಇಷ್ಟಲಿಂಗವನ್ನಿಟ್ಟು ಅದರಲ್ಲಿಯೇ ತನ್ನ ಸರ್ವಸ್ವವನ್ನು ಲೀನಗೊಳಿಸಿ ಬಾಹ್ಯ ಪ್ರಪಂಚದಿಂದ ನಿರ್ಲಿಪ್ತನಾಗಿ ಲಿಂಗಪೂಜೆಯನ್ನು ಮಾಡುವನೋ ಅವನೇ ವೀರಶೈವ ಎನ್ನಿಸಿಕೊಳ್ಳುತ್ತಾನೆ.[೨] ವೀರಶೈವರು ವೇದಪಾಠಕರಲ್ಲ. ಯಜ್ಞ-ಯಾಗಾದಿಗಳ ವಿರೋಧಿಗಳು. ಅತೀ ವರ್ಣಾಶ್ರಮಿಗಳಾದ ಇವರು "ಇಷ್ಟಲಿಂಗವನ್ನಲ್ಲದೆ" ಇನ್ನಾವುದೇ ಬಗೆಯ ಶಿವ ಅಥವಾ ಶಿವೇತರ ದೇವರುಗಳನ್ನು ಆರಾಧಿಸುವದಿಲ್ಲ.[೩]

ವೀರಶೈವ ಧರ್ಮದ ಪ್ರಾರಂಭಿಕ ಇತಿಹಾಸವು ಮುಸುಕಾಗಿಯೇ ಉಳಿದಿದೆಯಾದರೂ, ಅದು ಸುಸಂಘಟಿತವಾಗಿ ಹಾಗೂ ವ್ಯವಸ್ಥಿತ ರೂಪದಲ್ಲಿ ಪ್ರಚಾರಕ್ಕೆ ಬಂದದ್ದು ಬಸವಣ್ಣನವರ ಕಾಲ(೧೨ನೇ ಶತಮಾನದಲ್ಲಿ) ಎಂಬುವದನ್ನು ಎಲ್ಲಾ ವಿದ್ವಾಂಸರೂ ಒಪ್ಪುತ್ತಾರೆ.[೪] ಆಗ ಬಸವಾದಿ ಪ್ರಮಥರು ನಡೆಸಿದ ವಚನ ಚಳುವಳಿಯು ವೀರಶೈವ ಧರ್ಮಕ್ಕೆ ಒಂದು ಹೊಸ ಚಾಲನೆಯನ್ನು ನೀಡಿತು. ಮುಂದೆ ೧೩ನೇ ಶತಮಾನದ ಆದಿಭಾಗದಲ್ಲಿ ಹೊಯ್ಸಳರ ಆಸ್ಥಾನದಲ್ಲಿದ್ದ ಕರಣಿಕ ಹರಿಹರ ಹಾಗೂ ದಂಡನಾಯಕ ಕೆರೆಯ ಪದ್ಮರಸ ಇವರ ಜೋಡಿ ನಡೆಸಿದ ವೀರಶೈವ ಧಾರ್ಮಿಕ ಪ್ರಸಾರ ಕಾರ್ಯ ಯೋಗ್ಯವಾದುದು. ಅನಂತರ ವಿಜಯನಗರದ ಅರಸನಾಗಿದ್ದ ಪ್ರೌಢದೇವರಾಯ(ಕ್ರಿ.ಶ೧೪೧೯-೪೬) ಮತ್ತು ಅವನ ಮಂತ್ರಿಗಳಾಗಿದ್ದ ಲಕ್ಕಣ್ಣದಂಡೇಶ ಹಾಗೂ ಜಕ್ಕಣಾಚಾರ್ಯ ಇವರೆಲ್ಲಾ ವೀರಶೈವ ಧರ್ಮದ ಪ್ರಸಾರಕ್ಕಾಗಿ ಅಪರಿಮಿತ ಸೇವೆ ಸಲ್ಲಿಸಿದ್ದಾರೆ. ಇವರ ಪೋಷಣೆಯಲ್ಲಿದ್ದ ಕಲ್ಲುಮಠದ ಪ್ರಭುದೇವನ ಕರಸ್ಥಲದ ನಾಗಿದೇವ, ವೀರಣ್ಣೊಡೆಯ ಇವರೇ ಮೊದಲಾದ ನೂರೊಂದು ವಿರಕ್ತರ ಸಾರ್ಥಕ ಸೇವೆಯಿಂದ ವೀರಶೈವ ಧರ್ಮವು ಸಮೃದ್ಧವಾಗಿ ಬೆಳೆಯಿತು.

೧ ಟಿ. ಎನ್.ಮಲ್ಲಪ್ಪ. ವೀರಶೈವದ ಉಗಮ ಮತ್ತು ಪ್ರಗತಿ ಪು.೯-೧೯೬೯

೨ ಚಂದ್ರಶೇಖರ ಶಾಸ್ತ್ರಿ ಹಿರೇಮಠ-ಬಸವತತ್ವರತ್ನಾಕರ-ಪು.೪೮೨-೧೯೬೯

೩. ಶಿ.ಶಿ.ಬಸವನಾಳ-ವೀರಶೈವ ತತ್ವಪ್ರಕಾಶ-ಪು.೨೫೬-೧೯೭೫

೪. ಡಾ||ಎಂ.ಚಿದಾನಂದಮೂರ್ತಿ-ಲಿಂಗಾಯತ ಅಧ್ಯಯನಗಳು-ಪುಅಟ-೩೬೭-೩೭೦-೧೯೬೬

ಮುಂದೆ ವೀರಶೈವ ಧರ್ಮಕ್ಕೆ ಮಹತ್ವದ ತಿರುವು ದೊರೆತದ್ದು ತೋಂಟದ ಸಿದ್ಧಲಿಂಗ ಯತಿಗಳ ಕಾಲ (ಕ್ರಿ.ಶ.೧೫೫೦) ದಲ್ಲಿ. ಇವರ ಶಿಷ್ಯಪರಂಪರೆ ಅಗಾಧವಾದುದಾಗಿತ್ತು. ಇವರ ಸಮರ್ಥ ನಾಯಕತ್ವದಲ್ಲಿ ಅಂದಿನ ಗುರು-ವಿರಕ್ತರ ಸಂಘಟನೆಯು ವೀರಶೈವ ಧಾರ್ಮಿಕ ಪರಂಪರೆಯನ್ನು ಕಾಪಾಡಿಕೊಂಡು ಬರಲು ಅಗತ್ಯವಾದ ಭೂಮಿಕೆಯು ಸಜ್ಜುಗೊಂಡಿತು. ಅದರ ಫಲವಾಗಿ ವೀರಶೈವ ಧಾರ್ಮಿಕ ಗ್ರಂಥಗಳ ಸಂಕಲನ, ಗುರು-ವಿರಕ್ತರ ಸಂಘಟನೆ, ಮಠ-ಮಾನ್ಯಗಳ ಸ್ಥಾಪನೆ ಮೊದಲಾದ ಬಸವಾದಿ ಪ್ರಮಥರು ಕಂಡಿದ್ದ ಕನಸುಗಳು ಈಗ ನನಸಾಗತೊಡಗಿದವು. ಈ ಪ್ರಕಾರವಾಗಿ ಆವಾಗ ವೀರಶೈವ ಸಂಪ್ರದಾಯವು[೧] ಸಾಕಷ್ಟು ಪ್ರವರ್ಧಮಾನಕ್ಕೆ ಬಂದುಮುಟ್ಟಿತು. ೨೧ನೇಯ ಶತಮಾನದಲ್ಲೂ ವೀರಶೈವ ಧರ್ಮವು ನಾಡಿನ ಪ್ರಮುಖ ಧರ್ಮಗಳಲ್ಲಿ ಒಂದಾಗಿ ಉಳಿದಿದ್ದರೆ ಇದು ಬಹುಮಟ್ಟಿಗೆ ೧೫-೧೬ನೇ ಶತಮಾನಗಳಲ್ಲಿ ನಡೆಸಿದ ವೀರಶೈವ ಧಾರ್ಮಿಕ ನಾಯಕರ ಪ್ರಯತ್ನಗಳೇ ಕಾರಣವೆನ್ನಬಹುದು.

**೪. ವೀರಶೈವ ಮಠಗಳು :-**

ವೀರಶೈವ ಮಠಗಳು ಸಹ ವೀರಶೈವ ಧರ್ಮದಷ್ಟೇ ಪ್ರಾಚೀನವಾದ ಇತಿಹಾಸವನ್ನು ಹೊಂದಿದೆ. ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರ ವಚನ ಚಳವಳಿಯೊಂದಿಗೆ ಪ್ರಚಲಿತವಾಗತೊಡಗಿದ ವೀರಶೈವಧರ್ಮದಲ್ಲಿ ಮಠಗಳೂ ಸಹ ಗಣನೀಯ ಪ್ರಮಾಣದಲ್ಲಿ ಕಾಣಿಸಿಕೊಳ್ಳಲಾರಂಭಿಸಿದವು. ಮುಂದೆ ವೀರಶೈವ ಧರ್ಮಿಯರೇ ಪ್ರಧಾನವಾಗುಳ್ಳ ಪ್ರತಿ ಗ್ರಾಮದಲ್ಲೂ ಒಂದೊಂದು ವೀರಶೈವಮಠ ಕಡ್ಡಾಯವಾಗಿರುತ್ತಿತ್ತು. ಇಷ್ಟೆಲ್ಲಾ ವ್ಯಾಪಕವಾದ ಪ್ರಮಾಣದಲ್ಲಿದ್ದ ವೀರಶೈವ ಮಠಗಳ ಉಗಮ, ಪ್ರಗತಿ ಹಾಗೂ ಪರಂಪರೆಗಳನ್ನು ಕುರಿತು ಈ ಕೆಳಗಿನಂತೆ ಪರಿಶೀಲಿಸಲಾಗಿದೆ.

---

೧. ರಂಗನಾಥ ದಿವಾಕರ-"ವಚನಶಾಸ್ತ್ರ ರಹಸ್ಯ,, ಪುಟ-೧೮೧ ಉದ್ಧೃತ-ಗವಿದೀಪ್ತಿ-೧೯೭೬

## ೪.೧ ಉಗಮ :-

ವೀರಶೈವ ಮಠಗಳ ಉಗಮವನ್ನು ಕುರಿತು ಪ್ರಮುಖವಾಗಿ ಎರಡು ಬಗೆಯ ಅಭಿಪ್ರಾಯಗಳು ಪ್ರಚಲಿತವಾಗಿವೆ. ಮೊದಲನೆಯದು ಸಾಂಪ್ರದಾಯಕ ನಂಬಿಕೆಗಳ ಪ್ರಕಾರ ವೀರಶೈವ ಧರ್ಮ ಬಹಳ ಪುರಾತನವಾದುದು. ಐವರು ಆಚಾರ್ಯರಾದ ಪಂಚಾಚಾರ್ಯರು ಸ್ಥಾಪಿಸಿದ ಮಠಗಳೇ ಪಂಚಪೀಠಗಳಾದವು. ಈ ಪಂಚಾಚಾರ್ಯರು ನಾಲ್ಕು ಯುಗಗಳಲ್ಲಿಯೂ ಬೇರೆ ಬೇರೆ ಹೆಸರುಗಳಿಂದ ಅವತರಿಸಿ ವೀರಶೈವ ಧರ್ಮವನ್ನು ಉದ್ಧರಿಸಿದರು. ಕಲಿಯುಗದ ಆರಂಭದಲ್ಲಿ ಅವತರಿಸಿದ ರೇವಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮ ಮತ್ತು ವಿಶ್ವಾರಾಧ್ಯರು ಅನುಕ್ರಮವಾಗಿ ಬಾಳೆಹಳ್ಳಿ, ಉಜ್ಜಯಿನಿ, ಶ್ರೀಶೈಲ, ಕೇದಾರ ಮತ್ತು ಕಾಶಿ ಕ್ಷೇತ್ರಗಳಲ್ಲಿ ಪವಿತ್ರ ಪೀಠಗಳನ್ನು ಸ್ಥಾಪಿಸಿದರೆಂದು ಹೇಳಲಾಗುತ್ತದೆ.[೧] ಈ ಪಂಚಪೀಠಗಳು ಇಂದಿಗೂ ಉಳಿದುಬಂದಿದ್ದು, ವೀರಶೈವ ಧರ್ಮ ಪ್ರಚಾರವನ್ನು ನಡೆಸುತ್ತಾ ಬಂದಿವೆಯಾದರೂ, ಮೇಲಿನ ಹೇಳಿಕೆಗಳಿಗೆ ವಿಶ್ವಸನೀಯವಾದ ಐತಿಹಾಸಿಕ ಆಧಾರಗಳ ಕೊರತೆಯಂತೂ ಇದ್ದೇ ಇದೆ. ಡಾ|| ಎಸ್. ಸಿ. ನಂದಿಮಠ ಅವರು ಹೇಳುವಂತೆ ಈ ಐದು ಜನ ಆಚಾರ್ಯರು ವೀರಶೈವರ ಪ್ರಥಮ ಬೋಧಕರು, ಅರ್ಥಾತ್ ಅವರೇ ವೀರಶೈವ ಮತ ಸ್ಥಾಪಕರು. ಇದು ಸಾಂಪ್ರದಾಯಕ ನಂಬಿಕೆ ಅಷ್ಟೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಸಪ್ರಮಾಣಿಕ ಐತಿಹಾಸಿಕ ಸಂಗತಿಗಳು ಲಭ್ಯವಿಲ್ಲ ಎಂದು ಹೇಳುತ್ತಾರೆ.[೨]

ಎರಡನೆಯದಾಗಿ ಕಲ್ಯಾಣ ಪಟ್ಟಣದಲ್ಲಿ ಕ್ರಿ. ಶ. ೧೧೫೬ ರಲ್ಲಿ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ "ಶೂನ್ಯ ಸಿಂಹಾಸನಕ್ಕೆ"[೩] ಅಲ್ಲಮಪ್ರಭು ಪ್ರಥಮ ಗುರುವಾಗಿ ಅಲಂಕರಿಸಲ್ಪಟ್ಟಿದ್ದು ಐತಿಹಾಸಿಕ ಸಂಗತಿ.[೩]

---

೧. ಟಿ.ಎನ್.ಚನ್ನಪ್ಪ "ವೀರಶೈವ ಕರದರ್ಪಣ"-ಪುಟ-೧೬-೧೯೨೭ ಹಾಗೂ ಚನ್ನವೀರಸ್ವಾಮಿ-ಹುಬ್ಬಳ್ಳಿ ಎರಡೆತ್ತಿನಮಠ.-"ಲಿಂಗಾಯತ ಮತೋತ್ಪತ್ತಿ ನಿರ್ಣಯ".-೧೮೮೮

೨. ಡಾ||ಎಸ್.ಸಿ.ನಂದಿಮಠ-"ವೀರಶೈವ ಧರ್ಮದ ಕೈಪಿಡಿ-ಅನು-ಪ್ರೇಮಾ ಮಳಿಮಠ ಪುಟ-೨೬೫-೧೯೯೦

೩. ಶಿ.ಶಿ.ಬಸವನಾಳ- "ಅನುಭವ ಮಂಟಪ,,-ವೀರಶೈವ ತತ್ವಪ್ರಕಾಶನ, ಪುಟ-೨೬೫-೧೯೭೫

ವೀರಶೈವ ಧರ್ಮದ ತತ್ವಗಳನ್ನು ಚರ್ಚಿಸಲು ಬಸವಣ್ಣನು ಸ್ಥಾಪಿಸಿದ ಮಹಾಸಭೆ (ಅನುಭವ ಮಂಟಪ)ಗೆ ಪ್ರಭುದೇವನು ಅಧ್ಯಕ್ಷನಾಗಿದ್ದನು. ಕಲ್ಯಾಣದಲ್ಲಿಯ 'ಶೂನ್ಯ ಸಿಂಹಾಸನ' ಎಂಬ ಹೆಸರಿನ ವೀರಶೈವ ಆಚಾರ್ಯ ಪೀಠವನ್ನು ಈತನು ಏರಿ ವೀರಶೈವ ವಿರಕ್ತ ಪರಂಪರೆಗೆ ಮೊದಲಿಗನಾದನು.[೧] ಅಲ್ಲಿಂದ ನಿರಂಜನ ನಿರಾಭಾರಿ ಜಂಗಮ ಸಂಪ್ರದಾಯವು ಪ್ರಾರಂಭವಾಯಿತು.[೨] ಇಂದು ಸಾವಿರಾರು ವಿರಕ್ತ ಮಠಗಳಿವೆ. ಈ ಶೂನ್ಯ ಸಿಂಹಾಸನವೇ ಮೂಲ ಪೀಠವಾಗಿದೆ. ಶೂನ್ಯ ಸಿಂಹಾಸನದ ಪೀಠಾಧಿಕಾರವನ್ನು ಶಿವಾನುಭವ ಚರಂತಿಗೆಯ ಪಟ್ಟವೆಂದೂ ಕರೆಯುತ್ತಾರೆ.[೩] ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಹಾಗೂ ನಂತರದ ಶೂನ್ಯ ಸಂಪಾದನೆಗಳು ಮತ್ತು ಹಲವಾರು ವೀರಶೈವ ಪುರಾಣ ಗ್ರಂಥಗಳು ಶೂನ್ಯ ಸಿಂಹಾಸನದ ಐತಿಹಾಸಿಕದ ಬಗ್ಗೆ ವಿಶೇಷವಾಗಿ ಬೆಳಕು ಚೆಲ್ಲುತ್ತದೆ.

ಹೀಗೆ ಕಲ್ಯಾಣ ಮಂಟಪದಲ್ಲಿ ಪ್ರಾರಂಭವಾದ ವಿರಕ್ತ ಪರಂಪರೆಯು ವಿಜಯನಗರದ ಪ್ರೌಢದೇವರಾಯನ ಕಾಲಕ್ಕೆ ನೂರೊಂದು ವಿರಕ್ತರಿಂದ ಮುಂದುವರೆಯಿತು. ಅನಂತರ ವಾಣಿಜ್ಯಪುರವೆಂದು ಹೆಸರಾಗಿದ್ದ ಹರದನ ಹಳ್ಳಿಯಲ್ಲಿ ಗೋಸಲ ಸಿದ್ಧೇಶ್ವರರು ಪ್ರಭು ಸ್ವಾಮ್ಯನ್ವಯವನ್ನು ಉಜ್ವಲಗೊಳಿಸಿದ ಮಹಂತರು. ಅವರ ಶಿಷ್ಯ ಪರಂಪರೆಯ ಧೃವತಾರೆ ತೋಂಟದ (ಎಡೆಯೂರು) ಸಿದ್ಧಲಿಂಗೇಶ್ವರರು. ಇವರಿಂದಲೇ ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಗಳು ಪುನರುಜ್ಜೀವನಗೊಂಡು ಕರ್ನಾಟಕದಲ್ಲಿ ಮಾತ್ರವಲ್ಲದೇ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ಆಂದ್ರ ಮತ್ತು ತಮಿಳುನಾಡಿನಲ್ಲೂ ವ್ಯಾಪಕವಾಗಿ ಪ್ರಚಾರಗೊಂಡವು.[೪]

---

೧) ಡಾ॥ಎಸ್.ಸಿ.ನಂದಿಮಠ-"ವೀರಶೈವ ಧರ್ಮದ ಕೈಪಿಡಿ"-ಅನು-ಪ್ರೇಮಾ ಮಳಿಮಠ ಪುಟ-೦೨-೧೯೯೦ ಕ.ವಿ.ವಿ.

೨) ಜಿ.ಎಂ.ಉಮಾಪತಿಶಾಸ್ತ್ರಿ-"ವಿವೇಕ ಚಿಂತಾಮಣಿ" ಮುನ್ನುಡಿ-ಪುಟ-೬೨ ಹುಬ್ಬಳ್ಳಿ -೧೯೬೯

೩) ಫ.ಗು.ಹಳಕಟ್ಟಿ-"ನಿರಂಜನ ವಂಶ ರತ್ನಾಕರ"-ಪುಟ-೨/೩-೧೯೩೨

೪) ಜಿ.ಎಂ.ಉಮಾಪತಿಶಾಸ್ತ್ರಿ ಪೂರ್ವೋಕ್ತ-ಪುಟ-೬೨-೧೯೬೯



## ೧೦. ವಿರಕ್ತ ವರ್ಗದ (ಶೂನ್ಯ ಪೀಠದ) ಮಠಗಳು :-

### ೧. ಹಿನ್ನೆಲೆ :-

ವಿರಕ್ತ ಎಂದರೆ ಸನ್ಯಾಸಿಗಳು. ಸನ್ಯಾಸಾಶ್ರಮದ ದೀಕ್ಷೆಯನ್ನು ಪಡೆದು ಸರ್ವಸಂಗ ಪರಿತ್ಯಾಗಿಗಳಾಗಿ ವೈರಾಗ್ಯ ಸಂಪನ್ನರಾದವರು. ಸದಾ ಸಂಚಾರಿಗಳಾದ ಇವರು "ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಯಂತೆ ಸಂಚರಿಸುತ್ತಾ, ಕರಲಭಿಕ್ಷ, ತರುತಲವಾಸ ಮಾಡುವವರು. ಇವರೇ ನಿರಾಭಾರಿ ಜಂಗಮರು",[೧] ಎಂಬ ಇತ್ಯಾದಿಯಾಗಿ ವಿರಕ್ತರನ್ನು ಕುರಿತ ಮಾತುಗಳಿವೆ. "ಜಂಗಮ" ಎಂದರೆ ವೈರಾಗ್ಯಪರನಾದ ಸಂಚಾರಿ.[೨]

ಮೊದಲು ಗುರುವಿನಿಂದ ಅನುಗ್ರಹೀತನಾದವನು ಭಕ್ತ (ವೀರಶೈವ) ನಾಗುತ್ತಾನೆ. ಭಕ್ತನಾದವನು ಆನಂತರ ಸಂಸಾರವನ್ನು ತೊರೆದು ಸಂಚಾರವನ್ನು ಕೈಕೊಂಡು ಜಂಗಮನಾಗುತ್ತಾನೆ.[೩] ಇಷ್ಟಾದರೂ ಇಂತಹ ಜಂಗಮ ಲೌಕಿಕ ಸುಖಗಳಿಂದ ಅತೀತನಾದವನೇನಲ್ಲ. ವಿರಕ್ತತೆ ಇವೆಲ್ಲಕ್ಕೂ ಮೀರಿದ್ದು. ಚೆನ್ನಬಸವಣ್ಣ ಹೇಳುವಂತೆ - "ಶ್ರೀ ಗುರು ಶಿಷ್ಯನ ಭವಿ ಪೂರ್ವಾಶ್ರಮವ ಕಳೆದು ಭಕ್ತನ ಮಾಡಿದ ಬಳಿಕ, ಆ ಭಕ್ತ ಜಂಗಮನಾಗುತ್ತಾನೆ.[೪]

೧೨ ನೇ ಶತಮಾನದಲ್ಲಿ ಜಂಗಮತ್ವಕ್ಕೆ ಹೆಚ್ಚಿನ ಮಾನ್ಯತೆ ಇತ್ತು. "ಗುರುವಿನ ಗುರು ಜಂಗಮ, ಗುರುವಿನ ಗುರು ಪರಮ ಗುರು ಜಂಗಮ" ಎಂಬಿತ್ಯಾದಿ ವಚನಕಾರರ ಮಾತುಗಳು ಜಂಗಮತ್ವದ ಹಿರಿಮೆಗೆ ಹಿಡಿದ ಕನ್ನಡಿಯಂತಿದೆ. ಜಂಗಮತ್ವವು ವಿರಕ್ತತ್ವದ ಹಿಂದಿನ ಹೆಜ್ಜೆಯು.

೧. ನೀಲಕಂಠ ಶಿವಾಚಾರ್ಯಸ್ವಾಮಿಗಳು-'ಹೂಲಿಸಿಂಹಾಸನದ ಸಂಕ್ಷಿಪ್ತ ಇತಿಹಾಸ'-ಪುಟ-೪೦-೧೯೫೩

೨. ಡಾ|| ಎಂ.ಚಿದಾನಂದಮೂರ್ತಿ-ಲಿಂಗಾಯತ ಅಧ್ಯಯನಗಳು - ಪುಟ-೪೮೩-೧೯೮೬ ಮೈಸೂರು.

೩. ಹೆಚ್.ದೇವೀರಪ್ಪ, ಪಂ.ಚನ್ನಪ್ಪ ಎರೆಸೀಮೆ-ಮಹಾನುಭಾವಿ ಶ್ರೀ ಚೆನ್ನಮಲ್ಲಿಕಾರ್ಜುನ -೧೯೮೩ ಹುಬ್ಬಳ್ಳಿ.

೪. "ಚನ್ನಬಸವಣ್ಣನ ವಚನಗಳು'' ಡಾ|| ಆರ್.ಸಿ. ಹಿರೇಮಠ-ವ.೪೨೫೩, ವ.೪೨೪, ವ.೯೯೦ -೧೯೬೫

ಜಂಗಮನಾದವನು ಸರ್ವಸ್ವವನ್ನು ತೊರೆದು ಸಂಪೂರ್ಣ ವೈರಾಗ್ಯ ಪರನಾದಾಗ ವಿರಕ್ತನಾಗುತ್ತಿದ್ದನು.[೧] ಇಂತಹ ವಿರಕ್ತರನ್ನು ನಿರಾಭಾರಿಗಳೆಂದು ಕರೆಯಲಾಗುತ್ತದೆ. ಈ ನಿರಾಭಾರಿ ವಿರಕ್ತ ಇಲ್ಲವೆ ಜಂಗಮ ಸಂಪ್ರದಾಯವು ವೀರಶೈವ ಸಮಾಜದಲ್ಲಿ ಹುಟ್ಟಿಕೊಂಡಿದ್ದೇ ಬಸವಾದಿ ಪ್ರಮಥರ ಕ್ರಾಂತಿಯ ಫಲವಾಗಿ.[೨] ಇದನ್ನೇ ಕಪಟರಾಳ ಕೃಷ್ಣರಾಯರು "ವೀರಶೈವರ ಹೊಸ ಗುರುವರ್ಗ" ಎಂದು ಕರೆದಿದ್ದಾರೆ.[೩]

ಹನ್ನೆರಡನೇ ಶತಮಾನದಲ್ಲಿ ವಿರಕ್ತ ಸಮಯಾಚಾರಕ್ಕೆ ಪರಮ ಗುರುವಾಗಿದ್ದ ಅಲ್ಲಮಪ್ರಭುವು ನಿರಾಭಾರಿ ಜಂಗಮರ ರೀತಿ–ನೀತಿಗಳನ್ನು ಕುರಿತು ಹೇಳುತ್ತ "ನಿಸ್ಸಂಗಿ ಚ ನಿರಾಭಾರಿ ನಿಸ್ಸೀಮಂ ನಿರುಪಾದಿಕಂ, ನಿರ್ದೇಹಂ ನಿರ್ಮಲಂ ನಿತ್ಯಂ ಸತ್ಯಂ ಜಂಗಮ ಲಕ್ಷಣಂ" ಎಂಬುದಾಗಿ "ಶಿವರಹಸ್ಯದ, ಜಂಗಮ ಲಕ್ಷಣಗಳನ್ನು ಉದಾಹರಿಸಿ ಹೊನ್ನು, ಹೆಣ್ಣು, ಮಣ್ಣಿನಾಸೆಯ, ಕೋಪತಾಪವ ಭ್ರಾಂತಿ ಭ್ರಮೆಯ ಬಿಟ್ಟು ಷಡುಲೋಭದ ರುಚಿ ಹಿಂಗಿ ಜಂಗಮವಾದಲ್ಲದೆ ಭವ ಹಿಂಗದು" ಎಂದಿದ್ದಾನೆ.[೪]

೧. ಡಾ॥ ಎಂ. ಚಿದಾನಂದಮೂರ್ತಿ – "ಲಿಂಗಾಯತ ಅಧ್ಯಯನಗಳು'' ಪು–೪೮೩–೧೯೮೬ ಮೈಸೂರು

೨. ಜಿ.ಎಂ.ಉಮಾಪತಿಶಾಸ್ತ್ರಿ 'ವಿವೇಕ ಚಿಂತಾಮಣಿ' ಪ್ರಸ್ತಾವನೆ–ಪು–೫೯–೧೯೮೯ ಹುಬ್ಬಳ್ಳಿ

೩. ಕಪಟರಾಳ ಕೃಷ್ಣರಾಯರು – "ಕರ್ನಾಟಕದ ಲಾಕುಳ ಶೈವರ ಇತಿಹಾಸ'' ಪು–೬೩–೧೯೫೫

೪. ಹೆಚ್.ದೇವೀರಪ್ಪ ಚನ್ನಪ್ಪ ಎರೆಸೀಮೆ "ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು''ಪು–೨೧೬ ಹುಬ್ಬಳ್ಳಿ–೧೯೮೩

ಶರಣರು ಗುರುತಿಸಿರುವಂತೆ ಜೀವ-ಆತ್ಮಗಳ ಸಂಬಂಧವಾದ ಶೂನ್ಯ ವಸ್ತುವಿನ ಜ್ಞಾನವುಳ್ಳ ಮಹಾನುಭಾವಿಯೇ ಜಂಗಮ ಅಥವಾ ಗುರುವಿನ ಗುರು.[೧] ಅಲ್ಲಮ ಪ್ರಭು ಇಂತಹ ಜ್ಞಾನವುಳ್ಳ ಶೂನ್ಯ ವಸ್ತುವಿನ ಮಹಾನುಭಾವಿಯಾದುದರಿಂದಲೇ ಆತನನ್ನು ಜಂಗಮನೆಂದೂ, ಜಗದ್ಗುರುವೆಂದೂ, ಬಸವೇಶ್ವರನು ಪೂಜಿಸಿದನಲ್ಲದೇ ಆತನು ಮಂಡಿಸಿದ ಪೀಠಕ್ಕೆ "ಶೂನ್ಯ ಪೀಠ" ಅಥವಾ "ಶೂನ್ಯ ಸಿಂಹಾಸನ"ವೆಂದು ಹೆಸರಾಯಿತು.[೨] ಹೀಗೆ ಬಸವಣ್ಣನ ಕಾಲದಲ್ಲಿ ಕಲ್ಯಾಣದಲ್ಲಿ ಪ್ರಾರಂಭವಾದ ಶೂನ್ಯಪೀಠವೇ ಮುಂದಿನ ನಿರಾಭಾರಿ ಜಂಗಮ ಸಂಪ್ರದಾಯದ ಅಡಿಗಲ್ಲು. ಇದೇ ವಿರಕ್ತ ಪರಂಪರೆಯ ಮೂಲ ಪೀಠವು. "ಲಿಂಗಾಯತ ಮತೋತ್ಪತ್ತಿ ನಿರ್ಣಯ"ದಲ್ಲಿ ವಿರಕ್ತರು ಹಾಗೂ ಅವರ ಹುಟ್ಟನ್ನು ಕುರಿತು - "ಅನಾದಿ ಪರಶಿವನ ಚಿತ್ಕಳೆಯೇ ಶೂನ್ಯವೆನಿಸಿತು. ಆ ಶೂನ್ಯವೇ ನಿಷ್ಕಲವೆನಿಸಿತ್ತು, ಆ ನಿಷ್ಕಲವೇ ನಿರಂಜನವೆನಿಸಿತ್ತು, ಆ ನಿರಂಜನವೇ ಅಲ್ಲಮಪ್ರಭು ಎನಿಸಿದನು. ಆ ಅಲ್ಲಮ ಪ್ರಭುವಿನ ಸಂಪ್ರದಾಯಕರು ವಿರಕ್ತರಾದ ಕಾರಣ ಇಂಥ ವಿರಕ್ತರೇ ತ್ರಿಭುವನ ವರ್ತಿಗಳಾದ ದೇವದಾನವ, ಮಾನವರುಗಳಿಂದ ಪೂಜ್ಯರು" ಎಂದು ಹೇಳಿದೆ.[೩]

"ನಿರಂಜನ ವಂಶ ರತ್ನಾಕರದಲ್ಲಿ ಶೂನ್ಯ ಸಿಂಹಾಸನದ ಅಧಿಪತ್ಯವನ್ನು ಶಿವಾನುಭವ "ಚರಂತಿಗೆ ಪಟ್ಟ"[೪]ವೆಂದು ಕರೆಯಲಾಗಿದೆ. ಆದಿ ಜಗದ್ಗುರು ಅಲ್ಲಮನಿಂದ ಪ್ರಾರಂಭವಾಗುವ ಶಿವಾನುಭವ ಚರಂತಿಗೆಯ ಪಟ್ಟದ ಹತ್ತೊಂಭತ್ತನೆಯ ಗುರುವಾಗಿದ್ದ ತೋಂಟದ ಸಿದ್ಧಲಿಂಗೇಶ್ವರರು[೫] (ಕ್ರಿ.ಶ. ೧೫೬೦) ಏಳುನೂರು ಮಂದಿ ಚರಮೂರ್ತಿಗಳ ಶಿಷ್ಯಗಣಂಗಳಿಗೆ ಗುರುವಾಗಿದ್ದರು. ಆ ಕಾಲದ ಶಿಷ್ಯಗಣಂಗಳ ಸ್ವಭಾವಾನುಸಾರವಾಗಿ ಏಳುನೂರು ಬುಡಕಟ್ಟಿನ ಮಠಗಳು ನಿರ್ಮಾಣವಾಗಿದ್ದವು. ಈ ಏಳುನೂರು ಬುಡಕಟ್ಟಿನ ಚರಮೂರ್ತಿಗಳ ಕರಸಂಜಾತರಾದ ಮೂರು ಸಾವಿರ ಮಂದಿ ವಿರಕ್ತ ಮಾಹೇಶ್ವರರಿದ್ದರು. ಇವರೆಲ್ಲರಿಗೂ ತೋಂಟದ ಸಿದ್ಧಲಿಂಗೇಶ್ವರರೇ ಜಗದ್ಗುರುಗಳಾಗಿದ್ದರು, ಎಂದು ವರ್ಣಿಸಲಾಗಿದೆ.[೬]

---

೧. ಶಿ.ಶಿ. ಬಸವನಾಳ ವೀರಶೈವ ತತ್ವಪ್ರಕಾಶ ಪ.೨೩೭-೧೯೭೫

೨. ಬಿ.ಶಿವಮೂರ್ತಿ. ವೀರಶೈವ ಸಾಹಿತ್ಯ ಮತ್ತು ಇತಿಹಾಸ ಭಾಗ-೪. ಪು.-೨೬೭ ಬೆಂಗಳೂರು-೧೯೭೦

೩. ಹುಬ್ಬಳ್ಳಿ ಎರಡೆತ್ತಿನ. ಮಠದ ಚನ್ನವೀರಸ್ವಾಮಿ. "ಲಿಂಗಾಯತ ಮತೋತ್ಪತ್ತಿ ನಿರ್ಣಯ'' ಪು.೧೯-೧೮೮೮

೪. ಫ.ಗು. ಹಳಕಟ್ಟಿ. "ನಿರಂಜನ ರತ್ನಾಕರ'' ಭಾಗ-೧. ಪು-೨-೧೯೩೨

೫. ಡಾ|| ಎಲ್. ಬಸವರಾಜು, 'ಮಹಾದೇವನ ಮಹಾಲಿಂಗೇಂದ್ರ ವಿಜಯ. ಪೀಠಿಕಾಭಾಗ'' ಪು-೬೯-೧೯೭೧

೬. ಫ.ಗು. ಹಳಕಟ್ಟಿ. "ನಿರಂಜನವಂಶ ರತ್ನಾಕರ'', ಭಾಗ-೧, ಪು-೪೦, ೪೩-೧೯೩೨

ಈ ಬೆಳವಣಿಗೆಗಳನ್ನು ಆಧರಿಸಿ ಜಿ. ಎಂ. ಉಮಾಪತಿಶಾಸ್ತ್ರಿಯವರು "ಹನ್ನೆರಡನೇ ಶತಮಾನದಲ್ಲಿ ಕಲ್ಯಾಣ ಪಟ್ಟಣದಲ್ಲಿ ಪ್ರಭುದೇವರಿಂದ ಪ್ರಾರಂಭವಾದ ನಿರಾಭಾರಿ ಜಂಗಮ ಸಂಪ್ರದಾಯವು ನಿರಂತರವಾಗಿ ನಡೆದುಬಂತು. ವಿಜಯ ಕಲ್ಯಾಣ ಪುರವಾದ ವಿದ್ಯಾನಗರದಲ್ಲಿ ಈ ಪರಂಪರೆ ನೂರೊಂದು ವಿರಕ್ತರಿಂದ ಮುಂದುವರೆಯಿತು.

ವ್ಯಾಪಾರಿ ಪುರವಾದ ಹರದನ ಹಳ್ಳಿಯಲ್ಲಿ ಗೋಸಲ ಸಿದ್ಧೇಶ್ವರರು ಪ್ರಭು ಸ್ವಾಮ್ಯನ್ವಯವನ್ನು ಉಜ್ವಲಗೊಳಿಸಿದ ಮಹಂತರು. ಅವರು ಶಿಷ್ಯ ಪರಂಪರೆಯ ಧ್ರುವತಾರೆ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರು.[1] ಅವರಿಂದಲೇ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡುಗಳಲ್ಲಿ ವೀರಶೈವ ಮತ, ಸಾಹಿತ್ಯ ಮತ್ತು ಸಂಸ್ಕೃತಿಗಳು ಪುನರುಜ್ಜೀವನಗೊಂಡವು,[2] ಎಂಬುದಾಗಿ ವಿರಕ್ತ ಪರಂಪರೆಯ ಹಿನ್ನೆಲೆಯಲ್ಲಿ ವಿವರಿಸಿದ್ದಾರೆ.

### ೧೧. ಸಮಯ ಬೇಧಗಳು :-

"ಸಮಯ" ಎಂದರೆ ಒಂದು ಒಪ್ಪಿತವಾದ ವ್ಯವಸ್ಥೆ; ಒಂದೇ ಬಗೆಯ ಧಾರ್ಮಿಕ ಆಚರಣೆ " ಬದ್ಧವಾದ ನಿಯಮ ಅಥವಾ ಕಟ್ಟುಪಾಡು ಎಂದರ್ಥ[3] ಈ ವಿರಕ್ತ ಪರಂಪರೆಯಲ್ಲಿ ೧೬ನೇ ಶತಮಾನದ ಆರಂಭದ ವೇಳೆಗೆ ವಿಭಿನ್ನ ಬಗೆಯ ಸಮಯ ಬೇಧಗಳು ಹುಟ್ಟಿಕೊಳ್ಳಲಾರಂಭಿಸಿದವು. ಶೂನ್ಯ ಸಿಂಹಾಸನದ ೨೩ನೇ ಚರಂತಿಗೆ ಪಟ್ಟಾಧಿಕಾರಿಗಳಾಗಿದ್ದ ಕಟ್ಟಿಗೆ ಹಳ್ಳಿ ಸ್ವಾಮಿಗಳ ಕಾಲದ (ಕ್ರಿ.ಶ. ಸುಮಾರು ೧೬೨೦-೧೬೪೦) ವರೆಗೆ ನಿರಂಜನ ಪೀಠಾಧಿಕಾರಿಗಳು ಒಬ್ಬರೇ ಇದ್ದಂತೆ ತಿಳಿದು ಬರುತ್ತದೆ. ಇವರ ಕಾಲದ ನಂತರ ಶೂನ್ಯ ಸಿಂಹಾಸನಾಧಿಕಾರಿಗಳ ಭಿನ್ನ ಸಮಯ ಭೇದಗಳು ಹುಟ್ಟಿಕೊಳ್ಳಲಾರಂಭಿಸಿದವು[4] ಡಾ|| ಎಂ. ಚಿದಾನಂದ ಮೂರ್ತಿಯವರು, ವೀರಶೈವಧರ್ಮದ ಇತಿಹಾಸದಲ್ಲಿ ೧೬ನೇ ಶತಮಾನದ

---

೧) ಡಾ|| ಎಂ. ಚಿದಾನಂದಮೂರ್ತಿ "ಲಿಂಗಾಯತ ಅಧ್ಯಯನಗಳು, ಪು-೨೫೬"-೧೯೮೬

೨) ಜಿ. ಎಂ. ಉಮಾಪತಿಶಾಸ್ತ್ರಿ, 'ವಿವೇಕ ಚಿಂತಾಮಣಿ, ಪ್ರಸ್ತಾವನೆ. ಪು - ೬೨-೧೯೬೯

೩) ಡಾ|| ಎಂ. ಚಿದಾನಂದಮೂರ್ತಿ, " ಹೊಸತು-ಹೊಸತು, ಪು-೩೧೯-೧೯೯೩

೪) ಚನ್ನಮಲ್ಲಿಕಾರ್ಜುನ, "ಸದ್ಧರ್ಮದೀಪಿಕೆ, ಸಂಪುಟ-೧೩, ಸಂಚಿಕೆ-೪೯,೫೧ ಪು-೩-೧೯೪೦

ಆದಿಭಾಗದಲ್ಲಿ ಕಾಣಿಸಿಕೊಂಡ ಐದು ಸಮಯ ಭೇದಗಳು ಯಾವುವೆಂದರೆ ೧) ಕೆಂಪಿನ ಸಮಯ, ೨) ಕುಮಾರ ಸಮಯ, ೩) ಸಂಪಾದನೆಯ ಸಮಯ, ೪) ಚೀಲಾಳ ಸಮಯ, ೫) ಮುರಿಗಾ ಸಮಯ ಎಂದು ಹೇಳಿ; ಮುರಿಗಾ ಶಾಂತವೀರರ ಐವರು ಶಿಷ್ಯರಲ್ಲಿ ಮೊದಲ ನಾಲ್ವರು ಪರಸ್ಪರ ಭಿನ್ನಾಭಿಪ್ರಾಯಗಳು ಬಂದು ವಿರಕ್ತಸಂಪ್ರದಾಯದ ಅವರ ಹೆಸರಿನ ಸಮಯ ಭೇದಗಳಿಗೆ ಕಾರಣರಾದರು ಎಂದಿದ್ದಾರೆ. ಚನ್ನಮಲ್ಲಿಕಾರ್ಜುನರು ಈ ಐದೂ ಸಮಯದ ಮೂಲ ಮಠಗಳನ್ನು ಪ್ರಸ್ತಾಪಿಸುತ್ತ; ಮುರಿಗಿ ಸಮಯಕ್ಕೆ ಮೂಲ ಗುರುಗಳಾದ ಮುರಿಗಾ ಶಾಂತವೀರ ಸ್ವಾಮಿಗಳ ಮಠವೇ ಚಿತ್ರ ಕಲ್‌ದುರ್ಗದಮಠ, ಕುಮಾರ ಸಮಯಕ್ಕೆ ಮೂಲ ಗುರುಗಳಾದ ಕುಮಾರ ಸ್ವಾಮಿಗಳ ಮಠವೇ ಇಸಳೂರುಮಠ, ಅನಂತರ ಕೆಳದಿಸೀಮೆಗೆ ಸೇರಿದ ಜಡೇದಮಠ, ಚೀಲಾಳ ಸಮಯಕ್ಕೆ ಮೂಲ ಗುರುಗಳಾದ ತೋಟದ ಸ್ವಾಮಿಗಳ ಮಠವೇ ಡಂಬಳದ ಮಠ. ಸಂಪಾದನೆಯ ಸಮಯಕ್ಕೆ ಮೂಲಗುರುಗಳಾದ ಸಿದ್ಧವೀರಸ್ವಾಮಿಗಳ ಮಠವೇ ಹಾಗಲವಾಡಿಮಠ, ನಂತರ ಎಂಟಮುರಿಮಠ, ಕೆಂಪಿನ ಸಮಯಕ್ಕೆ ಮೂಲಗುರುಗಳಾದ ಕೆಂಪಿನಪ್ಪನವರ ಶಿಷ್ಯರಾದ ಸಂಗನ ಬಸಪ್ಪನವರ ಮಠವೆ ಹುಮನಾಬಾದಿ ಕಲ್ಯಾಣಸೀಮೆ ಪೈಕಿ ಹುಲೆಕುಂಟೆಯ ಬಸವತೀರ್ಥಮಠವೆಂದೂ ವಿವರಿಸಿದ್ದಾರೆ. ಈ ಐದೂ ಪ್ರಧಾನ ಸಮಯಭೇದಗಾ ಜೊತೆಗೆ ಇನ್ನೂ ಅನೇಕ ಸಮಯ ಭೇದಗಳಿದ್ದುದಾಗಿಯೂ, ಕಾಲಾನಂತರದಲ್ಲಿ ಅವುಗಳೆಲ್ಲಾ ಮೂಲಭೇದಗಳಲ್ಲೇ ವಿಲೀನವಾದಂತೆಯೂ ತಿಳಿದುಬರುತ್ತದೆ.

ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೇಂದರೆ, ಎಲ್ಲಾ ಸಮಯಗಳವರೂ ಅಲ್ಲಮ ಪ್ರಭುವಿನ ಜೊತೆಗೆ ತೋಂಟದ ಸಿದ್ಧಲಿಂಗೇಶ್ವರರನ್ನು ತಮ್ಮಗುರುಗಳನ್ನಾಗಿ ಒಪ್ಪಿಕೊಂಡಿದ್ದಾರೆ ಜೊತೆಗೆ ತಮ್ಮ ಪರಂಪರೆಯನ್ನು ಹೇಳಿಕೊಳ್ಳುವಾಗ ನಿರಾಭಾರಿಜಂಗಮ[2] ಅಲ್ಲಮಪ್ರಭು ಪರಂಪರೆ ಎಂದು ಹೇಳುತ್ತಾರೆ.

---

೧) ಲಿಂಗಾಯತ ಮತೋತ್ಪತ್ತಿ ನಿರ್ಣಯ (ಪು-೨೨)ದಲ್ಲಿ ಮೊದಲು ವಿರಕ್ತರೆಲ್ಲಾ ಒಂದೇ ಸಮಯದವರಾಗಿದ್ದರು. ಆಮೇಲೆ ಮುರಿಗಿ, ಚೀಲಾಳ, ಕುಮಾರ ಸಮಯಗಳೆಂಬ ಭೇದಗಳು ಹುಟ್ಟಿಕೊಂಡವು ಎಂದಿದೆ. ಡಾ|| ಎಲ್. ಬಸವರಾಜು. ಪೀಠಿಕಾಭಾಗ, ಮಹಾದೇವನಮಹಾ ಲಿಂಗೇಂದ್ರವಿಜಯ ಪು-೭೩.-ಚಿತ್ರದುರ್ಗ-೧೯೭೧

೨) ಸಂಪಿಗೆ ಸಿದ್ಧಲಿಂಗಶಾಸ್ತ್ರಿ 'ವಿರಕ್ತಾಶ್ರಮದ ಲಕ್ಷಣ, ಭಾಗ-೧. ಸಿರಸಿ ಗುರುಶಾಂತಶಾಸ್ತ್ರಿ ಪು-೨೫೮. ಕನ್ನಡ ವೀರಶೈವಾನಂದ ಚಂದ್ರಿಕೆ-ಬೆಂಗಳೂರು-೧೯೭೦

ಇಲ್ಲಿ ನಿರಂಜನ ಜಂಗಮ ಆದಿ ಜಗದ್ಗುರು ಅಲ್ಲಮಪ್ರಭುವಿನ ಆದಿಯಾಗಿ ತೋಂಟದ ಸಿದ್ಧಲಿಂಗೇಶ್ವರರ ವರೆಗೆ ಆದ ಗುರುಪರಂಪರೆಯ ವೃಕ್ಷ ಒಂದೇ ಆಗಿದೆ. ಸಮಯ ಭೇದಗಳು ಏನಿದ್ದರೂ ಅವು ಕ್ರಿ.ಶ. ೧೬೬೦ ರಿಂದ ಪ್ರಾರಂಭವಾಗಿ ಅವುಗಳ ಬಹುಭಾಗ ಕ್ರಿ.ಶ. ೧೭೨೦ ರ ಸುಮಾರಿಗೆ ಆದವುಗಳಾಗಿವೆ. ಆಗ ಮುರಿಗಾಶಾಂತವೀರರು (ಮುರಿಗೇಂದ್ರರು) ಹಾಗೂ ಅವರ ಶಿಷ್ಯ ಇಮ್ಮಡಿ ಗುರುಸಿದ್ಧ (ಮುರಿಗಾಗುರುಸಿದ್ಧ) ರ ಕಾಲವಾಗಿತ್ತು.

ವಿರಕ್ತವರ್ಗದವರ ಸಮಯ ಭೇಧಗಳ ಮೂಲಸ್ಥಾನ ಚಿತ್ರದುರ್ಗ ಬೃಹನ್ಮಠವೇ ಆಗಿದೇ. ಅಲ್ಲಿನ ಶಿಖಾ ಪಟ್ಟ, ಶಿವಾನುಭವಪಟ್ಟಗಳ ನಡುವಿನ ಬಿನ್ನಾಭಿಪ್ರಾಯಗಳಿಂದಾಗಿಯೇ ಈ ಸಮಯ ಭೇದಗಳು ಹುಟ್ಟಿಕೊಳ್ಳಲಿಕ್ಕೆ ಕಾರಣವಾಗಿವೆ.[೧] ಒಟ್ಟಿನಲ್ಲಿ ಈ ಸಮಯಭೇದಗಳು ಶೂನ್ಯಪೀಠ ಸಂಬಂಧವಾದ ಜಂಗಮವರ್ಗದವರ ಜಗಳದಿಂದ ಉಂಟಾದುವೇ ಹೊರತು ಯಾವ ಹಿರಿಯ ಜಗದ್ಗುರುಗಳಾಗಲಿ ಪೀಠಾಧಿಪತಿಗಳಾಗಲಿ ಸಂತೋಷದಿಂದ ಏರ್ಪಡಿಸಿಕೊಟ್ಟ ವ್ಯವಸ್ಥಿತ ಒಪ್ಪಂದಗಳೇನಲ್ಲ, ಎಂಬ ಚನ್ನಮಲ್ಲಿಕಾರ್ಜುನರ ಮಾತು ಸಂದರ್ಭೋಚಿತವಾಗಿದೆ.

---

೧) ಫ. ಗು. ಹಳಕಟ್ಟಿ. ನಿರಂಜನವಂಶರತ್ನಾಕರ ಭಾಗ-೧ ಪು.೬೦,೬೧. -೧೯೩೨

**ಚೀಲಾಳ ಸಮಯದ ಪ್ರಸ್ತಾಪ**

ವೀರಶೈವ ಸಮಾಜದಲ್ಲಿ ಗುರುಪೀಠ ಮತ್ತು ವಿರಕ್ತ ಪೀಠವೆಂಬ ಎರಡು ಪ್ರತ್ಯೇಕ ಪೀಠಗಳಿದ್ದು, ವಿರಕ್ತ ಪೀಠದಲ್ಲಿ ಐದು ಸಮಯ ಪರಂಪರೆಗಳಿವೆ. ಇವುಗಳ ಬಗ್ಗೆ ಈಗಾಗಲೇ ವಿವರಣೆ ನೀಡಲಾಗಿದೆ. ಈ ಸಮಯ ಭೇದಗಳು ಇವರು ಕನ್ನಡ ನಾಡಿನ ಒಳಗೂ-ಹೊರಗೂ ಚಲ್ಲುವರಿದಿದ್ದು, ಇವೇ ವೀರಶೈವ 'ಪೀಠ' ಮಠ, ಪರಂಪರೆಗೆ ಮೂಲ ಬೇರುಗಳಾಗಿವೆ. ಇವುಗಳಲ್ಲಿ ಚೀಲಾಳ ಸಂಪ್ರಾದಾಯಕ್ಕೆ ಸಂಬಂಧಪಟ್ಟಂತೆ ಕೆಲವು ಆಕರಗಳು ಇದರ ಮೂಲ ದಾಖಲೆಗಳಿಗೆ ಸಂಬಂಧಪಟ್ಟಿವೆಯೋ? ಎಂಬುದರ ಚಿಂತನೆಯೇ ಇಲ್ಲಿಯ ಫಲಿತ.

ಕನ್ನಡ ನಾಡಿನ ಶಾಸನ ಕಾವ್ಯಗಳಲ್ಲಿ ಚೀಲಾಳ ಸಮಯದ ಪ್ರಸ್ತಾಪ ಮತ್ತೆ ಮತ್ತೆ ಬರುತ್ತದೆ ಇಲ್ಲಿಯ ವರೆಗೆ ಚೀಲಾಳ ಸಮಯ ೧೬ನೇ ಶತಮಾನದ ನಂತರ ಬೆಳೆದು ಬಂದಿದೆ ಎಂಬುದು ವಿದ್ವಾಂಸರ ಅಭಿಪ್ರಾಯ. ಇದಕ್ಕೆ ಸಂಬಂಧಪಟ್ಟಂತೆ ವೀರಶೈವಾಮೃತ ಮಹಾಪುರಾಣ ಮತ್ತು ಪಥ್ವಲ ಶಿವಾಯಣ ಎಂಬ ಎರಡು ಪ್ರಾಚೀನ ಕೃತಿಗಳು ಹಾಗೂ ಕಲ್ಬುರ್ಗಿ ಜಿಲ್ಲೆಯ ಕೆಲ್ಲೂರು ಮತ್ತು ಹಾವೇರಿ ಜಿಲ್ಲೆಯ ಚೌಡದಾನ ಪುರದ ಶಾಸನಗಳು ಚೀಲಾಳ ಸಮಯದ ಪ್ರಸ್ತಾಪವನ್ನು ೧೨ನೇ ಶತಮಾನದಿಂದ ೧೬ನೇಯ ಶತಮಾನದವರೆಗೆ ದೂಡುತ್ತಲೇ ಬಂದಿವೆ. ಈ ಉಲ್ಲೇಖಗಳು ಗುರು ಚೀಲಾಳ ಸಮಯದ ಹುಟ್ಟು, ಬೆಳವಣಿಗೆಗಳ ಬಗ್ಗೆ ಮತ್ತೆ ಮರು ಚಿಂತನೆ ನಡೆಸಬೇಕಾದ ಉಲ್ಲೇಖಗಳಾಗಿವೆ.

ಚೀಲಾಳ ಹೆಸರಿನ ಪ್ರಸ್ತಾಪವಾಗಿ ಕಲ್ಬುರ್ಗಿ ಜಿಲ್ಲೆಯ ಕೆಲ್ಲೂರಿನಲ್ಲಿ ಕಂಡುಬರುವ ಕ್ರಿ. ಶ. ೧೧೨೫ ರ ಶಾಸನ ಪ್ರಮುಖ ದಾಖಲೆಯೆನಿಸಿದೆ. ಕಲಚೂರ್ಯ ಚಕ್ರವರ್ತಿ ರಾಯಮುರಾರಿ ಸೋವಿದೇವ ಮುದೆಗನೂರು ನೆಲೆ ವೀಡಿನಲ್ಲಿದ್ದಾಗ ಆತನಮಹಾಪ್ರಧಾನಿ ಬಮ್ಮರಸಿವೆಂಬವನು ಆಡಳಿತ ಕೈಕೊಂಡಿದ್ದನು. ಈ ಭಾಗವನ್ನು ಹೈಹಯಿವಂಶದ ಅಲ್ಲಹುಲದೇವರಸನು ಮಹಾಮಂಡಳೇಶ್ವರರಾಗಿ ಆಳುತ್ತಿದ್ದ ಸಂದರ್ಭವದು. ಸರ್ವನಮಸ್ಯದಗ್ರಹಾರ ಕೆಲ್ಲೂರಿನ ಮಹಾಜನರು ಮೂಲಿಗರು ಸೇರಿ ಸಿದ್ಧಸಾತೆಗ್ರರ ದೇವರಿಗೆ ಪೂಜೆ-ಪುನಸ್ಕಾರ, ಧೂಪ ದೀಪ, ನೈವೇದ್ಯ ತಾಂಬೂಲ ಅರ್ಚನೆಗಳಿಗಾಗಿ ಅಲ್ಲಿಯ ಆಚಾರ್ಯ ಚಲ್ಲೆಯರ ಪಾದತೊಳೆದು ಬಿಟ್ಟ ಭೂದತ್ತಿಯ ವಿವರ ಕೆಲ್ಲೂರಿನ ಶಾಸನದಲ್ಲಿದೆ. ಕೊಪ್ಪಳ ಗವಿಮಠವು ಚೀಲಾಳ ಸಮಯಕ್ಕೆ ಸಂಬಂಧಿಸಿದ್ದರಿಂದ, ಚೀಲಾಳ ಸಮಯದ ಪ್ರಸ್ತಾಪವು ಇಲ್ಲಿ ಅಗತ್ಯೆ ಇದೆ.

ಚಿಲ್ಲಾಳರ ದ್ವಿತೀಯ ಉಲ್ಲೇಖ ಕ್ರಿ. ಶ. ೧೨೬೫ ರ ಚೌಡದಾನಪುರ ಶಾಸನದಲ್ಲಿದೆ. ತೊರಗಲ್ಲ ನಾಡಿನ ಕಲ್ಲರಸ ದೇವಗಿರಿಯಾದವರ ಅಧಿಕಾರಿ. ಪರಮ ಶಿವಭಕ್ತಳಾದ ಕಲ್ಲರಸನ ಮಡದಿ ವೀರ ಕನ್ನಾದೇವಿ. ಲೊಕ್ಕಿಯಲ್ಲಿದ್ದ ಸಿದ್ಧರೇವಣನ ಶಿಶು ಭಕ್ತ್ಯಾಚಾರದ ಚೀಲಾಳನು ತೊರಗಲೆಯ ಕಲ್ಲರಸನ ಅರಸಿ ವೀರಕನ್ನಾದೇವಿಗೆಶಿವದೀಕ್ಷೆಯನ್ನು ಅನುಗ್ರಹಿಸಿದನು. ಇವಳ ಉಜ್ವಲವೈರಾಗ್ಯ ಜೀವನ ಚೌಡದಾನಪುರದ ಶಾಸನದಲ್ಲಿ ಚಿತ್ರಿತವಾಗಿದೆ. ಸಕಲ ಸಂಪದರನ್ನು ಶಿವಗಣಗಳಿಗೆ ಸಮರ್ಪಿಸಿದ ಗುರು ಚೀಲಾಳದೇವನ ಪರಮಶಿಷ್ಯಳಿಗೆ ಬಹುಶಃ ಈ ವೇಳೆಗೆ ಪ್ರಾರಂಭವಾದ ಚೀಲಾಳ ಸಮಯ ಕ್ರಿ.ಶ. ೧೧೨೫ ರಿಂದ ಪ್ರಾರಂಭವಾಗಿರಬಹುದೇ?.

"ಒಡನೆ ಭವಿಗಳು ನೆನಸಲಾರದ ಹಸುಂಬೆಯರ

ಜಡರೀಕ್ಷಿಸಲ್ಯತ್ರಿ ಲೊಕ್ಕೆಯೆಂಬೂರೊಳಗೆ ಮೆರೆದಂ ಚೀಲಾಳದೇವಂ"॥

ಎಂದು ವೀರಶೈವಾಮೃತ ಪುರಾಣವು ಚೀಲಾಳ ದೇವನ ಪರಿಚಯ ಮಾಡಿಕೊಟ್ಟಿದೆ. ಈತ ಸಿದ್ಧರೇವಣದ ಕಾರುಣ್ಯಶಿಶು "ಭಕ್ತ್ಯಾಚಾರದ ಚೀಲಾಳ, ಜಂಗಮ ಸುಖೈಕ ಗುಣಸದ್ಭಾವಂ" ಎಂಬ ಪದಗಳು ಚೀಲಾಳ ವೀರಶೈವ ಲಿಂಗವಂತ ಧರ್ಮಕ್ಕೆ ಸಂಬಂಧಿಸಿದವನೆಂಬುದು ತಿಳಿದು ಬರುತ್ತದೆ.

**ಶಿವದೇವ ವಿಜಯ:**

ಬಸವಣ್ಣನವರ ದಿವ್ಯಪ್ರಭಾವದ ತರುವಾಯ ಅವತಾರವೆತ್ತಿದ ಚೌಡದಾನಪುರದ ಶಿವದೇವನದು ಬಹು ಮೌಲ್ಯದ ವ್ಯಕ್ತಿತ್ವ. "ಶಿವದೇವ ವಿಜಯ" ಕೃತಿಯಲ್ಲಿ ಪ್ರಕಟವಾದ ಏಳು ಶಾಸನಗಳ ಪೈಕಿ ತೊರಗಲ್ಲಿಗೆ ಸಂಬಂಧಿಸಿದ ಎರಡು ಶಾಸನಗಳಲ್ಲಿ ಅವನ ವ್ಯಕ್ತಿತ್ವ ಸ್ಫುಟವಾಗಿ ರೂಪಗೊಂಡಿದೆ. ಯಾದವ ಮಹಾದೇವನ ಮೂರನೇ ಗುತ್ತರಸನ ಕ್ರಿ.ಶ. ೧೨೬೩ ರ ಶಾಸನ ರೇವಣಸಿದ್ಧ, ಭಕ್ತ್ಯಾಚಾರದ ಚೀಲಾಳದೇವ ಮತ್ತು ವೀರಕನ್ನಾದೇವಿಯರ ಉಲ್ಲೇಖ ಮಾಡಿದರೆ ಐದನೇ ಶಾಸನದಲ್ಲಿ ತೊರಗಲೆಯ ದೇವರಸ ಹಾಗೂ ಶಿವದೇವರ ಅರ್ಥಪೂರ್ಣ ಸಂಭಾಷಣೆ ಚಿತ್ರಿತವಾಗಿದೆ.

ಗುತ್ತಲದ ಗುತ್ತರಸರ ರಾಜಗುರುವಾಗಿದ್ದ ಶಿವದೇವ ಕನಿಷ್ಟ ಕ್ರಿ.ಶ. ೧೨೬೫ ರ ವರೆಗೆ ಬದುಕಿರಬಹುದು. ವೀರಕನ್ನಾದೇವಿ, ಚೀಲಾಳದೇವಿ, ಶಿವದೇವರಿಗೆ ಸಂಬಂಧಿಸಿದ ಒಂದು ಹೇಳಿಕೆ ಚೌಡದಾನಪುರದ ಶಾಸನದಲ್ಲಿದೆ.

"ಕಾರಣಿಕರೆನಿಪರೊಳು ತಾಂ
ಕಾರಣಕನೆನಿಪ್ಪ ಸಿದ್ಧರೇವಣದೇವನ
ಕಾರುಣ್ಯದ ಶಿಶು ಭಕ್ತ್ಯಾ
ಚಾರದ ಚೀಲಾಳದೇವ ಲೊಕ್ಕಿಯೊಳಸದ"

"ಮಿಕ್ಕ ಶಿವಭಕ್ತಿ ಸುಖದಿಂ
ದುಕ್ಕ ಮಹಾದೇವ ಭಾವಭಾರದಿಂ ಜಂಗಮಂ
ಲೆಕ್ಕಿಸದೆ ಗಣ ಸುಖದೊಳಿಹ
ಲೊಕ್ಕಿಯ ಚೀಲಾಳದೇವ ತೊರಗಲೆನಾಡೊಳ್"

"ಒದವಿದ ಶಿವಭಕ್ತಿಯ ಸಂ
ಸಂಪಮಂ ಕಲ್ಲರಸನರಸಿ ಕನ್ನಾದೇವಿಗೆ
ಮುದದಿಂದ ಎತ್ತಿ ಚೀಲಾ
ಳದೇವಂ ಜಂಗಮ ಸುಖೈಕ ಗುಣ ಸದ್ಭಾವಂ"।।

ಪತಿಯ ಮರಣದ ತರುವಾಯ ಕನ್ನಾದೇವಿ ಗುರು ರೇವಣಸಿದ್ಧ ಚೀಲಾಳದೇವರ ಆದೇಶದಂತೆ ಮುಕ್ತಿ ಕ್ಷೇತ್ರವಾದ ಚೌಡದಾನಪುರದಲ್ಲಿ ಕಲಿದೇವಾಲಯ ಕಟ್ಟಿಸಿ ಸಕಲ ಸಂಪದವನ್ನು ಶಿವಗಣಂಗಳಿಗೆ ಸಮರ್ಪಿಸಿ ಪತಿಯ ಅಗಲಿಕೆಯ ನಂತರ ವೈರಾಗ್ಯ ತಾಳಿ ರೇವಣಸಿದ್ದನ ಆದೇಶದಂತೆ ಕಲಿದೇವೇಶ್ವರಕ್ಕೆ ಶಿವದೇವರ ಪಾದತೊಳೆದ ಮೂರನೆಯ ಗುತ್ತರಸ ದತ್ತಿ ಬಿಟ್ಟಿರುವರು.

ಚೀಲಾಳದೇವನ ಮೂರನೇ ಉಲ್ಲೇಖ ಬರುವದು ೧೬ ನೇ ಶತಮಾನದಲ್ಲಿ ಎಡೆಯೂರು ತೋಂಟದಾರ್ಯರ ಗುರು ಪರಂಪರೆಯಲ್ಲಿ ಬೋಳಬಸವಾರ್ಯರು, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣ, ಗಗನಸ್ವಾಮಿ ಕಟ್ಟಿಗೆಹಳ್ಳಿ ಸಿದ್ಧಲಿಂಗರ ತರುವಾಯ ಮುರುಘಾ ಶಾಂತವೀರರು ಚೀಲಾಳದೇವರು ಹೀಗೆ ಪರಂಪರೆ ಬೆಳೆದು ಬಂದಿದೆ. ಮುರುಘಾ ಶಾಂತವೀರಸ್ವಾಮಿ ಚೀಲಾಳ ಸ್ವಾಮಿಗಳ ಸಂಬಂಧದ ಬಗ್ಗೆ ಕನ್ನಡ ಅಧ್ಯಯನ ಪೀಠದ ೨೬೪೯ ನೆಯ ಸಂಖ್ಯೆಯ ವೀರಶೈವಾಮೃತ ಮಹಾಪುರಾಣದ ತಾಳೆ ಪ್ರತಿಯ ಅಂತ್ಯ ಪ್ರಶಸ್ತಿ ಹೀಗಿದೆ.

ಶ್ರೀಮತು ಸತ್ತುಚಿತ್ತಾನಂದ ನಿತ್ಯಪರಿಪೂರ್ಣಮ ವಿರಳ ಪರಂಜ್ಯೋತಿ ಪ್ರಕಾಶ ಸ್ವರೂಪಗಳಾದಂಥ ಷಟಸ್ಥಲ ಬ್ರಹ್ಮಿಗಳಾದ ತೋಂಟದ ಸಿದ್ಧಲಿಂಗೇಶ್ವರನ ಸಂಪ್ರದಾಯಿಕರಾದ ಅಡಿಗೆರಗಿ ಬಂದ ಆತ್ಮರುಗಳಿಗೆ ಸುರುಚಿರದ ಸಿಂಹಾದಿ ಜ್ಞಾನ ಶೂನ್ಯಾಂತವಾದ ನೂರೊಂದು ಕುಳಸ್ಥಳಂಗಳ ಅರಿವಾಚರಣೆಯನು ಪ್ರತಿಪಾದಿಪ ಮೂರ್ತ್ಯಪೀಠವಸ್ತು ಪರಬ್ರಹ್ಮಿ ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರನ ಚಿತ್ಕಾರಕಮಲೋದಯ ಸುಜ್ಞಾನಪುಂಜ ಪ್ರದಸುದ್ವರ್ಣಲೋಷ್ಠಾದಿ ಲೌಕಿಕ ಭೋಗ ತೃಣೀಕೃತ ಭಕ್ತಜನ ಬಂಧು ಆಚಾರಾಗ್ರಣಿ ಬಸವಪ್ರಭು ಚೀಲಾಳ ಸ್ವಾಮಿಗಳ ಪಾದಾರವಿಂದಕ್ಕೆ ಈ ವೀರಶೈವಾಮೃತ ಪುರಾಣವನ್ನು ಕನ್ನಡ ದೇಶದ ರನ್ನಗನ್ನಡಿಯಂತೆ ಶೋಭಿಸುತ್ತಿರ್ಪ ಕಾನಕಾನಹಳ್ಳಿ ವಳಯದ ತುಂಗಣಿ ಗ್ರಾಮದ ಆರಾಧ್ಯ ಬರೆಹದ ಬಸವಲಿಂಗದೇವರು ಮಾರ ಸಮುದ್ರದ ಶರಣಯ್ಯನ ಗುರುಪಾದ ಸೆಟ್ಟಿಯ ಭಕ್ತಿಯೊಂದು ವೀರಶೈವಾಮೃತ ಪುರಾಣವ ಸಮರ್ಪಿಸಿದರು. ಗುರುಪಾದ ಶೆಟ್ಟಿ ಭಕ್ತಿ ಬಸಲಿಂಗದೇವರ ಬರಹ ಇದಕ್ಕೆ ಚೀಲಾಳ ಸ್ವಾಮಿಗಳೇ ಕರ್ತರು. ಪುನರಪಿ ಈ ಶಾಸ್ತ್ರಿಮಂ ಚೀಲಾಳೇಶ್ವರನು ತಮ್ಮ ಕರಸರಸೀಜಾತ ಕಪಿಲ ಸಿದ್ಧಸ್ವಾಮಿಗಳಿಗೆ ಪಾಲಿಸಿದರು.

ಶ್ರೀ-------------------- ಶ್ರೀ---------------- ಶ್ರೀ

ಈ ಪ್ರಶಸ್ತಿ ಗದ್ಯದ ಪ್ರಕಾರ ಚೀಲಾಳ ಸ್ವಾಮಿಗಳ ಸಮಕಾಲೀನ ಬರವಣಿಗೆ ಯಾದ ಪ್ರಶಸ್ತಿಗರ್ಯದೇ ವಿಶ್ವಾಸಾರ್ಹವೆಂದು ಬೇರೆ ಹೇಳಬೇಕಿಲ್ಲ. ಮುರುಘ ಶಾಂತವೀರರೂ ಚೀಲಾಳ ಸ್ವಾಮಿಗಳೂ ಗುರುಶಿಷ್ಯರಾಗಿರದೇ ಇಬ್ಬರೂ ಕಟ್ಟಿಗೆಹಳ್ಳಿ ಸಿದ್ಧಲಿಂಗರ ಶಿಷ್ಯರಾಗಿದ್ದು ಸಮಕಾಲೀನರೆಂದು ಡಾ॥ಎಂ.ಎಂ.ಕಲಬುರ್ಗಿ ಅವರು ಒಪ್ಪಿಕೊಂಡಿರುವರು.[೧] ಈ ಗದ್ಯದಿಂದ ಚೀಲಾಳ ಸ್ವಾಮಿಗಳ ಇನ್ನೊಂದು ಹೆಸರು ಬಸವ ಪ್ರಭುವೆಂದು ತಿಳಿದು ಬರುತ್ತಿದೆ. ಈ ಎರಡೂ ಸಂಗತಿಗಳನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ "ಷಟಸ್ಥಲ ಶಿವಾರ್ಯ" ಹೆಸರಿನ ಕೃತಿ ಬೆಂಬಲಿಸಿದೆ.[೨] ಬಹುಶಃ ಚೀಲಾಳ ಸಮಯ ಭೋಧೆಯನ್ನು ಕಿವಿಯಾರೆ ಹೇಳಿ ಈ ಕೃತಿಯನ್ನು ಬರೆದ ಪುರಾಣದ ಸಿದ್ಧಲಿಂಗಾಚಾರ್ಯ. ಹೀಗಾಗಿ ಈ ಕೃತಿಯು (ಕ್ರಿ.ಶ. ೧೭೦೦) ಚೀಲಾಳಸ್ವಾಮಿ ಜೀವಂತವಾಗಿರುವಾಗಲೇ ಅವರ ಸಮ್ಮುಖದಲ್ಲಿ ಬರೆಯಲಾಗಿದ್ದು ಚಿತ್ರದುರ್ಗದ ಬೃಹನ್ಮಠ ಪ್ರಕಟಿಸಿದ ಮಹಾಲಿಂಗೇಂದ್ರ ವಿಜಯ (ಕ್ರಿ.ಶ. ೧೮೭೦) ರ ಕಾಲದೃಷ್ಟಿಯಿಂದ ಇದು ೧೭೦ ವರ್ಷಗಳಷ್ಟು ಪ್ರಾಚೀನವಾದುದೆಂದು ಈ ಕಾರಣಕ್ಕಾಗಿ ಇದರಲ್ಲಿನ ಘಟನಾವಳಿಗಳು ವಿಶ್ವಾಸಾರ್ಹವೆಂದು ಹೇಳಬಹುದು.[೩]

ಈ ಎಲ್ಲಾ ವಿವರಣೆ ಗಮನಿಸಿದರೆ, ಚೀಲಾಳ ಸಂಪ್ರದಾಯದ ಬೇರುಗಳು ೧೭ನೇ ಶತಮಾನಕ್ಕಿಂತಲೂ ಮೊದಲೇ ಬಹುಶಃ ೧೨ನೇ ಶತಮಾನದಲ್ಲಿ ಬಸವಣ್ಣನ ನಾಡಿನಲ್ಲಿ ಕುಡಿವೊಡೆದುದು ಕಂಡು ಬರುತ್ತದೆ. ಭಾಷಾ ಶಾಸ್ತ್ರದ ಹಿನ್ನಲೆಯಲ್ಲಿ ಅಂದಿನ ಲೊಕ್ಕಿ ಇಂದಿನ ಕೆಲ್ಲೂರು ಆಗಿರುವ ಸಾಧ್ಯತೆ ಇದ್ದು ಅಲ್ಲಿನ ಚಲ್ಯೆಯನೇ ಕಾಲಾಂತರ ಚಿಲ್ಲಾಳ ನಾಮದಿಂದ ಕಾಲಕಾಲಕ್ಕೆ ಜನಿಸಿ ಚೀಲಾಳ ಸಮಯದ ಮೂಲ ಪ್ರೇರಕರಾಗಿದ್ದುದು ಇತಿಹಾಸದಲ್ಲಿ ಸುವಿದಿತವಾಗುತ್ತದೆ.[೪]

---

೧. ಡಾ॥ ಎಂ. ಎಂ. ಕಲಬುರ್ಗಿ –ಮಾರ್ಗ –೩, ಪು–೨೯೨,೨೯೯ ಉದೃತ –"ಬೆಂಗಳೂರು ನಗರದ ವೀರಶೈವ ಮಠಗಳು– ಡಾ॥ಬಿ.ಸಿ.ವೀರಪ್ಪ–೨೦೦೧

೨. ಸಗ್ಗಲದೇವಿಯರ ಶಿಲಾಶಾಸನ ತೊರಗಲ್ಲು ಶಿವಾನುಭವ ಸಂ. ೩–ಸಂ (ಕ್ರಿ.ಶ.೧೧೮೭)–ಫ.ಗು.ಹಳಕಟ್ಟಿ ಮಾಸಿಕ

೩. ಡಾ॥ ಎಂ.ಎಂ. ಕಲಬುರ್ಗಿ ಶಾಸನಗಳಲ್ಲಿ ಶಿವಶರಣರು ಪು–೧೨೦,೧೨೩–೧೯೭೮

೪. ಶಿವದೇವ ವಿಜಯ ಪೀಠಿಕೆ **XXXII**

## ವಿರಕ್ತ ವರ್ಗದ ಮಠಗಳು

ಗುರು–ವೀರಕ್ತ ಪೀಠಾಧಿಕಾರಿಗಳ ನಡುವೆ ಉಡುಗೆ ತೊಡುಗೆ, ಆಚಾರ–ವಿಚಾರ ಮುಂತಾದ ವಿಷಯಗಳಲ್ಲಿ ಮೇಲ್ನೊಟಕ್ಕೆ ಕೆಲವು ಸಾಂಕೇತಿಕ ಸಾಮ್ಯಗಳು ಕಂಡು ಬರುತ್ತವೆಯಾದರೂ :ಗೋತ್ರ–ಸೂತ್ರಾದಿ ಮೂಲಕ್ರಿಯಾಚರಣೆಗಳ ಸಂಬಂಧವಾಗಿ ಸಾಕಷ್ಟು ಭಿನ್ನತೆಗಳಿರುವುದು ಎದ್ದು ಕಾಣುತ್ತದೆ. ಗುರು–ವಿರಕ್ತರಿಬ್ಬರೂ "ಷಟ್‌ಸ್ಥಲ,,[೧] ಮಾರ್ಗಾನುಸಾರಿಗಳೇ ಆಗಿದ್ದರೂ ಸಾಭಾರಿಗಳಾದ ಗುರು ವರ್ಗದವರದು ಕ್ರಿಯಾಪ್ರಾಧಾನ್ಯ ಮಾರ್ಗ ಇವರದು ಕರ್ಮದೀಕ್ಷೆ, ನಿರಾಭಾರಿ,[೨] ವಿರಕ್ತವರ್ಗದವರು ಜ್ಞಾನ ಪ್ರಧಾನ್ಯಮಾರ್ಗ ಇವರದು ಲಯದೀಕ್ಷೆ.[೩]

ಆಶ್ರಮಬದ್ಧರಾದ ಗುರುವರ್ಗದವರ ಮಠಗಳು ಸಾಮಾನ್ಯವಾಗಿ ಊರಿನ ಮಧ್ಯ ಇರುತ್ತವೆ, ಗುರುಗಳಾದವರು ಭಕ್ತರ ಮದ್ಧ್ಯದಲ್ಲಿಯೇ ಇದ್ದು ಅವರ ಸುಖ– ದು:ಖ ಗಳಲ್ಲಿ ಭಾಗಿಗಳಾಗುತ್ತಾ, ಅವರಿಗೆ ಲಿಂಗದೀಕ್ಷೆಯನ್ನು ಕೊಡುವುದರ ಮೂಲಕ ಮತ್ತು ಅವರ ಜನನ, ಮರಣ ಮದುವೆ. ಹಬ್ಬಹರಿದಿನಗಳಲ್ಲಿ ಪೌರೋಹಿತ್ಯ ಕರ್ಮಗಳನ್ನು ನಡೆಸುವದರ ಮೂಲಕ ಅವರ ಬದುಕಿನಲ್ಲಿ ಸನ್ಮಾರ್ಗವನ್ನು ತೋರಿಸುತ್ತಾರೆ. ಅಂತ್ಯದಲ್ಲಿ ಮೋಕ್ಷವನ್ನು ದಯಪಾಲಿಸುತ್ತಾರೆ. ಇದುಗುರುವರ್ಗದವರ ಹಕ್ಕು. ಆಶ್ರಮಾತೀತರಾದ ವಿರಕ್ತ ವರ್ಗದವರು ಸಾಮಾನ್ಯವಾಗಿ ಊರ ಹೊರಗಿರುತ್ತಾರೆ. ಇವರಿಗೆ ಭಕ್ತರ ಪೌರೋಹಿತ್ಯ ಗಳನ್ನು ನಡೆಸುವ ಅಥವಾ ಲಿಂಗವಂತ ದೀಕ್ಷ ನೀಡುವ ಅಧಿಕಾರವಿರುವದಿಲ್ಲ.[೪]

ಪ್ರಾಪಂಚಿಕ ವ್ಯವಹಾರಗಳಂದ ದೂರವಿರುವ ಇವರು ಮಠಮಾನ್ಯಗಳನ್ನು ಕಟ್ಟಿಕೊಂಡು ಒಂದೆಡೆ ಶಾಶ್ವತವಾಗಿ ನಿಲ್ಲದೆ, ಆಸ್ತಿ ಪಾಸ್ತಿಗಳ ಹಂಗಿಲ್ಲದೆ, ಇದೆಲ್ಲಕ್ಕೂ ಮೀರಿದ ಜ್ಞಾನಮಾರ್ಗದ (ಆಧ್ಯಾತ್ಮಸಾಧನೆಯ) ಲ್ಲಿ ಮಗ್ನರಾಗಿರುತ್ತಾರೆ.

---

೧. ಡಾ|| ಎಸ್. ಸಿ. ನಂದಿಮಠ, "ವೀರಶೈವಧರ್ಮದ ಕೈಪಿಡಿ'' ಅನು–ಪ್ರೇಮಾದೇವಿ ಪು–೯ (ಷಟಸ್ಥಲಗಳು–೧) ಭಕ್ತಿ, ಮಹೇಶ, ಪ್ರಸಾದಿ, ಪ್ರಾಣಲಿಂಗ, ಶರಣ, ಐಕ್ಯಸ್ಥಲಗಳು) ಧಾರವಾಡ –೧೯೯೦

೨. ಗೃಹಸ್ಥಜೀವನ ಮತ್ತು ತಾರ್ಕಿಕದೊಡನೆ ಯಾವ ಬಗೆಯ ಸಂಬಂಧಗಳನ್ನು ಇರಿಸಿಕೊಂಡಿರದ ಬ್ರಹ್ಮಚಾರಿಗಳೇ 'ವಿರಕ್ತರು'ಅಥವಾ ನಿರಾಭಾರಿಗಳು,ವೀರಶೈವ ನೈಷ್ಠಿಕ ಬ್ರಹ್ಮಚಾರಿಗಳೇ 'ಸಾಬಾರಿ'ಗಳು ಅಥವಾ ವಿಶೇಷ ವೀರಶೈವರು. (ಡಾ||ನಂದಿಮಠ–ಅದೇ–ಪು.೯)–೧೯೯೦

೩. ಡಾ||ವಿ.ಎಸ್.ಕಂಬಿ ಮಠಗಳ ಆಧ್ಯಾತ್ಮಿಕ ಶಕ್ತಿ ಕೇಂದ್ರಗಳು, "ಕಾಯಕಯೋಗಿ"(೧೯೯೧)ಪು.೧೯.

೪. ಬಿ.ಗುರುಸಿದ್ಧಶಾಸ್ತ್ರಿ. "ಸನ್ಯಾಸಾಶ್ರಮ ವಿಮರ್ಶ ತತ್ವಸ್ಥಿರೀಕರಣ".ಪು.೨೪. ಮೈಸೂರು–೧೯೩೪

ಸರ್ವಸಂಗ ಪರಿತ್ಯಾಗಿಗಳಾದ ನಿರಾಭಾರಿಗಳು ಬಾಹ್ಯಾಡಂಬರಕ್ಕೆ ದೂರ. ಸಾಭಾರಿಗಳು ಕೇವಲ ಬ್ರಹ್ಮಚಾರಿಗಳಷ್ಟೆ ಹಿಂದಿನ ಗುರುವರ್ಗದವರು ವಿವಾಹಿತರೇ ಆಗಿರುತ್ತಿದ್ದರು.[೧] ಇವರಿಗೆ ಸಿಂಹಾಸನ, ಕಿರೀಟ, ಪಲ್ಲಕ್ಕಿ ಮುಂತಾದ ಸಕಲ ವಸ್ತು ವಾಹನಾದಿ ಭೋಗ-ಭಾಗ್ಯಗಳ ಆಡಂಬರ ವೈಭವಗಳುಂಟು. ಸಾಭಾರಿಗಳಿಗೆ ಕೇವಲ ಆಧ್ಯಾತ್ಮ ಸಿರಿಯ ಶೂನ್ಯಸಿಂಹಾಸನವಿದೆ.

ಗುರು-ವಿರಕ್ತ ಪೀಠಗಳ ಉತ್ತರಾಧಿಕಾರತ್ವಕ್ಕೆ ಇರಬೇಕಾದ ಅರ್ಹತೆಗಳಲ್ಲಿ (ಗುರುವು ಏಕಪತ್ನಿ ವ್ರತಸ್ಥನು ಎಂಬೊಂದನ್ನು ಉಳಿದು) ಉಭಯರೂ ಸಮಾನರೇ ಆಗಿದ್ದಾರೆ. ಸಾಭಾರಿ-ನಿರಾಭಾರಿಗಳ ಉತ್ತರಾಧಿಕಾರತ್ವ,[೨] ಹಾಗೂ ಪಟ್ಟಾಧಿಕಾರತ್ವದ ವಿಧಿವಿಧಾನಗಳು ಸಾಮ್ಯವುಳ್ಳವೇ ಆಗಿದ್ದರೂ, ಕೆಲವೊಂದು ಭಿನ್ನತೆಗಳು ಎದ್ದು ಕಾಣುತ್ತವೆ. ಸಾಭಾರಿಗಳು ಪಂಚಕಳಸಗಳನ್ನು ಹೂಡಿದರೆ, ನಿರಾಭಾರಿಗಳು ಷಟ್ಕಳಸಗಳನ್ನು[೩] ಹೂಡುತ್ತಾರೆ. ಆಮೇಲೆ ವಟುವಿಗೆ ಮಸ್ತಕಾಭಿಷೇಕವಾದ ನಂತರ ಹಸ್ತ-ಮಸ್ತಕ ಸಂಯೋಗವಾಗಿ ಪಾದೋದಕ ಪ್ರಸಾದಗಳ ವಿನಿಮಯ ಹಾಗೂ ಷಟಸ್ಥಲ ಜ್ಞಾನೋಪದೇಶಗಳು ಉಭಯರಿಗೂ ಸಮಾನವಾಗಿಯೇ ನಡೆಯುತ್ತವೆ. ಇದೆಲ್ಲಾ ಮುಗಿದ ಮೇಲೆ ಶಿಷ್ಯರು ಭಿಕ್ಷೆಗೆ ಹೋಗುವಾಗ ಬೆನ್ನಿಗೆ ನಿರಾಭಾರಿಯು ಶಿವಾನುಭವ ಗ್ರಂಥಗಳನ್ನು[೪] ಕಟ್ಟಿಕೊಂಡು ಹೋದರೆ, ಸಾಭಾರಿಗೆ ಇಂತಹ ಆಚರಣೆಗಳು ಇರುವದಿಲ್ಲ. ಇನ್ನು ಪಂಚಮುದ್ರೆಗಳು ಉಭಯರಿಗೂ ಸಮ್ಮತವಾಗಿರುತ್ತದೆ.

---

೧. ಡಾ||ಎಂ.ಅಣ್ಣಾಜಪ್ಪ, "ಶ್ರೀ ಅನಾಧಿವೀರಶೈವ ಸಂಗ್ರಹ" ಪು ೬, ಮುನ್ನುಡಿ ಮೈಸೂರು-೧೯೪೮

೨. ಡಾ||ಶಿವಾನಂದ , ಗುಬ್ಬಣ್ಣನವರ,"ಲಿಂಗಾಯತ ಸಂಸ್ಕಾರಗಳು" ಪು, ೬೭-೧೯೮೪

೩. ಡಾ||ಎಂ.ಅಣ್ಣಾಜಪ್ಪ, "ಶ್ರೀ ಅನಾಧಿವೀರಶೈವ ಸಂಗ್ರಹ" ಮುನ್ನುಡಿ ಪು ೧೦, ೧೧.-೧೯೪೮

೪. ಫ.ಗು.ಹಳಕಟ್ಟಿ, 'ನಿರಂಜನವಂಶ ರತ್ನಾಕರ' ಭಾಗ-೧, ಪು-೪೧-೧೯೩೨

ಗುರುಪೀಠಸ್ಥರು ಸಾಮಾನ್ಯವಾಗಿ ಬ್ರಹ್ಮಚಾರಿಗಳಾಗಿರುತ್ತಾರೆ. ಬಯಸಿದರೆ ಗೃಹಸ್ಥರಾಗಲೂಬಹುದು. ಇವರ ಮಠಗಳ (ಹಿರೇಮಠಗಳ) ಲ್ಲಿ ಪೂರ್ವಾಶ್ರಮದ ತಂದೆ-ತಾಯಿ, ಅಣ್ಣ-ತಮ್ಮಂದಿರೆಲ್ಲಾ ಒಟ್ಟಿಗೇ ಇರುವುದುಂಟು. ಉತ್ತರಾಧಿಕಾರತ್ವಕ್ಕೆ ತಮ್ಮ ಅಣ್ಣ-ತಮ್ಮಂದಿರ ಮಕ್ಕಳಲ್ಲೇ ಒಬ್ಬರನ್ನು ಅಥವಾ ತಮ್ಮ ರಕ್ತ ಸಂಬಂಧಿಗಳಲ್ಲಿ ಒಬ್ಬರನ್ನು ಆರಿಸಿಕೊಳ್ಳುತ್ತಾರೆ. ಇವರದು ಪುತ್ರ ಸಂತಾನ ಆದರೆ ವಿರಕ್ತ ಪೀಠಗಳವರದು ಇದಕ್ಕೆ ತದ್ವಿರುದ್ಧವಾದ ನೀತಿ. ಇವರು ಆಜನ್ಮ ಸನ್ಯಾಸಿಗಳು, ಇವರಿಗೆ ಸಂಸಾರ ನಿಷಿದ್ಧ. ಇವರು ವಿರಕ್ತಾಶ್ರಮ ದೀಕ್ಷೆಯನ್ನು ಪಡೆದಾಕ್ಷಣ ಇವರ ಪೂರ್ವಾಶ್ರಮದ ಸಂಬಂಧಗಳೆಲ್ಲಾ ಕಡಿದು ಹೋಗುತ್ತದೆ. ಇವರು ತಮ್ಮ ಉತ್ತರಾಧಿಕಾರತ್ವಕ್ಕಾಗಿ ತಮ್ಮ ಶಿಷ್ಯವರ್ಗದವರಲ್ಲಿ ಒಬ್ಬರನ್ನು ಆರಿಸಿಕೊಳ್ಳುತ್ತಾರೆ. ಇವರದು ಶಿಷ್ಯ ಸಂತಾನ. ಗುರುವರ್ಗದ ಉತ್ತರಾಧಿಕಾರಿ ಜಂಗಮನೇ ಅಂದರೆ ಗುರುಸ್ಥಲ (ಮಠಸ್ಥಲ) ದವನೇ ಆಗಿರಬೇಕೆಂಬುದು ನಿರ್ಬಂಧ. ವಿರಕ್ತ ವರ್ಗದಲ್ಲಿ ಜಂಗಮೇತರರಿಗೂ ಈ ಅವಕಾಶ ಲಭ್ಯವಾಗಿದೆ.[೧]

ಗುರುಪೀಠಸ್ಥರು ಸಾಮಾನ್ಯವಾಗಿ ಸಂಸ್ಕೃತಪರವಾದ ಸಿದ್ಧಾಂತ ಶಿಖಾಮಣಿ, ಶ್ರೀಕರಭಾಷ್ಯ, ಶಿವಾಗಮಗಳು ಮೊದಲಾದ ಸಿದ್ಧಾಂತ ಗ್ರಂಥಗಳನ್ನು ಒಲೈಸಿದರೆ; ವಿರಕ್ತರಿಗೆ ವಚನವಾಙ್ಮಯದ ಕಡೆಗೆ ಹೆಚ್ಚಿನ ಒಲವು. ಬಸವ ಪುರಾಣ, ಪ್ರಭುಲಿಂಗಲೀಲೆ, ಶೂನ್ಯಸಂಪಾದನೆಗಳು ಮತ್ತಿತರ ಕನ್ನಡಪರ ಸಾಹಿತ್ಯ ಗ್ರಂಥಗಳನ್ನು ಇವರು ವಿಶೇಷವಾಗಿ ಆಧರಿಸುತ್ತಾರೆ.

ಹೀಗೆ ಪಂಚಾಚಾರ್ಯರನ್ನು ಎತ್ತಿ ಹಿಡಿಯುವ ಗುರುಪೀಠಗಳಿಗಾಗಲೀ ಅಥವಾ ವಚನಕಾರರನ್ನು ಎತ್ತಿ ಹಿಡಿಯುವ ವಿರಕ್ತ ಪೀಠಗಳಿಗಾಗಲೀ ಕೇವಲ ಧಾರ್ಮಿಕ ವಿಧಿ ವಿಧಾನಗಳನ್ನು ಕುರಿತ ಕರ್ತವ್ಯ ಭೇದಗಳಿವೆಯೇ ಹೊರತು, ಇಬ್ಬರ ಧೇಯ-ಉದ್ದೇಶಗಳೂ ಒಂದೇ ಎಂಬುದನ್ನು ಮರೆಯುವಂತಿಲ್ಲ. ಡಾ|| ಎಂ. ಚಿದಾನಂದ ಮೂರ್ತಿಯವರು ಹೇಳಿರುವಂತೆ "ಗುರು ವಿರಕ್ತ ಪೀಠಗಳೆರಡೂ[೨] ವೀರಶೈವ ಸಮಾಜದ ಭದ್ರತೆಗಾಗಿ, ಪ್ರಗತಿಗಾಗಿ ದುಡಿಯುತ್ತಿರುವ ಧಾರ್ಮಿಕ ಸಂಸ್ಥೆಗಳು. ಅವೆರಡೂ ವೀರಶೈವ ಸಮಾಜದ ಎರಡು ಕಣ್ಣುಗಳಿದ್ದಂತೆ".[೩]

---

೧. ಡಾ||ಎಂ.ಚಿದಾನಂದಮೂರ್ತಿ ಸಮ್ಮೇಳನಾಧ್ಯಕ್ಷರ ಭಾಷಣ, ೪ನೇ ಅ.ಭಾ.ಶ.ಸಾ. ಸಮ್ಮೇಳನ, ಚಿಕ್ಕಮಗಳೂರು. (ಎಪ್ರಿಲ್-೯೬) ಪು-೧೪-೧೯೯೬

೨. ಸಿದ್ಧಗಂಗಾ-ಶ್ರೀ ಚನ್ನಪ್ಪ,ಎರೇಸೀಮೆ, ಪು-೫೫೬-೧೯೮೧

೩. ಡಾ||ಎಂ.ಚಿದಾನಂದಮೂರ್ತಿ, ೪ನೇ ಅ.ಭಾ.ಶ.ಸಾ.ಪ. ಅಧ್ಯಕ್ಷಭಾಷಣ ಸಮ್ಮೇಳನ ಚಿಕ್ಕಮಗಳೂರು ಪು.೧೬-೧೯೯೬

ವೀರಶೈವದ ಮೂಲಬೇರುಗಳಾದ ಹಿಂದೂ ಧರ್ಮ ಅಥವಾ ಅದಕ್ಕಿಂತ ಹೆಚ್ಚು ಪ್ರಾಚೀನವಾದರೂ ಅದೊಂದು ಪ್ರಭಲ ವೈಚಾರಿಕ ಸಿದ್ಧಾಂತವಾಗಿ ರೂಪಗೊಂಡುದುದು ೧೨ ನೇ ಶತಮಾನದಲ್ಲಿ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮೂಹಿಕ ಆಂದೋಲನದಲ್ಲಿ ಅವರು ಬಸವಣ್ಣ ನಿರೂಪಿಸಿದ ಧಾರ್ಮಿಕ ಶಕ್ತಿ ಕೆಲವು ಶಾಶ್ವತ ಸೂತ್ರಗಳನ್ನು ಸಾಮಾಜಿಕ ಜೀವನದ ವಿವಿಧ ಸ್ತರಗಳಿಗೆ ಅನುಸರಿಸಿ ಆಚರಣೆಯಿಂದ ಅವುಗಳನ್ನು ಸಾಧಿಸಿ ತೋರಿಸಿತು. ಯಾವುದೇ ತತ್ವದ ಸತ್ವವನ್ನು ಅದರ ಪ್ರಾಯೋಗಿಕ ಆಚರಣೆಯನ್ನು ಯಶಸ್ಸಿನಲ್ಲಿ ನಿರ್ಧರಿಸಬೇಕೆಂಬುದು ವೈಜ್ಞಾನಿಕ ಸೂತ್ರ.

ಅದನ್ನು ಧರ್ಮಕ್ಕೂ ಅನ್ವಯಿಸಿದವರು ಬಸವಣ್ಣನವರು. ಧರ್ಮದ ಮೂಲಭೂತ ಪರಿಕಲ್ಪನೆಗಳಾದ ಜೀವ, ಜಗತ್ತು, ಈಶ್ವರ ಇವುಗಳ ಪರಸ್ಪರ ಸಂಬಂಧ, ಸ್ವರೂಪ ಮೊದಲಾದವುಗಳನ್ನು ಕುರಿತು ಚರ್ಚೆ ಜಿಜ್ಞಾಸುಗಳು ಒಂದು ಕಡೆಯಲ್ಲಿ ಕೇವಲ ಅಂಧ ಶ್ರದ್ಧೆಯಾಗಿ, ಇನ್ನೊಂದು ಕಡೆಯಲ್ಲಿ ಕೇವಲ ಬೌದ್ಧಿಕ ಕಸರತ್ತಾಗಿ ಪರಿಣಮಿಸಿ ವಿಫಲಗೊಳ್ಳಬಹುದು. ಈ ಎರಡೂ ಅಪಾಯಗಳಿಂದ ಪಾರಾಗಿ ಅವು ಜೀವನದ ಪೂರ್ಣತೆಗೆ ಕಾರಣವಾಗುವ ಆಚರಣೆಯ ಸಾಧನವಾಗುವಂತೆ ಮಾಡುವದು ಧರ್ಮದ ಮುಂದಿನ ಸಮಸ್ಯೆ. ಅದನ್ನು ಒಂದು ಸವಾಲನ್ನಾಗಿ ಎದುರಿಸಿ ಪೂರ್ಣರೂಪವನ್ನು ರೂಪಿಸಿದ ಹಿರಿಮೆ ಬಸವಣ್ಣನದು. ಅಂದು ಅವರ ಕೈಯಲ್ಲಿ ವೀರಶೈವ ಧರ್ಮ ಒಂದು ಹೊಸ ಆಯಾಮವನ್ನು ಪಡೆದು ಪರಿಮಿತ ಜಾತಿ ಮತಗಳ ಸೋಂಕನ್ನು ನಿರ್ನಾಮಗೊಳಿಸಿದ ತಾರಕ ಶಕ್ತಿಯಾಗಿ ಪರಿಣಮಿಸಿದೆ.

ಇದೇ ಮಾರ್ಗದಲ್ಲಿಯೇ ಮುಂದುವರೆದು ಬಂದಂತವು ವೀರಶೈವ ಮಠಗಳು. ಅಂದು ಹಿಂದೂ ಧರ್ಮ ಮತ್ತು ಸಮಾಜದಲ್ಲಿ ದೌರ್ಬಲ್ಯಗಳು ಪರಂಪರಾಗತವಾಗಿ ಬೆಳೆದು ಬಂದವು. ಧರ್ಮದಲ್ಲಿ ಯಜ್ಞಯಾಗಾದಿಗಳು ಅದನ್ನು ಕೇಂದ್ರವಾಗಿ ಉಳ್ಳ ಪುರೋಹಿತ ಶಾಹಿ ದೇವಾಲಯಗಳ ಕರ್ಮಠತನ ಮತ್ತು ಶೋಷಣೆ, ಅದಕ್ಕಂಟಿದ ನೂರಾರು ಜಾತಿಗಳ ಮೇಲು–ಕೀಳುಗಳು, ಅಸ್ಪೃಶ್ಯತೆಯ ಮಾನವೀಯತೆ ಈ ಎಲ್ಲವನ್ನು ಒಂದೇ ಏಟಿಗೆ ದೊರಕುವಂತಹ ವ್ಯಾಪಕ ಧಾರ್ಮಿಕ ಶಕ್ತಿಯನ್ನು ಅಂದು ವೀರಶೈವ ಮಠಗಳು ಸಾಧಿಸಿಕೊಂಡು, ಅದಕ್ಕೆ ಇಷ್ಟಲಿಂಗವೊಂದು ಪರಿಣಾಮಕಾರಿ ಮಾಧ್ಯಮವಾಯಿತು. ಇವರ ಜೊತೆಗೆ ದೇವರಿಗೂ, ಭಕ್ತರಿಗೂ ಮಧ್ಯ ಇರುವ ದಳ್ಳಾಳಿಗಳನ್ನು ತೆಗೆದು ಹಾಕಿ, ಧಾರ್ಮಿಕ ಶೋಷಣೆಯ

ಬುಡವನ್ನೇ ಅಲ್ಲಾಡಿಸಿತು. ಸಾಮಾಜಿಕ ಸಮಾನತೆ ಮತ್ತು ವೈಯಕ್ತಿಕ ವಿಕಾಸ ಈ ಎರಡನ್ನು ಸಾಧಿಸಲು ಶಕ್ತಿ ಕೇಂದ್ರವನ್ನು ಇಷ್ಟಲಿಂಗದ ಮೂಲಕ ಬಸವಣ್ಣನವರು ಗುರುತಿಸಿದರು. ಇದರಿಂದ ಧಾರ್ಮಿಕ ಉಪಾಸನೆ ಸಾಮೂಹಿಕ ಪ್ರದರ್ಶನವಾಗುವ ಬದಲು ವೈಯಕ್ತಿಕ ಅನುಸಂಧಾನವಾಯಿತು. ಮಾರಿಮಸಣಿ ಮೊದಲಾದ ದೇವತೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸಾ ಮೂಲಕ ಬಲಿ ಮೊದಲಾದ ತಾಮಸಿಕ ಆರಾಧನೆಗೂ ಇದು ಏಟು ಕೊಟ್ಟಿತು. ಇಲ್ಲಿ ಬಹಳ ಮುಖ್ಯವಾಗಿ ಗಮನಿಸ ಬೇಕಾದ ಅಂಶಗಳೆಂದರೆ ಬಸವಣ್ಣ ಧಾರ್ಮಿಕ ಉಪಾಸನೆಗಳನ್ನು ಅಭಿವ್ಯಕ್ತಗೊಳಿಸಿದ್ದು. ಧಾರ್ಮಿಕ ಉಪಾಸನೆ ಸಾರ್ವತ್ರಿಕವಾಗಿದ್ದು, ಅದರ ಫಲ ಕೆಲವರಿಗೆ ಮಾತ್ರ ಮೀಸಲಾಗಿದ್ದ ಅಂದಿನ ಸಮಾಜದಲ್ಲಿ ಬಸವಣ್ಣ ಉಪಾಸನೆಯನ್ನು ವೈಯಕ್ತಿಕಗೊಳಿಸಿ ಆರಾಧನೆಯನ್ನು ಸಾರ್ವತ್ರಿಕಗೊಳಿಸಿದ್ದು, ಇಂದು ನಾವು ಗಮನಿಸಬೇಕಾದ ಮಹತ್ವದ ಅಂಶಗಳಾಗಿವೆ.

ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಕ್ಷೇತ್ರಕ್ಕೆ ವೀರಶೈವ ಮಠಗಳು ನೀಡಿದ ಕೊಡುಗೆ ಅಪಾರವಾಗಿದೆ. ಸಮಗ್ರ ಕರ್ನಾಟಕದ ಬಹುಮುಖ ಅಭಿವೃದ್ಧಿಯ ಹಿಂದೆ ಈ ನಾಡಿನ ವೀರಶೈವ ಮಠಗಳ ಪಾತ್ರವನ್ನು ಮರೆಯುವಂತಿಲ್ಲ. ಸರ್ವಸಮಾನತೆಯ ನೆಲಗಟ್ಟಿನ ಮೇಲೆ ಮಾನವೀಯ ಮೌಲ್ಯಗಳನ್ನು ಮತ್ತು ನಿಜಧರ್ಮದ ಬೆಳಕನ್ನು ನೀಡಿದ್ದಲ್ಲದೆ, ದಲಿತ ಸಮುದಾಯಕ್ಕೆ ನ್ಯಾಯ ದೊರಕಿಸಿಕೊಟ್ಟು ಅವರಲ್ಲಿ ಆತ್ಮಗೌರವ ಮೂಡುವಂತೆ ಮಾಡುವಲ್ಲಿಯೂ ವೀರಶೈವ ಮಠಗಳು ಶ್ರಮಿಸಿವೆ.

ರೇವಣಸಿದ್ಧ, ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣ, ತೋಂಟದ ಸಿದ್ಧಲಿಂಗ ಯತಿಗಳು ನಂತರದ ಅಪಾರ ಸಂಖ್ಯೆಯ ವೀರಶೈವ ಗುರುಗಳಿಂದ ವೀರಶೈವ ಧರ್ಮವು ಬದಲಾದ ಕಾಲ, ಪರಿಸರದಲ್ಲಿ ಹೊಸ ಹೊಸ ಮೌಲ್ಯಗಳನ್ನು ರೂಢಿಸಿಕೊಳ್ಳುತ್ತ, ವಿಕಾಸಗೊಳ್ಳುತ್ತ, ಸುಭದ್ರವಾಗಿ ಬೆಳೆಯುತ್ತ ಬಂದಿದೆ.

ಧಾರ್ಮಿಕ, ಸಾಂಸ್ಕೃತಿಕ ಸಂಸ್ಥೆಗಳಾದ ಮಠಮಾನ್ಯಗಳಿಗೂ ಸಮಾಜಕ್ಕೂ ಅವಿನಾಭಾವ ಸಂಬಂಧವಿದೆ. ಒಂದು ಕಾಲಕ್ಕೆ ಸಮಾಜದ ಬದುಕನ್ನು ನಿಯಂತ್ರಿಸಬಲ್ಲ, ರೂಪಿಸಬಲ್ಲ ಮಹತ್ತರವಾದ ಸಂಸ್ಥೆಗಳಾಗಿ ಮಠಮಾನ್ಯಗಳು ಬೆಳೆದು ನಿಂತಿದ್ದವು. ಸಾಂಸ್ಕೃತಿಕ ಪರಿಚಾರಕರಂತೆ ಕೆಲಸ ಮಾಡಿದ ಸಾವಿರಾರು ಮಠಗಳು ದಾಖಲೆಗೆ ಯೋಗ್ಯವಾಗಿದೆ. ಅದರಂತೆ ಹೈದರಾಬಾದ್ ಕರ್ನಾಟಕದ ವ್ಯಾಪ್ತಿಯಲ್ಲಿ ಸ್ಥಾಪನೆಗೊಂಡ ಮಠಗಳು ತಮ್ಮ ವರ್ಚಸ್ಸಿನಿಂದ ಬೆಳೆದು ಮಹತ್ತರವಾದ ಕೊಡುಗೆಯನ್ನು ಕೊಟ್ಟಿರುವದನ್ನು ಯಾರೂ ಅಲ್ಲಗಳೆಯಲಾರರು. ೧೨ ನೆಯ ಶತಮಾನ ಮತ್ತು ಅದಕ್ಕೆ ಮೊದಲು ಸ್ಥಾಪನೆಗೊಂಡ ಸಾವಿರಾರು ಮಠಗಳು ಇಂದು ನಾಡಿನಾದ್ಯಂತ ಅಸ್ತಿತ್ವದಲ್ಲಿದ್ದು ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ನಡೆಸಿ ಪ್ರಭಾವಿ ಮಠಗಳಾಗಿ ಅಭಿವೃದ್ಧಿಗೊಂಡಿವೆ.

ಪ್ರಸ್ತುತ ಸಂಶೋಧನಾ ಗ್ರಂಥದಲ್ಲಿ ಮಠದ ಸ್ಥಾಪನೆ ಬೆಳೆದ ಪರಂಪರೆ ಮಠದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಹಾಗೂ ಶೈಕ್ಷಣಿಕ ಪ್ರಗತಿಯ ಮಾಹಿತಿಗಳನ್ನು ದಾಖಲಿಸಲಾಗಿದೆ. ಈ ಆಕರ ಶೋಧದ ಕೆಲಸ ಮುಂದಿನ ಸಂಶೋಧನೆಗಳಿಗೆ ನೆರವಾಗಲೆಂಬುದೇ ನನ್ನ ಉದ್ದೇಶ.

ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಮಠಗಳ ಅರ್ಥದ ಬಗ್ಗೆ ಈಗಾಗಲೇ ಅನೇಕ ವ್ಯಾಖ್ಯಾನಗಳು ಪ್ರಕಟಗೊಂಡಿದ್ದು, ಮಠ ಎಂದರೆ ಸನ್ಯಾಸಿಗಳು ವಾಸಿಸುವ ಸ್ಥಳವೆಂದೂ ಅಮರಕೋಶದಲ್ಲಿ "ಛಾತ್ರಾದಿನಿಲಯ" ಎಂದೂ ಅರ್ಥವಿದೆ. ಇಲ್ಲಿ ಗುರುಗಳು, ಶಿಷ್ಯರು, ಸನ್ಯಾಸಿಗಳು ವಾಸಿಸುವ ಯೋಗ್ಯ ಸ್ಥಳವೆಂದು ಉಲ್ಲೇಖವಿದೆ. ವೀರಶೈವ ಮಠಗಳ ಮಟ್ಟಿಗೆ ಹೇಳುವದಾದರೆ ಧಾರ್ಮಿಕ ಹಿನ್ನೆಲೆಯಲ್ಲಿ ಆತ್ಮೋದ್ಧಾರ ಮತ್ತು ಸಮಾಜೋದ್ಧಾರದ ಕೆಲಸವನ್ನು ನಡೆಸುವ ಕೇಂದ್ರಗಳೇ ಮಠಗಳಾಗಿವೆ. ಇಲ್ಲಿಯ ಕೇಂದ್ರ ವ್ಯಕ್ತಿ ಇಷ್ಟಲಿಂಗಪೂಜೆಯಿಂದ ಆತ್ಮೋದ್ಧಾರಹೊಂದಿ, ಆ ಮೂಲಕ ಧರ್ಮದಾಸೋಹ ಹಾಗೂ ಕಾಯಕದ ಬಗ್ಗೆ ಬೋಧನೆ ನೀಡುತ್ತ ಸಮಾಜವನ್ನು ತಿದ್ದುವ ಕಾರ್ಯದಲ್ಲಿ ನಿರತನಾಗಿರುತ್ತಾನೆ. ಈ ರೀತಿ ಆತ್ಮೋದ್ಧಾರ ಮತ್ತು ಸಮಾಜೋದ್ಧಾರದ ಅರ್ಥದೊಂದಿಗೆ ಬೆಳೆದ ವೀರಶೈವ ಮಠಗಳು ನಾಡಿನ ಅಭಿವೃದ್ಧಿಗೆ ಪೂರಕವಾಗಿ ಬೆಳೆದು ಬಂದವು.

ವೀರಶೈವ ಮಠಗಳಲ್ಲಿ ಆಚಾರ–ವಿಚಾರಗಳಲ್ಲಿ ವ್ಯತ್ಯಾಸವಿಲ್ಲ. ಆದರೂ ಗುರು ಮತ್ತು ವಿರಕ್ತವರ್ಗ ಎಂಬ ಪ್ರಮುಖ ವರ್ಗಗಳನ್ನು ನೋಡಬಹುದಾಗಿದೆ. ಇವುಗಳಲ್ಲದೇ ಶರಣಸ್ಥಲ ಮಠಗಳು ಮತ್ತು ದಾಸೋಹ ಮಠಗಳೆಂಬ ಪ್ರತ್ಯೇಕ ವರ್ಗಗಳನ್ನು ಗುರುತಿಸಬಹುದಾಗಿದೆ. ಈ ಎಲ್ಲಾ ಮಠಗಳ ಆಚಾರ–ವಿಚಾರಗಳು ಒಂದೇ ಆಗಿದೆ.

ವೀರಶೈವ ಧರ್ಮ ಚಲನಶೀಲ ಗುಣವುಳ್ಳದ್ದು, ಸಮೂಹ ಚಿಂತನೆಯುಳ್ಳದ್ದು. ಇಂತಹ ವ್ಯಾಪಕ ಅರ್ಥದಲ್ಲಿ ಬೆಳೆದ ವೀರಶೈವ ಧರ್ಮ ಮತ್ತು ಧಾರ್ಮಿಕ ಕೇಂದ್ರಗಳಾದ ಮಠಗಳು ಮತ್ತಷ್ಟೂ ವ್ಯಾಪಕಗೊಳ್ಳಬೇಕಿದೆ. ಅಲ್ಲದೇ ವೀರಶೈವ ಧರ್ಮದಲ್ಲಿರುವ ಒಳಪಂಗಡಗಳನ್ನು ಒಟ್ಟು ಗೂಡಿಸಲು ವಿಶಾಲ ತಳಹದಿಯ ವೇದಿಕೆಯನ್ನು ಸಜ್ಜು ಮಾಡಬೇಕಾಗಿದೆ. ಎಲ್ಲಾ ಮಠಗಳು ತಮ್ಮ ತಮ್ಮ ವ್ಯಾಪ್ತಿಯಲ್ಲಿ ಸಂಘಟನಾತ್ಮಕ ಪ್ರಯತ್ನವನ್ನು ಮಾಡಿದ್ದಾದರೇ, ವೀರಶೈವ ಧರ್ಮದಲ್ಲಿರುವ ಕಂದಕಗಳು ಬಹುಬೇಗ ಮುಚ್ಚಬಲ್ಲವು. ಇದರಿಂದ ವ್ಯಕ್ತಿಯಿಂದ ಸಮೂಹ, ಸಮೂಹಗಳಿಂದ ಸಮುದಾಯವನ್ನು ಬಲಿಷ್ಠವಾಗಿ ಬೆಳೆಯಲು ಸಹಾಯಕವಾಗುತ್ತದೆ. ಸಕಲ ಜೀವಾತ್ಮರಿಗೆ ಲೇಸನ್ನು ಬಯಸಲು ಇನ್ನೂ ಹೆಚ್ಚು ಸಾಧ್ಯವಾಗುತ್ತದೆ.

ಧಾರ್ಮಿಕ ಕಾರ್ಯಗಳು :–

ಮಠದ ಆವರಣದಲ್ಲಿರುವ ಕರ್ತೃ ಗುರುಗಳ ಗದ್ದುಗೆ ಹಾಗೂ ಪರಂಪರೆಯ ಗುರುಗಳ ಗದ್ದುಗೆಗಳಿಗೆ ನಿತ್ಯಪೂಜೆ, ಶ್ರಾವಣ ಮಾಸದಲ್ಲಿ ವಿಶೇಷ ಪೂಜೆ ಹಾಗೂ ಹಿರಿಯ ಗುರುಗಳ ವಾರ್ಷಿಕ ಪುಣ್ಯಾರಾಧನೆಯನ್ನು ನಡೆಸಲಾಗುತ್ತಿದೆ. ಮಠದಲ್ಲಿ ಹೊರಗಿನಿಂದ ಬರುವ ಭಕ್ತರಿಗೆ ನಿತ್ಯ ಅನ್ನದಾಸೋಹವನ್ನು ನಡೆಸಲಾಗುತ್ತಿದೆ. ಕಲಿಯುವ ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತಾರೆ.

**ಅಭಿವೃದ್ಧಿ ಕಾರ್ಯ :-**

ಸ್ವಾಮಿಗಳು ಅಧಿಕಾರಕ್ಕೆ ಬಂದ ಮೇಲೆ ಮಠಗಳು ಕಾಲಕಾಲಕ್ಕೆ ಹೊಂದುವಂತ ಅಭಿವೃದ್ಧಿ ಕಾರ್ಯಗಳು ನಡೆದು, ಮಠದ ಜೀರ್ಣೋದ್ಧಾರದ ಕೆಲಸ ಹಾಗೂ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಂಡು ಮಠವನ್ನು ಪ್ರಗತಿದಾಯಕವಾಗಿ ಬೆಳೆಸುತ್ತಿದ್ದಾರೆ ಹಾಗೂ ಆಯಾ ಮಠದ ಸ್ವಾಮಿಗಳು ವೀರಶೈವ ಧರ್ಮದ ಆಚರಣೆಗಳನ್ನು ಸಾಧ್ಯವಾದಷ್ಟು ಜೀವಂತವಾಗಿರಿಸಲು ಪ್ರಯತ್ನ ನಡೆಸಿದ್ದಾರೆ.

## ಕೊಪ್ಪಳದಲ್ಲಿ ಧರ್ಮ ಸಾಮರಸ್ಯ

ನಾಡಿನ ಅನೇಕ ಕಡೆಯಲ್ಲಿ ಹಿಂದೂ-ಮುಸ್ಲೀಂ ಎರಡೇ ಧರ್ಮ ಸಾಮರಸ್ಯವನ್ನು ಕಾಣುತ್ತೇವೆ. ಆದರೆ ಐತಿಹಾಸಿಕ ಹಿನ್ನೆಲೆಯುಳ್ಳ ಕೊಪ್ಪಳದಲ್ಲಿ ಮೂರು-ನಾಲ್ಕು ಧರ್ಮಗಳ ಸಾಮರಸ್ಯವನ್ನು ಕಾಣುತ್ತೇವೆ.

೪ನೇ ಶತಮಾನದಲ್ಲಿ ಚಂದ್ರವಳ್ಳಿ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ "ಕುಪಣ", ೭ನೇ ಶತಮಾನದಲ್ಲಿ ಹಲಗೇರಿ ಶಾಸನದಲ್ಲಿ ರಾಜಕೀಯ ಪ್ರಮುಖ ಕೇಂದ್ರವಾಗಿದ್ದ "ಕೊಪಣ", ೯ನೇ ಶತಮಾನದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರಬುದ್ಧಾವಸ್ಥೆ ತಲುಪಿದ "ವಿದಿತ ಮಹಾ ಕೊಪಣ ನಗರ", ಸರ್ವಧರ್ಮಗಳಲ್ಲಿ ಸಮತೆ ಸಾಧಿಸಿ, ಭಾವೈಕ್ಯತೆ ಮೂಡಿಸಿ ಅವುಗಳನ್ನು ಬೆಳೆಯಿಸುತ್ತ ಬಂದಿದೆ. ಇದು ಬಹು ಧಾರ್ಮಿಕ ಕ್ಷೇತ್ರವಾಗಿದೆ.

ವೇದ ಮೂಲವಾದ ವೈದಿಕ ಧರ್ಮವು ಪ್ರಾಚೀನ ಭಾರತದ ಅನೇಕ ಭಾಗಗಳಲ್ಲಿ ಆಚರಣೆಯಲ್ಲಿದ್ದುದು ಕಂಡು ಬರುತ್ತದೆ. ಈ ಧರ್ಮದ ವಿಶಿಷ್ಟ ಲಕ್ಷಣ ಲೋಕ ಕಲ್ಯಾಣ ಹಾಗೂ ವಿಶ್ವ ಸೃಷ್ಟಿಯ ಮೂಲಭೂತ ಶಕ್ತಿಯಾದ ಬ್ರಹ್ಮ ಸಾಕ್ಷಾತ್ಕಾರ, ಮಗಧ ದೇಶವನ್ನಾಳುತ್ತಿದ್ದ ಕಾಶುಂಡರ, ಕಣ್ಣವರ, ದಕ್ಕನ ಪ್ರಸ್ಥಭೂಮಿಯನ್ನಾಳುತ್ತಿದ್ದ ಶಾತವಾಹನರ, ಕ್ರಿ.ಶ. ೩ನೇ ಶತಮಾನದ

ನಂತರ ಕರ್ನಾಟಕ ರಾಜ್ಯದಲ್ಲಿ ಕದಂಬ, ತೆಲಂಗಾಣ ಪ್ರದೇಶದಲ್ಲಿ ಕಾಂಚಿಯ ಪಲ್ಲವರ ವಂಶದ ರಾಜ ಗುರುಗಳು, ಸಮಕಾಲೀನ ಬ್ರಾಹ್ಮಣರು ಯಜ್ಞ-ಯಾಗಗಳನ್ನು ಮಾಡುತ್ತಿದ್ದುದು ಕಂಡು ಬರುತ್ತದೆ.

ಕ್ರಿ.ಶ. ೧ನೇ ಶತಮಾನದ ಈಗಿನ ಬೆಳಗಾಂ ಜಿಲ್ಲೆಯ ವಡಗಾಂ ಭಾಗದಲ್ಲಿಯ ಮಾಧವಪುರ ಶಾಸನ, ಪ್ರಾಕೃತ ಸ್ತಂಭ ಶಾಸನ ೪ನೇ ಶತಮಾನದ ಕದಂಬ ಅರಸು ಶಾಂತಿವರ್ಮನ ಸ್ತಂಬ ಶಾಸನ,[೧] ಈ ಸಂಪ್ರದಾಯವಿತ್ತೆಂದು ತಿಳಿಸುತ್ತದೆ. ಅನಂತರದ ಕಾಲದಲ್ಲೂ ಈ ಸಂಪ್ರದಾಯ ನಡೆದು ಬಂದುದಕ್ಕೆ ಕರ್ನಾಟಕ ಮತ್ತು ಇತರೆ ಭಾಗಗಳಲ್ಲಿಯ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕೊಪ್ಪಳ ಮಾದಿನೂರು ಗ್ರಾಮದ ಶಾಸನವು ಮೇಲೆ ಹೇಳಿದ ಶಾಸನಗಳ ಸಾಲಿಗೆ ಸೇರಿದ್ದು. ಈ ಶಾಸನದ ಪ್ರಕಾರ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಇಮ್ಮಡಿ ತೈಲಪನು ತನ್ನ ಆಳ್ವಿಕೆಯ ಮೊದಲನೆಯ ವರ್ಷದಲ್ಲಿ ಕಾಶ್ಯಪ ಗೋತ್ರದ ದ್ವಿವೇದಿ ರೇವಯ ಚಟೋಪಾಧ್ಯಾಯ 'ಸೋಮಯಾಜಿ'ಯು "ಬ್ರಹ್ಮಾಂಡಕ್ರತು" ಎಂಬ ಯಾಗವನ್ನು ಮಾಡಿದ ಕಾರಣ, ಅರಸು ತೈಲಪನು ಮಾದಿನೂರ ಗ್ರಾಮವನ್ನು ದತ್ತಿಯಾಗಿ ಚಟೋಪಾಧ್ಯಾಯರಿಗೆ ಕೊಟ್ಟನಂತೆ. ಈ ಚಟೋಪಾಧ್ಯಯರಿಗೆ ದ್ವಿವೇದಿಯೆಂದಿರುವದರಿಂದ, ಇವರು ಎರಡು ವೇದಗಳಲ್ಲಿ ಪರಿಣತರಾಗಿದ್ದರು. ಸೋಮಯಾಗ ಮಾಡಿದವರಾಗಿದ್ದರಿಂದ ಇವರಿಗೆ ಸೋಮಯಾಜಿ ಎಂದು ಕರೆದರಂತೆ. ಇದೇ ಶಾಸನದಲ್ಲಿ ಗಮನಾರ್ಹ ಅಂಶವೆಂದರೆ ಚಟೋಪಾಧ್ಯಾಯ ಬ್ರಾಹ್ಮಣನು ತನಗೆ ಬಂದ ದತ್ತಿಯನ್ನು ಇಪ್ಪತ್ತು ಬ್ರಾಹ್ಮಣ ಮಹಾಜನರಿಗೆ ಹಂಚಿದನು ಮತ್ತು ವಿಷ್ಣು, ಶಿವ, ಸೂರ್ಯ "ತ್ರಿಮೂರ್ತಿಗಳ" ದೇವಾಲಯ ಕಟ್ಟಿಸಿದನು.

ಈ ರೀತಿ ಇತರ ಭಾಗಗಳಲ್ಲಿಯಂತೆ ಕೊಪ್ಪಳ ಪರಿಸರದಲ್ಲಿಯೂ ರಾಜ ಮಹಾರಾಜರ ಹಾಗೂ ಜನರ ಕಲ್ಯಾಣ, ಸುಭಿಕ್ಷೆ, ಶಾಂತಿಗಾಗಿ ಬ್ರಾಹ್ಮಣರು ಯಜ್ಞ-ಯಾಗಾದಿಗಳನ್ನು ಮಾಡುತ್ತಿದ್ದರು. ಬ್ರಾಹ್ಮಣರು ವೇದಾಧ್ಯಯನ ಮಾಡುತ್ತಿದ್ದುದು ಮಾದಿನೂರ ಶಾಸನದಿಂದ ತಿಳಿದು ಬರುತ್ತದೆ.

---

೧. ಬಿ.ಆರ್.ಗೋಪಾಲ.-ಕಾರ್ಪಸ್ ಕದಂಬ ಇನ್ ಸ್ಕ್ರಿಪ್ಶನ್,(ಕದಂಬರ ಶಾಸನ ಅಧ್ಯಯನ ಸಂಸ್ಥೆ), ಶಿರಶಿ. ಶಾಸನ-೪೦-೧೯೪೫

ನಾಲ್ಕು ವೇದಗಳಿದ್ದು – ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದ ಎಂದು ಹೆಸರುಗಳಿವೆ. ಒಂದೇ ವೇದವನ್ನು ಅಧ್ಯಯನ ಮಾಡಿದವರಿಗೆ ಏಕವೇದಿ, ಎರಡು ವೇದಗಳನ್ನು ಅಧ್ಯಯನ ಮಾಡಿದವರಿಗೆ ದ್ವಿವೇದಿ, ಮೂರು ವೇದಗಳನ್ನು ಅಧ್ಯಯನ ಮಾಡಿದವರಿಗೆ ತ್ರಿವೇದಿ ಮತ್ತು ನಾಲ್ಕು ವೇದಗಳನ್ನು ಓದಿದವರಿಗೆ ಚತುರ್ವೇದಿ ಎಂದು ಕರೆಯುತ್ತಾರೆ. ಕೊಪ್ಪಳದಲ್ಲಿ ಏಕ ವೇದಾಧ್ಯಯನದ ಅನುಯಾಯಿಗಳಿದ್ದಾರೆ. ಇವರಲ್ಲಿ ಋಗ್ವೇದಿಗಳೇ ಹೆಚ್ಚು ಜನರಿದ್ದಾರೆ. ಉಳಿದವರು ಕಡಿಮೆ ಇದ್ದಾರೆ. ಇವರುಗಳು ಇಂದಿಗೂ ವೈದಿಕ ವಿಧಿಗಳನ್ನು ಆಚರಿಸುತ್ತಾರೆ. ಕೋಟೆಯಲ್ಲಿರುವ ಶಂಭುಲಿಂಗನ ದೇವಾಲಯದಲ್ಲಿ ಮಹಾರುದ್ರ ಯಾಗವನ್ನು ಆಚರಿಸುತ್ತಾರೆ ಮತ್ತು ರಾಘವೇಂದ್ರ ಸ್ವಾಮಿಗಳವರ ಮಠಕ್ಕೆ ರೂಢಿಯಲ್ಲಿ ರಾಯರ ಮಠ ಎನ್ನುತ್ತಾರೆ. ಇಲ್ಲಿಯೂ ಯಾಗಗಳನ್ನು ಆಚರಿಸುತ್ತಿರುವದು ತಿಳಿಯುತ್ತದೆ.

**ಶೈವಧರ್ಮ** :– "ಮೋಹೆಂಜೋದಾರೋ–ಹರಪ್ಪ" ಉತ್ಖನನದಿಂದ ದೊರೆತ ಅವಶೇಷಗಳ ಆಧಾರದಿಂದ ಈ ನಾಗರಿಕತೆ ಅತೀ ಪ್ರಾಚೀನವಾದುದೆಂದು ತಜ್ಞರ ಅಭಿಪ್ರಾಯ. ಉತ್ಖನನದಲ್ಲಿ ದೊರೆತ ಮುದ್ರಿಕೆಗಳ ಅಧ್ಯಯನದಿಂದ ಅವುಗಳಲ್ಲಿಯ ಚಿತ್ರಗಳಲ್ಲಿ ಒಂದನ್ನು ಪಶುಪತಿ ಮುದ್ರಿಕೆಯೆಂದು ಅಭಿಪ್ರಾಯ. ಅಧಿಕೃತವಾಗಿ ಇದು ಪಶುಪತಿ ಮುದ್ರಿಕೆಯೆಂದು ತಿಳಿದಲ್ಲಿ ಶೈವ ಧರ್ಮ ಅತ್ಯಂತ ಪ್ರಾಚೀನವಾದುದು. ಲಿಪಿ ಸಂಪೂರ್ಣವಾಗಿ ಓದಲು ಇನ್ನು ಸಾಧ್ಯವಾಗಿಲ್ಲವೆಂದು ಸಂಶೋಧಕರ ಅಭಿಪ್ರಾಯವಾಗಿದೆ.

ಪ್ರಾಚೀನ ಆಕರಗಳಲ್ಲಿ ಪಾಶುಪತರು, ಕಾಳಾಮುಖರು ಮತ್ತು ಕಾಪಾಲಿಕರು ಶಿವನ ಉಪಾಸಕರೆಂದು ಉಲ್ಲೇಖಿಸಲ್ಪಟ್ಟಿದೆ. ಪುರಾತತ್ವ ಆಕರಗಳಿಂದ ಇಲ್ಲಿ ಒಂದನೇ ಶತಮಾನದಂದಲೇ ಶೈವ ಧರ್ಮ ಊರ್ಜಿತದಲ್ಲಿತ್ತೆಂದು ಹೇಳಬಹುದು.

ಹಿರೇಹಡಗಲಿಯ ತಾಮ್ರ ಶಾಸನದಲ್ಲಿ "ಶಿವಸ್ಕಂದವರ್ಮ" ತಾಳಗುಂದ ಶಾತಕರಣಿ ಅರಸನಿಂದ ಪೂಜಿಸಲ್ಪಟ್ಟ "ಮಹಾದೇವ" ವಾಸನ "ಚಂಡ–ಶಿವ" ಈ ಉಲ್ಲೇಖಗಳು ಈ ಭಾಗದಲ್ಲಿ ಶೈವ ಧರ್ಮ ಆಚರಣೆಯಲ್ಲಿತ್ತೆಂದು ತಿಳಿಸುತ್ತಿವೆ.

ಕುಕನೂರಲ್ಲಿ ಮಲ್ಲಿಕಾರ್ಜುನ ದೇವಾಲಯದಲ್ಲಿರುವ ಶಾಸನದಲ್ಲಿ "ಶ್ರೀ ಮಲ್ಲಿಕಾರ್ಜುನ ದೇವರ ನಂದಾದೀವಿಗೆ", ಅಳವಂಡಿಯ ಮಠದ ಶಾಸನದಲ್ಲಿ "ವೇದನಾಂದ ಮಠಸತ್ರ ಸದಾಶಿವ ವಿಷ್ಣುವಾಗ್ನಿ" ಮತ್ತು ಮಾದಿನೂರ ಶಾಸನದಲ್ಲಿ "ತ್ರೈಪುರುಷ" ದೇವರ ಪ್ರತಿಷ್ಠೆ. ತ್ರೈಪುರುಷ ಎಂದರೆ – ವಿಷ್ಣು, ಶಿವ, ಸೂರ್ಯ ಇವುಗಳಿಂದ ವ್ಯಾಪಕವಾಗಿರುವ ಕೊಪ್ಪಳದಲ್ಲಿ ಶೈವ ಧರ್ಮವು ಆಚರಣೆಯಲ್ಲಿದ್ದುದು ನಿರ್ವಿವಾದ. ಕೊಪ್ಪಳದಲ್ಲಿ ದೊರೆತ ಶಾತವಾಹನರ ಕಾಲದ ನಾಣ್ಯದಲ್ಲಿ ಮಹಾರಥಿಸ–ಶಿವಸತಕನಿಸಾ, ಇಲ್ಲಿ "ಶಿವ" ಎಂಬ ಪದವಿರುವದರಿಂದ ಇಲ್ಲಿ ಶೈವ ಧರ್ಮ ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿ ಇದ್ದುದನ್ನು ದೃಢೀಕರಿಸುತ್ತದೆ. ಇಲ್ಲಿರುವ ವಿವಿಧಾಕಾರದ ಶಿವಲಿಂಗಗಳೂ ಸಹ ಇದನ್ನೇ ಎತ್ತಿಹಿಡಿದಿವೆ.

ಕೊಪ್ಪಳದಿಂದ ಪಶ್ಚಿಮಕ್ಕೆ ಸಾಗುವ ಗದಗ ಹೆದ್ದಾರಿಯಲ್ಲಿ ೩ ಕಿ.ಮೀ. ದೂರದಲ್ಲಿ ಕವಲೊಡೆವ ದಾರಿ ಮಳೆಯ ಮಲ್ಲೇಶ್ವರನಿಗೆ ಹೋಗುತ್ತದೆ.

ಇಲ್ಲಿಯ ಗವಿಯಲ್ಲಿ ಕಲ್ಲಿನಲ್ಲಿ ಸಮಾನಾಂತರದ ಎರಡು ಸರಳ ರೇಖೆಗಳನ್ನು ಎಳೆದು ಈ ರೇಖೆಗಳ ಕೊನೆಯ ಬಿಂದುಗಳಿಂದ ವಿರುದ್ಧ ದಿಕ್ಕಿನಲ್ಲಿ ಎರಡೂ ರೇಖೆಗಳನ್ನು ಕೂಡಿಸಿದ್ದಾರೆ. ಮೇಲಿನ ಸಮಾನಾಂತರ ಸರಳ ರೇಖೆಯ ಮಧ್ಯದಲ್ಲಿ ಲಿಂಗಾಕಾರದ ಗೆರೆ ಎಳೆದಿದ್ದಾರೆ. ಇದು ಶಿವನ ಸಂಕೇತವೆಂದು ಭಾವನೆ. ನಂದಿಯ ಚಿತ್ರವೂ ರೇಖೆಯಲ್ಲಿದೆ. ಈ ಗವಿಗೆ ಸ್ಥಳೀಯರು ಗುಮ್ಮಣ್ಣನ ಗವಿಯೆಂದು ಕರೆಯುತ್ತಾರೆ. ಈ ಬೆಟ್ಟದಲ್ಲಿ ವಿಶ್ವನಾಥನ ಮೂರ್ತಿ ಇದೆ. ಶ್ರಾವಣ ಮಾಸದಲ್ಲಿ ಇದಕ್ಕೆ ಪರವು ಮಾಡುತ್ತಾರೆ. ಅಂದರೇ ಜೋಳದ ನುಚ್ಚಿನ ಹುಗ್ಗಿಯ ಸಂತರ್ಪಣೆ. ಹೀಗಾಗಿ ಇಡೀ ಕೊಪ್ಪಳದಲ್ಲಿ ಶಿವನ ಅನೇಕ ಭಂಗಿಗಳಿರುವದು ಹಾಗೂ ಶೈವ ಧರ್ಮವು ಪ್ರಬಲವಾಗಿತ್ತೆಂದು ತಿಳಿಯುತ್ತದೆ.

**ವೈಷ್ಣವ ಧರ್ಮ** :– ಇನ್ನು ವೈಷ್ಣವ ಧರ್ಮವು ಕೂಡಾ ಕೊಪ್ಪಳ ನಾಡಿನಲ್ಲಿ ತುಂಬಾ ಪ್ರಚಲಿತವಾಗಿತ್ತೆಂದು ಮಾದಿನೂರ ಶಾಸನದಿಂದ ತಿಳಿಯುತ್ತದೆ. ಸಿ. ಆರ್. ಕೃಷ್ಣಮಾಚಾರುಲು ಸಂಪಾದಿಸಿದ ಕೊಪ್ಪಳದ ಕನ್ನಡ ಶಾಸನಗಳಲ್ಲಿ ವಿಜಯ ನಗರದ ಅರಸು ಕೃಷ್ಣದೇವರಾಯನು ಕ್ರಿ.ಪು. ೧೫೨೧ ರಲ್ಲಿ, ಭಂಡಾರದ ತಿಮ್ಮಪ್ಪಯ್ಯನವರಿಗೆ ದಯಪಾಲಿಸಿದ ಹಿರೇಸಿಂದೋಗಿ ಗ್ರಾಮವನ್ನು ಕೊಪ್ಪಳದ ಚೆನ್ನಕೇಶವ ದೇವ ಸೇವೆಗೆ ದತ್ತಿಯಾಗಿ ಕೊಟ್ಟನು. ಇಲ್ಲಿಯ ವೆಂಕಟೇಶ್ವರ ಭಾವಿಯಲ್ಲಿ

ಕೆತ್ತಿದ ಚಕ್ರ-ನಾಮ-ಶಂಖ ಇವು ವೈಷ್ಣವ ಧರ್ಮ ಇಲ್ಲಿ ಆಚರಣೆಯಲ್ಲಿದೆ ಎಂಬುದನ್ನು ದೃಢೀಕರಿಸುತ್ತದೆ. ಅತೀ ಪುರಾತನ ರಾಮ ಮಂದಿರವಿದೆ. ಇದರ ಸೇವೆ ಇಂದಿಗೂ ನಡೆಯುತ್ತಿದೆ. ಅನ್ವೇಷಣೆಯ ನಂತರ ವಿಷ್ಣುವಿನ ಉಪಾಸಕರು ಕೊಪ್ಪಳದಲ್ಲಿ ಸಾಕಷ್ಟು ಸಂಖ್ಯೆಯಲ್ಲಿರುವದು ತಿಳಿಯುತ್ತದೆ.

**ಜಿನ ಧರ್ಮ :-** ಜಿನ ಧರ್ಮವೂ ಕೂಡಾ ಕೊಪ್ಪಳದಲ್ಲಿದ್ದು ಅದರ ಆಚರಣೆಯನ್ನು ಹೊಂದಿದ ಜನತೆ ಇದ್ದಾರೆ. ಸ್ಥಳೀಯರು ಕರೆವ ಚಂದ್ರಾಮ ಬಂಡೆ ಶಾಸನದಲ್ಲಿ ಮತ್ತು ಪಾಲ್ಕಿ ಗುಂಡಿನ ಪೂರ್ವಕ್ಕಿರುವ ಜೋಡು ಪಡಿಯಲ್ಲಿಯ ಶಾಸನಗಳಲ್ಲಿ ಕುಂದ ಕುಂದಾನ್ವಯ ಉಲ್ಲೇಖಗಳಿವೆ. ಇವರಿಂದಲೇ ಕ್ರಿ.ಶ. ಒಂದನೇ ಶತಮಾನದಿಂದ ಕೆಲವು ಶತಮಾನದ ನಂತರ ಜಿನ ಧರ್ಮವು ಕೊಪ್ಪಳಕ್ಕೆ ಸಾಗಿ ಬಂದಿರಬೇಕೆಂದು ತಿಳಿಯುತ್ತದೆ. ಬಸದಿಗಳು, ಸಂಘಗಳು, ಪಾದಗಳು ಇದ್ದು ಜಿನ ಮುನಿಗಳು ಸಲ್ಲೇಖನ ವ್ರತ ಕೈಕೊಂಡ ಕುರುಹುಗಳು ಸಿಗುತ್ತವೆ ಹಾಗೂ ಕಾವ್ಯಗಳು, ಚರಿತೆಗಳು, ಶಾಸನಗಳು ಜಿನ ಧರ್ಮಕ್ಕೆ ಕೊಪ್ಪಳವು ತೀರ್ಥಸ್ಥಾನವಾಗಿತ್ತೆಂದೂ ತಿಳಿಸುತ್ತವೆ.

**ಬೌದ್ಧ ಧರ್ಮ :-** ಸಿದ್ಧಾರ್ಥನಿಂದ ಬೋಧಿಸಿದ ಧರ್ಮವೇ ಬೌದ್ಧ ಧರ್ಮವೆಂದೂ, ನಂತರ ಅಶೋಕನು ಈ ಧರ್ಮದ ಉಪಾಸಕನಾದನು. ಕೊಪ್ಪಳದಲ್ಲಿ ಈತನು ತನ್ನ ಅಧಿಕಾರಿಗಳ ಮುಖಾಂತರ ಎರಡು ಶಾಸನಗಳನ್ನು ಕೆತ್ತಿಸಿದ್ದಾರೆ. ಎರಡು ಧರ್ಮ ಶಾಸನಗಳಿರುವ ಅಪರೂಪದ ಸ್ಥಳಗಳಲ್ಲಿ ಕೊಪ್ಪಳವೂ ಒಂದು. ಆಗ ಇವರು ಆಡುತ್ತಿದ್ದ ಭಾಷೆ ಪ್ರಾಕೃತವಾದುದರಿಂದ ಈ ಸಂದೇಶ ಪ್ರಾಕೃತ ಭಾಷೆಯಲ್ಲಿದೆ.

**ಗವಿಮಠ :-** ರುದ್ರಮುನಿ ಶಿವಯೋಗಿಗಳ ಕೃಪ ಗವಿಗೆ ಮತ್ತೆ ಕಳೆ ಬಂದಿತು. ಆ ಬೆಳಕು ಗವಿಯಿಂದ ಎಲ್ಲೆಡೆ ನಿಧಾನವಾಗಿ ಪಸರಿಸಲಾರಂಭಿಸಿತು. ಈ ಶ್ರೀಗಳವರ ಪರಂಪರೆಯಲ್ಲಿ ಜಗದ್ಗುರು ಗವಿಸಿದ್ದೇಶ್ವರ ಪೂಜ್ಯರ ಲೀಲೆ, ಸಿದ್ಧಿ, ಬೆಳಕು ಇನ್ನೂ ಹೆಚ್ಚಿಸಿದುವು. ಅಂದಿನಿಂದ ಇದು ಗವಿಮಠವೆಂದು ಪ್ರಸಿದ್ಧಿ ಪಡೆಯಿತು. ಅನೇಕ ಲೀಲೆಗಳನ್ನು ಭಕ್ತ ಜನರಿಗೆ ನಂಬಿಕೆ ಹುಟ್ಟಿಸಿ, ವೀರಶೈವ ಧರ್ಮದ ಬಗ್ಗೆ ಆಸಕ್ತಿ ಹುಟ್ಟಿತು. ಜೈನರಾದ ಭರಮಗೌಡರಿಗೂ ಆಶೀರ್ವದಿಸಿದ್ದರಿಂದ ಅವರೂ ಗವಿಮಠದ ಭಕ್ತರಾದರು. ಮಾಲೀಪಾಟೀಲ ಬಸನಗೌಡರ ಮನೆಯಲ್ಲಿ ಬಾಲಯೋಗಿಯು

ತನ್ನ ಜಡೆಯ ನೀಡಿದರು. ಇದು ಇಂದಿಗೂ ಜಡೆಗೌಡರ ಮನೆಯಲ್ಲಿ ಪೂಜೆಗೊಳ್ಳುತ್ತದೆ. ಹೀಗಾಗಿ ಅನ್ಯಮತ, ಧರ್ಮದ ಜನರೂ ಮಠದ ಭಕ್ತರಾದರು.

**ವಿಶ್ವಬ್ರಾಹ್ಮಣ ಧರ್ಮ :-** ಗುಲ್ಬರ್ಗಾ ಜಿಲ್ಲಾ ತಿಂಥಣಿಯಲ್ಲಿ ನೆಲೆಸಿದ್ದ ಪೂಜ್ಯ ಮೌನೇಶ್ವರ ಸ್ವಾಮಿಗಳ ಅನುಗ್ರಹ ಪಡೆದು ಶ್ರೀಶೈಲ ಸ್ವಾಮಿಗಳು ಸಂಚರಿಸುತ್ತಾ ಪುಣ್ಯಭೂಮಿ ಕೊಪ್ಪಳಕ್ಕೆ ಬಂದರು. ಅಲ್ಲಿ ದಕ್ಷಿಣ ದಿಕ್ಕಿನಲ್ಲಿ ಪ್ರಶಾಂತ ಸ್ಥಳದಲ್ಲಿ ನೆಲೆಸಿದರು. ಮಠವು ನಿರ್ಮಾಣಗೊಂಡಿತು. ನಂತರ ಇಲ್ಲಿಯೇ ಸಮಾಧಿಸ್ತರಾದರು. ನಂತರ ಇವರ ಸಹೋದರ ಧರಣಪ್ಪಯ್ಯನವರಿಂದ ವಂಶ ಪ್ರಾರಂಭವಾಗುತ್ತದೆ. ಇವರಲ್ಲಿ ಶಿರಸಪ್ಪಯ್ಯನವರೂ ಮುಖ್ಯರು. ಅವರ ಹೆಸರಿನಿಂದಲೇ ಮಠವನ್ನು ಗುರುತಿಸುತ್ತಾರೆ. ಈ ಧರ್ಮದ ಜನರೂ ಕೊಪ್ಪಳದಲ್ಲಿದ್ದಾರೆ.

**ಭಾವಸಾರ ಕ್ಷತ್ರಿಯ ಧರ್ಮ :-** ಭಾವಸಾರ ಕ್ಷತ್ರಿಯ ಸಮಾಜದ ಕೋಟೆಯೊಳಗಿನ ಪ್ರಪ್ರಥಮ ಪಾಂಡುರಂಗ ದೇವಾಲಯವು ಅಳಿದುಳಿದಿದೆ. ನಂತರ ಊರ ಮಧ್ಯಭಾಗದಲ್ಲಿರುವ ಪಂಡುರಂಗ ದೇವಾಲಯ ಆಧುನಿಕ ರೀತಿಯಲ್ಲಿ ಕಟ್ಟಿದ್ದಾರೆ. ಪಂಡುರಂಗ-ರುಕುಮಾಯಿ ಮೂರ್ತಿಗಳು ಪೂಜೆಗೊಳ್ಳುತ್ತಿವೆ.

ಈ ದೇವಾಲಯದ ನಿರ್ಮಾಣದಲ್ಲೂ ಗವಿಮಠದ ಶ್ರೀಗಳು ಸಹಾಯ-ಸಹಕಾರ ನೀಡಿದ್ದು ತಿಳಿಯುತ್ತದೆ. ಗವಿಮಠದ ಪಕ್ಕಕ್ಕೆ ಈ ದೇವಾಲಯವಿದೆ. ಪಾಂಡುರಂಗ ಮೂರ್ತಿಯ ಮೇಲಿನ ಲಿಂಗಾಕಾರದ ರಕ್ಷಾಕವಚ, ಮೂರ್ತಿಯ ನಾಮದ ಮಧ್ಯದಲ್ಲಿರುವ ಲಿಂಗ, ಹರಿಹರರಲ್ಲಿ ಭೇದವಿಲ್ಲೆಂದು ತಿಳಿಸುತ್ತದೆ.

**ಇಸ್ಲಾಂ ಧರ್ಮ :-** ಇಸ್ಲಾಂ ಧರ್ಮವು ಉತ್ತರ ಭಾರತದಲ್ಲಿ ಮಹಮ್ಮದೀಯ ಅರಸರ ಆಶ್ರಯದಲ್ಲಿ ಹಬ್ಬಿತು. ದಿಲ್ಲಿಯ ದೊರೆ ತುಘಲಕನು ದಕ್ಷಿಣದಲ್ಲಿ ನೆಲೆಸಿ, ಇಸ್ಲಾಂ ಧರ್ಮ ದಕ್ಷಿಣ ಭಾರತದಲ್ಲಿ ಹಾಗೂ ಇತರೆಡೆಗೆ ಹಬ್ಬಿತು. ಇದರ ಜೊತೆ ಕೊಪ್ಪಳಕ್ಕೆ ಈ ಧರ್ಮವು ಬಂದಿರಬೇಕೆಂದು ನಂಬಿಕೆ. ಬಿಜಾಪುರದ ಅರಸರ ಪತನದ ನಂತರ ಕೊಪ್ಪಳವು ಮೊಗಲರ ಸುಬಾ ಹೈದ್ರಾಬಾದಿಗೆ ಸೇರಿತು. ಕ್ರಿ.ಶ. ೧೭೨೪ ರಲ್ಲಿ ಹೈದ್ರಾಬಾದ ಸುಬೇದಾರ ಮೀರ ಕಮರುದ್ದೀನ, ನಿಜಾಮ ಉಲ್‌ಮುಲ್ಕ ಅಂತಾ ಬಿರುದು ಪಡೆದು ಸ್ವತಂತ್ರನಾದ. ಕೊಪ್ಪಳವು ಆತನ ಆಡಳಿತಕ್ಕೆ ಸೇರಿತು. ನಂತರ ಆ ಕಾಲದಲ್ಲಿ ಅರಸು ನಿಜಾಮನು ತನ್ನ ಪ್ರಧಾನಿ ಮೀರ ತುರಾಬ ಅಲಿಖಾನ, ನವಾಬ ಸಾಲಾರಜಂಗ

ಬಹದ್ದೂರನಿಗೆ ಕೊಪ್ಪಳ ಮತ್ತು ಯಲಬುರ್ಗಾಗಳನ್ನು ಜಹಗೀರ ಹಾಕಿಕೊಟ್ಟನು. ಇವೆರಡೂ ಸೇರಿ ಜಿಲ್ಲೆಯಾಯಿತು. ಕೊಪ್ಪಳವು ಜಿಲ್ಲಾ ಮುಖ್ಯ ಸ್ಥಳವಾಯಿತು. ಜೊತೆಗೆ ಇಸ್ಲಾಂ ಧರ್ಮವು ಬೆಳೆಯತೊಡಗಿತು. ಕೊಪ್ಪಳದಲ್ಲಿ "ಯೂಸೂಫಿಯಾ ಮಸಜಿದ್" ನಿರ್ಮಾಣವಾಯಿತು ಹಾಗೂ ಕೆಲವು ವರ್ಷಗಳ ನಂತರ ಆಧುನೀಕರಣ ಗೊಳಿಸಿದರು. ಸುಂದರ ಮಿನಾರ ಈ ಮಸಜಿದ್‌ದ ಸುಂದರತೆಯನ್ನು ಹೆಚ್ಚಿಸಿದೆ. ಮಹಮ್ಮದೀಯರು ಕೊಪ್ಪಳದಲ್ಲಿ ೫೦ ಪ್ರತಿಶತ ಜನಸಂಖ್ಯೆಯನ್ನು ಹೊಂದಿದ್ದಾರೆಂದು ತಿಳಿಯುತ್ತದೆ.

ಹೀಗೆ ಹಲವಾರು ಧರ್ಮಗಳು ಕೊಪ್ಪಳದಲ್ಲಿ ನೆಲೆನಿಂತು, ಒಬ್ಬರಿಗೊಬ್ಬರು ಸೌಹಾರ್ದ ರೀತಿಯಲ್ಲಿ ಜೀವಿಸುತ್ತಿದ್ದಾರೆ. ತಮ್ಮ ತಮ್ಮ ಧಾರ್ಮಿಕ ಉತ್ಸವ ಹಬ್ಬ-ಹರಿದಿನಗಳಲ್ಲಿ ಎಲ್ಲಾ ಧರ್ಮದವರೂ ಸೇರಿ ನೆಮ್ಮದಿ, ಉತ್ಸಾಹದಿಂದ ಆಚರಣೆ ಮಾಡುತ್ತಿರುವದು ಧರ್ಮ ಸಾಮರಸ್ಯವನ್ನು ಎತ್ತಿ ತೋರಿಸುತ್ತದೆ.

ಗವಿಮಠದ ಉತ್ಸವದಲ್ಲಿ, ಜಾತ್ರೆಯಲ್ಲಿ, ಸಭೆ-ಸಮಾರಂಭದಲ್ಲೂ ಇಸ್ಲಾಂ ಜನರು, ಜೈನ ಜನರು, ಬೌದ್ಧರು ಹಾಗೂ ಕ್ಷತ್ರೀಯರೂ ಸೇರಿ ಆಚರಿಸುತ್ತಾರೆ, ಭಾಗವಹಿಸುತ್ತಾರೆ, ಇಂದಿಗೂ ನಾವು ಭಾವೈಕ್ಯತೆಯನ್ನು ನಿತ್ಯ ನೋಡಬಹುದು.

ಪಾಂಡುರಂಗ ಜಾತ್ರೆಯಲ್ಲಿಯೂ ಗವಿಮಠದ ಶ್ರೀಗಳು, ಜೈನರು, ಇಸ್ಲಾಂ ಧರ್ಮದ ಜನರು ಭಾಗವಹಿಸುತ್ತಾರೆ. ಇಸ್ಲಾಂ ಧರ್ಮದ ಉರುಸು ಹಾಗೂ ಇತರೇ ಧಾರ್ಮಿಕ ಸಭೆ-ಸಮಾರಂಭದಲ್ಲಿಯೂ ಗವಿಮಠದ ಶ್ರೀಗಳು, ಜೈನ ಮುಖಂಡರು, ಕ್ಷತ್ರೀಯ ಜನರು ಹಾಗೂ ಹಿಂದುಗಳೆಲ್ಲರೂ ಸೇರಿ ಆಚರಿಸುತ್ತಿರುವದನ್ನು ನಾವು ನೋಡಬಹುದು.

ಧರ್ಮ ಸಾಮರಸ್ಯಕ್ಕೆ ಹೆಸರುವಾಸಿಯಾದ ಕೊಪ್ಪಳವು ಯಾವುದೇ ಕೋಮು ಗಲಭೆಗೆ ಈಡಾಗಿಲ್ಲದಿರುವದೇ ಉದಾಹರಣೆಯಾಗಿದೆ. ಯಾಕೆಂದರೆ ವೀರಶೈವ ಶರಣರ ಮತ್ತು ಸೂಫಿಗಳ ಅನುಭಾವ ಪಂಥಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಅವುಗಳ ಗುರಿ ಒಂದೇ ಬಗೆಯಾಗಿದೆ. ಶರಣರು ದೇವ(ಲಿಂಗ)ರನ್ನು "ಪತಿ" ಎಂದು ಕರೆದರು. ಸೂಫಿಗಳು ದೇವರನ್ನು "ಪ್ರಿಯತಮೆ" (ಸತಿ) ಎಂದು ಕರೆದರು. ಆದರೆ ಇಬ್ಬರೂ ಮಧುರ ಭಕ್ತಿಗೆ ಒಡಂಬಟ್ಟಿದ್ದಾರೆ. ಶರೀಅತ್, ಮಾರೀಫತ್, ಹಕೀಕತ್ ಸ್ಥಲಗಳು, ಶರಣರ ಷಟ್‌ಸ್ಥಲ ಅಷ್ಟಾವರಣಗಳಿಗೆ ಸ್ಥೂಲವಾಗಿ ಹೋಲಿಸಬಹುದು. ಹೀಗಾಗಿ

ಕೊಪ್ಪಳದಲ್ಲಿರುವ ಅನೇಕ ಇಸ್ಲಾಂ ಧರ್ಮ ಗುರುಗಳು ಹಿಂದೂ ಧಾರ್ಮಿಕ ಸಭೆ-ಸಮಾರಂಭದಲ್ಲಿಯೂ ಹಿಂದೂ ಮಠಾಧಿಪತಿಗಳು ಹಾಗೂ ಶರಣರು ಇಸ್ಲಾಂ ಧಾರ್ಮಿಕ ಸಭೆ-ಸಮಾರಂಭಗಳಲ್ಲೂ ಒಂದೇ ವೇದಿಕೆಯಲ್ಲಿ ಸಾಮರಸ್ಯದಿಂದ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾ ಮಾನವರೆಲ್ಲರೂ ಒಂದೇ ಎನ್ನುವ ಒಟ್ಟಾರೆ ಅಭಿಪ್ರಾಯಕ್ಕೆ ಬಂದ ಅನೇಕ ಸಂದರ್ಭಗಳನ್ನು ನಾವು ನೋಡುತ್ತಿದ್ದೇವೆ. ಕೊಪ್ಪಳದ ಗವಿಮಠದಲ್ಲೂ ಅನೇಕ ಬಾರಿ ಜಗದ್ಗುರುಗಳು ಸರ್ವ ಧರ್ಮ ಸಮ್ಮೇಳನವನ್ನು ಏರ್ಪಡಿಸಿ, ಇಸ್ಲಾಂ ಧರ್ಮ ಗುರುಗಳನ್ನು, ಜೈನ ಮುನಿಗಳನ್ನು, ಬೌದ್ಧ ಧರ್ಮ ಗುರುಗಳನ್ನು ಹಾಗೂ ಕ್ರಿಶ್ಚನ್ ಪಾದ್ರಿಗಳನ್ನು ಒಟ್ಟಾಗಿ ಸೇರಿಸಿ ತಮ್ಮದೇ ಆದ ಶೈಲಿಯಲ್ಲಿ ವಿಷಯ ಮಂಡನೆಮಾಡಿದರೂ ಅವರೆಲ್ಲರ ತಿರುಳು ಇಡೀ ಮಾನವ ಜನಾಂಗಕ್ಕೆ ಸಂಬಂಧಿಸಿರುತ್ತದೆ ಎಂಬುದನ್ನು ನಾವು ಗಮನಿಸಬೇಕು.

ಈ ಧರ್ಮ ಸಾಮರಸ್ಯವು ಗವಿಮಠದ ಪ್ರಾರಂಭದಿಂದಲೂ ಕೊಪ್ಪಳದಲ್ಲಿ ನೆಲೆಸಿತ್ತು ಎಂಬುದನ್ನು ಗಮನಿಸಬಹುದು. ನೈಜಾಮರ ಮೊದಲನೇ ಅರಸನಾದ ನಿಜಾಂ-ಉಲ್-ಮುಲ್ಕಾನು ತನ್ನ ಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರೂ ಅವನಿಗೆ ಅನ್ಯ ಧರ್ಮಗಳ ಬಗ್ಗೆ ಗೌರವ ಭಾವನೆಯಿತ್ತು. ಮುಸ್ಲೀಂ ಅಲ್ಲದವರಿಗೂ ತನ್ನ ಆಡಳಿತದಲ್ಲಿ ಗೌರವಾನ್ವಿತವಾದ ಸ್ಥಾನ-ಮಾನಗಳನ್ನು ನೀಡಿದ್ದನು. ಇದೇ ಧೋರಣೆಯನ್ನು ಮುಂದಿನ ನೈಜಾಮರ ಆಡಳಿತದುದ್ದಕ್ಕೂ ಪಾಲಿಸಿಕೊಂಡು ಬಂದುದು ಇತಿಹಾಸ ಹೇಳುತ್ತದೆ. "ದಕ್ಷಿಣದಲ್ಲಿ ಮುಸ್ಲೀಂ ಅರಸರು ಹಿಂದೂ ಜನರ ಸಹಾಯವಿಲ್ಲದೆ ರಾಜ್ಯಭಾರ ನಡೆಸುವದು ಸಾಧ್ಯವಿಲ್ಲವೆಂದು ತಿಳಿದು ಹಿಂದೂಗಳೊಂದಿಗೆ ಸೌಮ್ಯತೆಯಿಂದ ನಡೆದುಕೊಳ್ಳುತ್ತಿದ್ದರು". ಅಂತಲೇ ನಿಜಾಮನಿಗೆ ಬಂದ ಕುಷ್ಟರೋಗವನ್ನು ಗವಿಸಿದ್ಧೇಶ್ವರ ಮಹಾಸ್ವಾಮಿಗಳ ಪ್ರಸಾದ, ಆಶೀರ್ವಾದ ನೀಡಿ ಗುಣಪಡಿಸಿದ ಉದಾಹರಣೆ ಉದ್ದಕ್ಕೂ ಪ್ರೇರಣೆಯಾಗಿದೆ. ಹಿಂದೂ ಮುಸ್ಲೀಂ ಭಾವೈಕ್ಯತೆಗೆ ಇದೊಂದೇ ಸಾಕ್ಷಿಸಾಕು. ಇದೇ ಹಿನ್ನಲೆಯಲ್ಲಿ ಹಿಂದೂ ಧರ್ಮದ ಗೌರವದ್ಯೋತಕವಾಗಿ ನೈಜಾಮ ಅರಸರು ಗವಿಮಠಕ್ಕೆ, ಉಳಿದ ಮಂದಿರಗಳಿಗೆ ಉಂಬಳಿ ದತ್ತಿ ದಾನಗಳನ್ನು ಹಾಕಿಕೊಟ್ಟಿದ್ದಾರೆ. ಇಂದಿಗೂ ಕೊಪ್ಪಳ ಗವಿಮಠದ

ಜಾತ್ರಾಮಹೋತ್ಸವದಲ್ಲಿ ಮಹಾರಥೋತ್ಸವ ಕಾಲಕ್ಕೆ ಜಾತಿಬೇಧಮರೆತು ಜೈನ, ಮುಸ್ಲಿಂ, ಹಿಂದೂ ಜನತೆ ಪಾಲ್ಗೊಂಡು ಸ್ವಾಮಿಗಳ ಆಶೀರ್ವಾದವನ್ನು ಪಡೆಯುತ್ತಿರುವದು ಧರ್ಮ ಸಾಮರಸ್ಯವು.

ಅದರಂತೆ ಮೋಹರಂ, ಉರುಸು, ರಂಜಾನ್ ಹಾಗೂ ಮಹಾವೀರ ಜಯಂತಿ ತೀರ್ಥಂಕರರ ಜನ್ಮದಿನೋತ್ಸವ ಮುಂತಾದ ಹಲವಾರು ಅನ್ಯ ಮತೀಯರ ಸಮಾರಂಭದಲ್ಲಿ ಹಿಂದೂ ಜನಾಂಗ ಅದರಲ್ಲೂ ವೀರಶೈವ ಜನಾಂಗದವರೂ ಮಠದ ಮಹಾಸ್ವಾಮಿಗಳೂ ಪಾಲ್ಗೊಂಡು ಮಾನವ ಜನಾಂಗ ಒಂದೇ ಎಂಬುದನ್ನು ಸಾಬೀತು ಪಡಿಸುತ್ತಾರೆ, ಇದನ್ನೆಲ್ಲ ಅವಲೋಕಿಸಿದಾಗ ಕೊಪ್ಪಳ ನಾಡಿನಲ್ಲಿ ಧರ್ಮಸಾಮರಸ್ಯ ಇರುವುದನ್ನು ಕಾಣಬಹುದು.



## ಅಧ್ಯಾಯ – ೪

## ಕೊಪ್ಪಳ ಗವಿಮಠದ ಪರಂಪರೆ

ನಮ್ಮ ರಾಜ್ಯದಲ್ಲಿ ಕೊಪ್ಪಳ ಗವಿಮಠವು ವಿರಕ್ತ ಮಠವಾಗಿದ್ದು ಪ್ರಸಿದ್ಧಿಯನ್ನು ಪಡೆದ ಮಠವಾಗಿದೆ. ಇತರೆ ಪ್ರಸಿದ್ಧಿ ಪಡೆದ ಕೆಲವು ವಿರಕ್ತಮಠದ ಗವಿಮಠಗಳಾದ ಮುಳುಗುಂದದ ಗವಿಮಠ, ಮೈಸೂರಿನ ಪಂಚಗವಿಮಠ, ನವಲಗುಂದದ ಗವಿಮಠ ಇವುಗಳೊಂದಿಗೆ ಯಾವುದೇ ರೀತಿ ಸಂಬಂಧವು ಇಲ್ಲವೆಂದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಕೊಪ್ಪಳ ಗವಿಮಠವು ನಿಸರ್ಗಸಹಜವಾದ ಗವಿಗಳಿಂದ ಕೂಡಿದ್ದರಿಂದ "ಗವಿಮಠ" ಎಂದು ಪ್ರಸಿದ್ಧಿಯನ್ನು ಪಡೆದಿರುತ್ತದೆ. ಪೂರ್ವದಲ್ಲಿ ಬೌದ್ಧ, ಜೈನ ಧರ್ಮದ ಪುಣ್ಯಕ್ಷೇತ್ರವಾಗಿದ್ದ ಈ ತಾಣವು ಬರುಬರುತ್ತ ವೀರಶೈವ ಮಠವಾಗಿ ಬೆಳೆದು ಬಂದುದಕ್ಕೆ ಅನೇಕ ಪುರಾವೆಗಳು ದೊರೆಯುತ್ತವೆ.

ಗವಿಮಠದಲ್ಲಿ ದೊರಕಿರುವ ದಾಖಲೆಗಳು, ದತ್ತಿ–ದಾನ ಪತ್ರಗಳು, ಸನ್ನದುಗಳು, ಶಾಸನಗಳು, ಕಟ್ಟಡಗಳು ಹಾಗೂ ಇಲ್ಲಿಯ ಜನವಾಣಿಯಲ್ಲಿ ಉಳಿದುಕೊಂಡಿರುವ ಅಂಶಗಳ ಆಧಾರದಿಂದ ಈ ಮಠವು ಸುಮಾರು ಏಳುನೂರರಿಂದ ಎಂಟುನೂರು ವರ್ಷಗಳ ಭವ್ಯ ಪರಂಪರೆಯನ್ನು ಹೊಂದಿದ ಬಗ್ಗೆ ತಿಳಿಯುತ್ತದೆ.[೧]

ಮೂಲ ಕರ್ತೃಗಳಾದ ರುದ್ರಮುನಿ ಶಿವಾಚಾರ್ಯರು ಕಾಶಿಯಿಂದ ಆಗಮಿಸಿದ್ದ ಬಗ್ಗೆ ಪುರಾಣದಲ್ಲಿ ಉಲ್ಲೇಖಿಸಿದ್ದಾರೆ, ಕಾಶೀ ಕರಬಸವ ಸ್ವಾಮಿಗಳು (ಕಾಶೆಪ್ಪ ಸ್ವಾಮಿಗಳು) ಕಾಶೀ ಹುಚ್ಚಪ್ಪಸ್ವಾಮಿಗಳು, ಈ ರೀತಿ ಗವಿಮಠದ ಪರಂಪರೆಯಲ್ಲಿ ಹೆಸರುಗಳು ಬಂದಿವೆ. ಇಲ್ಲಿಯವರೆಗೆ ಹದಿನೆಂಟು ಜನ ಜಗದ್ಗುರುಗಳು ಪೀಠಾರೋಹಣ ಮಾಡಿದ ಬಗ್ಗೆಯೂ ಗುರುಪರಂಪರೆ ಸಾಗಿಬಂದಿದೆ.[೨]

---

೧. ಡಾ|| ಪಂ. ವೈ. ನಾಗೇಶ ಶಾಸ್ತ್ರಿಗಳು "ಗವಿಸಿದ್ಧೇಶ್ವರ ಪುರಾಣ" ಪೀಠಿಕಾ ಸಂಧಿ–೧೯೭೧

೨. – – – – – – – – – – – –ಸದರ – – – – – – – – – – – –೧೯೭೧

ಶ್ರೀ ರುದ್ರಮುನಿ ಸ್ವಾಮಿಗಳು ಕಾಶಿಯ ಜಂಗಮವಾಡಿಯ ಮಠದಿಂದ ಲೋಕೋದ್ಧಾರಕ್ಕಾಗಿ ಸಂಚರಿಸುತ್ತ ಹಂಪಿಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಉದ್ದಾನ ವೀರಭದ್ರ ದೇವಸ್ಥಾನದ ಹತ್ತಿರ ಆಶ್ರಮ ನಿರ್ಮಿಸಿಕೊಂಡು ಕೆಲವು ವರ್ಷದ ನಂತರ ಕೊಪ್ಪಳಕ್ಕೆ ಬಂದಬಗ್ಗೆಯೂ ಪುರಾಣದಿಂದ ತಿಳಿಯುತ್ತದೆ ಈಗ ಅಲ್ಲಿ ಆಶ್ರಮಇದ್ದ ಬಗ್ಗೆ ಯಾವುದೆ ಕುರುಹುಗಳು ಪುರಾವೆಗಳಿಲ್ಲ. ಕೊಪ್ಪಳದ ಪೂರ್ವಕ್ಕೆ ಕಂಗೊಳಿಸುವ ಗುಡ್ಡದ ಗವಿಯಲ್ಲಿ ವಾಸಮಾಡುತ್ತ, ಮುಂದೆ ಭಕ್ತಜನರಿಂದ ಓರಣಗೊಳಿಸಿ ತಮ್ಮ ವಾಸಕ್ಕಾಗಿ ಉಪಯೋಗಿಸಿದ್ದರಿಂದಲೇ ಗುಹಾವಾಸಿ ಸ್ವಾಮಿಗಳು, ಗುಹೇಶ್ವರರು, ಎಂದು ಕರೆಯುತ್ತ ಆ ಸ್ಥಾನವು ಗವಿಮಠವೆಂದು ಆಗಿರಲು ಸಾಕು.

ರುದ್ರಮುನಿಗಳ ತಪೋ ಪ್ರಭಾವವು ಸುತ್ತ ಊರುಗಳ ಭಕ್ತಸಮೂಹವನ್ನು ಸೆಳೆಯಿತು. ಆದೇವೇಳೆಗೆ ಮಸ್ಕಿಯ ಶರಣರಾದ ಹೋಳಿ ಹಂಪಯ್ಯನು ಗವಿಮಠಕ್ಕೆ ಬಂದು ದರ್ಶನಪಡೆದು, ಮಠದ ಸಂಪರ್ಕ ಬೆಳೆಸಿದನು. ಪೂಜ್ಯರು ಆತನಿಗೆ ಲಿಂಗಮುದ್ರೆ ಹಾಕಿಸಿದ ಬಗ್ಗೆ ಮಠದಲ್ಲಿಯ ಶಿಲಾಶಾಸನದಿಂದ ತಿಳಿಯುತ್ತದೆ. ಆ ಶಾಸನದ ವಿವರವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

"ಶಂಪು ಗವಿರೇನ ದಿನಮ

ಟು ಗೆ ಹಂಪಯ ನವರಿಗೆ ಲಿಂಗಮುದ್ರೆ

ವಿರತರಿಗೆ ಹಾಕಿಸಿಕೊಟದು

ಕತೆತುಣಿಕಲುಪು" (ತಲೆಗುಣಿಕಲು) [೧]

ಈ ಮೇಲಿನ ಶಿಲಾಶಾಸನವು ಸಂಸ್ಥಾನಮಠದ ಬಣ್ಣದ ಗದ್ದಿಗೆಯ ಹಿಂಭಾಗದ ನೆಲಗವಿಯ ಗ್ರಾನೈಟ ಬಂಡೆಯ ಮೇಲೆ ಇದೆ. ಬರಹದ ಪ್ರಮಾಣ ಸುಮಾರು ೫೦ ಸೆಂ.ಮೀ. X ಅಗಲ ೭೫ ಸೆಂ.ಮೀ. ಲಿಪಿಲಕ್ಷಣವು ಸುಮಾರು ಕ್ರಿ.ಶ. ೧೫-೧೬ ನೇ ಶತಮಾನದ್ದೆಂದು ಶಾಸನ ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ.[೨]

---

೧. ಡಾ||ದೇವರಕೊಂಡಾರೆಡ್ಡಿ-"ಕೊಪ್ಪಳ ಜಿಲ್ಲಾ ಶಾಸನಗಳು" ಸಂಪುಟ-೨ ಕ.ವಿ.ವಿ ಹಂಪಿಯ ಪ್ರಕಟಣೆ, ಪು-೩೮, ಶಾ-೨-೧೯೯೯

೨. ಶ್ರೀ ಬಿ.ಸಿ.ಪಾಟೀಲ ಮತ್ತು ಬ. ರಾಜಶೇಖರಪ್ಪ-"ಕೊಪ್ಪಳ ಹೆಚ್ಚಿನ ಶಾಸನಗಳು" ಪು-೧೯-೧೯೯೮

Photo



ಗವಿಸಿದ್ಧೇಶ್ವರ ಮಠದ ಬಣ್ಣದ ಗದ್ದಿಗೆ
ನೆಲಗವಿಯ ಬಂಡೆಯಲ್ಲಿ.
(ಶಾ.ಪ.ಶಿ. 15: AR.No.B-384 of
1963-64; IK.III.No.176.)

ಕೊಪ್ಪಳಗವಿಮಠದ ಉಲ್ಲೇಖವಿರುವ ದಾಖಲೆ. (ಕೊಪ್ಪಳ-29)

ಸ್ವಾಮೀಜಿ ಅವರ ಪ್ರಭಾವವು ಕೊಪ್ಪಳದ ಸುತ್ತಲಿನ ಪರಿಸರವನ್ನು ಆವರಿಸಿತು. ಭಕ್ತಜನ ಸಮೂಹವು ತಮ್ಮ ಊರಿಗೆ ಆಹ್ವಾನಿಸಿದರು. ಕೊಪ್ಪಳ ಸಮೀಪ ಹಳ್ಳದ ದಂಡೆಗೆ ಹೊಂದಿರುವ ನರೇಗಲ್ ಗ್ರಾಮಕ್ಕೆ ಆಗಮಿಸಿದರು. ಹಿರೇಹಳ್ಳದ ದಂಡೆ ನಿಸರ್ಗ ರಮ್ಯವಾದ ಸ್ಥಳದಲ್ಲಿ ಲಿಂಗಧ್ಯಾನವನ್ನು ಮಾಡುತ್ತಿದ್ದರಂತೆ. ನರೇಗಲ್ ಗ್ರಾಮದ ಹಿರೇಮಠದ ಸಂಗನಬಸವಯ್ಯನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು. ದಿನಗಳೆದಂತೆ ರುದ್ರಮುನಿ ಸ್ವಾಮಿಗಳು ಅನಾರೋಗ್ಯದಿಂದಾಗಿ ಅಲ್ಲಿಯೇ ಶಿವಾಧೀನರಾಗಿದ್ದರಿಂದ, ಅಲ್ಲಿಯೇ ಅವರ ಸಮಾಧಿ ಗದ್ದುಗೆ ಇದೆ. ಅದಕ್ಕೆ ಕಟ್ಟಡ ಮಾಡಿ, ಪೂಜಿಸಹತ್ತಿದರು. ಆ ಮಠಕ್ಕೆ ಸುಮಾರು ಇಪ್ಪತ್ತು ಎಕರೆ ಜಮೀನು ದಾನಮಾಡಿ, ಬಾರಿಕೇರ ಜನಾಂಗದವರನ್ನು ಸೇವಕರನ್ನಾಗಿ ನೇಮಿಸಿದ ಬಗೆಗೆ ಕ್ಷೇತ್ರಕಾರ್ಯದಲ್ಲಿ ತಿಳಿದು ಬಂತು. ನಂತರ ಸಂಗನ ಬಸಯ್ಯನವರೇ ಎರಡನೇ ಪೀಠಾಧಿಪತಿಗಳಾಗಿ ಗವಿಮಠದ ಜವಾಬ್ದಾರಿ ವಹಿಸಿಕೊಂಡದ್ದು ತಿಳಿಯುತ್ತದೆ.

ಕೊಪ್ಪಳಕ್ಕೆ ವ್ಯಾಪಾರಕ್ಕಾಗಿ ಬಂದಿದ್ದ ಹರಪನಹಳ್ಳಿಯ ಗುರುಸಿದ್ಧಶೆಟ್ಟಿ ಹಾಗೂ ಓಂಕಾರಶೆಟ್ಟಿ ಎಂಬ ಭಕ್ತರು ಗವಿಮಠಕ್ಕೆ ಬಂದು ಪೂಜ್ಯರನ್ನು ಕಂಡು ಪುನೀತರಾಗಿ, ತಮ್ಮೂರಿಗೆ ಆಹ್ವಾನಿಸಿದರು. ಭಕ್ತರ ಕೋರಿಕೆಯಂತೆ ತಮ್ಮ ವ್ಯಾಪ್ತಿಯನ್ನು ಹರಪನಹಳ್ಳಿಯ ವರೆಗೆ ವಿಸ್ತರಿಸಿ ಧರ್ಮ, ಶಿಕ್ಷಣ ಪ್ರಸಾರವನ್ನು ಪ್ರಾರಂಭಿಸಿದರು. ಕೊಪ್ಪಳ ಹರಪನಹಳ್ಳಿಯ ನಡುವೆ ಆಗಾಗ್ಗೆ ಸಂಚಾರ ಮಾಡುತ್ತ ಅದೇ ಊರಲ್ಲಿ ಭಕ್ತರ ನೆರವಿನಿಂದ ಮಠವನ್ನು ನಿರ್ಮಿಸಿದರು. ಅದಕ್ಕೆ ಕಾಶೀಮಠವೆಂದು ಕರೆದರು. ಮೂಲ ಗುರುಗಳು ಕಾಶೀಚರವರ್ಯರಿದ್ದ ಕಾರಣ ಆ ಪರಂಪರೆಯ ಹೆಸರನ್ನು ಇಟ್ಟಿರಬೇಕು. ಹರಪನಹಳ್ಳಿಯ ಮಳೆಯ ಮಠದ ಮರುಳಸಿದ್ಧಯ್ಯ ನವರ ಪುತ್ರ ಶಿವಲಿಂಗ ಸ್ವಾಮಿಯನ್ನು ಚೈತ್ರ ಶುದ್ಧ ದಶಮಿಯಂದು ತಮ್ಮ ಉತ್ತರಾಧಿಕಾರಿಯಾಗಿ ಮಾಡಿದರು. ಸಂಗನಬಸವಸ್ವಾಮಿಗಳು ಹರಪನಹಳ್ಳಿಯಲ್ಲಿಯೇ ಲಿಂಗೈಕ್ಯ – ರಾದ ಕಾರಣ ಅಲ್ಲಿಯೇ ಗದ್ದುಗೆ ಇದೆ.

ಇಲ್ಲಿಯ ಮಠವು ಚಿಕ್ಕದಾಗಿದ್ದು ಹಡಗಲಿ ರಸ್ತೆಗೆ ಹೊಂದಿಕೊಂಡಿರುತ್ತದೆ. ಮಠದಲ್ಲಿ ಅನ್ನದಾಸೋಹ ಹಾಗೂ ಸಂಸ್ಕೃತ ಶಿಕ್ಷಣವನ್ನು ಪ್ರಾರಂಭಿಸಿದ ಬಗ್ಗೆ ತಿಳಿಯುತ್ತದೆ. ಪುರಾತನ ಚಿಕ್ಕ ಅಡುಗೆ ಕೊಠಡಿ ಇದೆ. ಈಗಲೂ ಅನ್ನ ದಾಸೋಹ ಇದ್ದು, ಮಠದಲ್ಲಿ ೩ ಕೊಠಡಿಗಳಲ್ಲಿ ಮೂವತ್ತು ಮಕ್ಕಳಿಗೆ ಉಚಿತ ಪ್ರಸಾದ ನಿಲಯ ಇದೆ. ಸಾಂಪ್ರದಾಯದಂತೆ ಕಂತಿ ಭಿಕ್ಷೆಯಿಂದ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಿದ್ದಾರೆ.

ಶಿವಲಿಂಗ ಸ್ವಾಮಿಗಳು ಗವಿಮಠದ ಮೂರನೇ ಪೀಠಾಧಿಪತಿಗಳಾಗಿ ಭಕ್ತರ ಇಷ್ಟಾರ್ಥಗಳನ್ನು ಪೂರೈಸಿದರು. ಅವರ ಹಲವಾರು ಲೀಲೆಗಳೂ ಇವೆ.ಮಕ್ಕಳನ್ನು ಬಯಸಿ ಬಂದವರನ್ನು ದಾಸೋಹದಲ್ಲಿ ಭಾಗವಹಿಸುವಂತೆ ಮಾಡಿ ಆಶೀರ್ವದಿಸಿ ಸಂತಾನ ದೊರಕಿಸಿ ಕೊಟ್ಟವರು. ಸ್ವಾಮಿಗಳ ಧಾರ್ಮಿಕ ಕ್ಷೇತ್ರವು ಕೊಪ್ಪಳದಿಂದ ಗದಗ ಜಿಲ್ಲೆಯನ್ನು ಆವರಿಸಿತು. ರೋಣ ತಾಲೂಕಿನ ಶಾಂತಗಿರಿಯಲ್ಲೂ ಅವರ ಕಾಯಕದ ಲೀಲಾ ದಾಖಲೆಗಳಿವೆ. ಆಲೂರಿನ ಚೆನ್ನವೀರಸ್ವಾಮಿಯನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಇಚ್ಛಿಸಿ, ಪಟ್ಟಾಭಿಷೇಕ ಮಾಡಿದರು. ಕೆಲವು ವರ್ಷಗಳ ನಂತರ ಹರಪನಹಳ್ಳಿಗೆ ಬಂದಾಗ ಅಲ್ಲಿಯೇ ಲಿಂಗದೊಳಗಾದರು. ಅವರ ಗದ್ದುಗೆಯೂ ಅದೇ ಮಠದಲ್ಲಿಯೇಇದೆ.

ಚೆನ್ನವೀರ ಸ್ವಾಮಿಗಳು ನಾಲ್ಕನೇ ಪೀಠಾಧಿಪತಿಗಳಾಗಿ ಗವಿಮಠದ ಜವಾಬ್ದಾರಿ ವಹಿಸಿಕೊಂಡರು. ಜೊತೆಗೆ ಪರಂಪರಾಗತವಾಗಿ ಬಂದಿದ್ದ ಅನ್ನದಾಸೋಹ, ಶಿಕ್ಷಣ ಪ್ರಸಾರವನ್ನು ಹಿಂದಿನ ಪೂಜ್ಯರಿಗಿಂತಲೂ ಇಮ್ಮಡಿಗೊಳಿಸಿದರು. ಕಾಶಿಯ ವಿದ್ವತ್ಸಭೆಯಲ್ಲಿ ಸಿದ್ಧಾಂತವನ್ನು ಪ್ರತಿಪಾದಿಸಿ ವಿಜಯಶಾಲಿಯಾದ ಬಗ್ಗೆ ಉಲ್ಲೇಖವಿದೆ. ಜಂಗಮವಾಡಿ ಮಠದಲ್ಲಿ ಇವರನ್ನು ಕೊಂಡಾಡಿ ವಿಶೇಷ ಸ್ಥಾನ ನೀಡಿ ಗೌರಸಿದ್ದು ಶ್ಲಾಘನೀಯ.[೧] ಒಮ್ಮೆ ಪ್ರಯಾಗದಲ್ಲಿ ತಂಗಿದ್ದಾಗ ದೊರೆತ ಅನಾಥ ಜಂಗಮ ಶಿಶುವಿಗೆ ದೀಕ್ಷಾ ಸಂಸ್ಕಾರ ನೀಡಿದರು. ಕನ್ನಡ-ಸಂಸ್ಕೃತ ಅಭ್ಯಾಸ ಮಾಡಿಸಿ, ತಮ್ಮ ಜೊತೆಗೆ ಬೆಳೆಸಿದರು. ಒಳ್ಳೇ ವಿದ್ವತ್ ಪಟು ಶಿಷ್ಯನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿ, ಆತನಿಗೆ ಕಾಶೀ ಕರಿಬಸವಸ್ವಾಮಿಗಳೆಂದು ನಾಮಕರಣ ಮಾಡಿದರು. ಅವರಿಗೆ ಕೊಪ್ಪಳದ ಮಠದ ಜವಾಬ್ದಾರಿ ವಹಿಸಿ ತಾವು ಸಂಚಾರ ಕೈಗೊಂಡರು. ಧಾರ್ಮಿಕ ಕಾಯಕ ಪ್ರದೇಶವು ಇನ್ನೂ ವಿಸ್ತಾರವಾಗಿ ಚೆನ್ನವೀರಸ್ವಾಮಿಗಳು ಭಕ್ತರ ಅಪೇಕ್ಷೆಯಂತೆ ಬಳ್ಳಾರಿ ಜಿಲ್ಲೆಯಲ್ಲಿ ವೀರಶೈವ ಧರ್ಮೋಪದೇಶ ಪ್ರಾರಂಭಿಸಿದರು. ಬಾಚಿಕೊಂಡನ ಹಳ್ಳಿಯಲ್ಲಿ ಮಠವೊಂದನ್ನು ಸ್ಥಾಪಿಸಿ ಅಲ್ಲಿಯೇ ಕೆಲವು ವರ್ಷ ಕಳೆದರು. ಧರ್ಮ ಪ್ರಚಾರದೊಂದಿಗೆ ಶಿಕ್ಷಣದ ಪ್ರಚಾರ,

---

೧. ಡಾ||ವೈ.ನಾಗೇಶ ಶಾಸ್ತ್ರಿಗಳು-ಗವಿಸಿದ್ಧೇಶ್ವರ ಪುರಾಣ.ಪು-೧೧೨-೧೯೭೧

ಅನ್ನದಾಸೋಹ ವ್ಯವಸ್ಥೆಯನ್ನು ಮಠದಲ್ಲಿ ಮಾಡಿದರು. ಬಾಚಿಕೊಂಡನ ಹಳ್ಳಿ ಮಠದಲ್ಲಿಯೇ ಲಿಂಗೈಕ್ಯರಾದ ಕಾರಣ ಅವರ ಗದ್ದುಗೆ ಅಲ್ಲಿಯೇ ಇದೆ.

ಕಾಶೀ ಕರಬಸವಸ್ವಾಮಿಗಳು ಐದನೇ ಪೀಠಾಧ್ಯಕ್ಷರಾಗಿ ಧರ್ಮ ಪ್ರಸಾರ, ಅನ್ನದಾಸೋಹ, ಶಿಕ್ಷಣ ಪ್ರಸಾರದಲ್ಲಿ ಸಂಸ್ಕೃತ ಪಾಠ ಶಾಲೆಗಳನ್ನು ಪ್ರಾರಂಭಿಸಿ, ಪರಂಪರೆಯನ್ನು ಮುಂದುವರೆಸಿಕೊಂಡು ಊರ್ಜಿತಗೊಳಿಸಿದರು. ಇವರ ಲೀಲೆ, ಜನಪರ ಕಾರ್ಯಗಳು ಸಹ ಭಕ್ತ ಜನರನ್ನು ಆಕರ್ಷಿಸಿದವು. ಆ ಬಗ್ಗೆ ಹೆಚ್ಚಿನ ಶಿಕ್ಷಣ ವ್ಯಾಪ್ತಿ ಕಂಡುಬರುತ್ತಿಲ್ಲ. ತಮ್ಮ ಉತ್ತರಾಧಿಕಾರಿಯನ್ನು ಬೂದಿಹಾಳಿನ ಸಂಗಯ್ಯನವರ ಮಗ ಶಿವಲಿಂಗಯ್ಯ ಸ್ವಾಮಿಯನ್ನು ಆಯ್ಕೆ ಮಾಡಿದರು. ಪೀಠಾಧಿಕರಣ ಕಾರ್ಯ ಮಾಡಿ ಗವಿಮಠದ ಜವಾಬ್ದಾರಿವಹಿಸಿ ಕೆಲವು ದಿನ ಗದುಗಿಗೆ ಹೋದಾಗ ಅಲ್ಲಿಯೇ ಲಿಂಗದೊಳಗಾದರು.

ಗುರುವಿನ ಮಾರ್ಗದರ್ಶನದಲ್ಲಿಯೇ ಶಿವಲಿಂಗಯ್ಯ ಸ್ವಾಮಿಗಳು ಗವಿಮಠದ ಪರಂಪರೆ, ಕಾಯಕ, ನಿಷ್ಠೆಗಳನ್ನು ಮುಂದುವರೆಸಿಕೊಂಡ ಬಗ್ಗೆ ತಿಳಿಯುತ್ತದೆ. ಮಠದಲ್ಲಿ ಅನ್ನದಾಸೋಹ ಶಿಕ್ಷಣ ಪ್ರಸಾರ ಎಂದಿನಂತೆ ಸಾಗಿದವು. ಯಲಬುರ್ಗಾ ತಾಲೂಕ ಮಂಗಳೂರಿನ ಅರಳೆಲಿಮಠದ ಸಿದ್ಧಯ್ಯನವರ ಮಕ್ಕಳಾದ ಪುಟ್ಟಸುಚನ್ನವೀರ ಸ್ವಾಮಿಗಳನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡರು.

ಸ್ವಾಮಿಗಳ ಸಂಚಾರ ಮುಂಡರಗಿ ಭಾಗದಲ್ಲಿ ಸಾಗಿದ್ದರಿಂದ ಆಭಾಗದ ಭಕ್ತ ಜನರು ಕೆಲವು ದಿನ ಅವರ ಊರಲ್ಲಿ ಉಳಿಸಿಕೊಂಡಾಗ ಪ್ರಕೃತಿಯ ಸುಂದರ ತಾಣವಾದ ಕಪ್ಪತ್ತಗುಡ್ಡದಲ್ಲಿ ಇರಹತ್ತಿದ್ದು ತಿಳಿದುಬರುತ್ತದೆ. ಅಲ್ಲಿ ನಂದಿವೇರಿ ಮಠದಲ್ಲಿ ಕೆಲವು ವರ್ಷ ಇದ್ದು ಲಿಂಗೈಕ್ಯರಾದರು. ಅವರ ಗದ್ದುಗೆ ಅಲ್ಲಿಯೇ ಇದೆ.

ಏಳನೇ ಪೀಠಾಧಿಪತಿಗಳಾದ ಪುಟ್ಟ ಸುಚೆನ್ನವೀರಸ್ವಾಮಿಗಳು ಕೊಪ್ಪಳದ ಗವಿಮಠದ ಪಕ್ಕಕ್ಕೆ ಕೆರೆಯೊಂದನ್ನು ಕಟ್ಟಿಸಿದರು. ಪೂಜ್ಯರ ಜನಪರ ಕಾಳಜಿ, ಪ್ರಾಣಿದಯೆ, ಪರಿಸರ ಪ್ರಜ್ಞೆಯನ್ನು ಕಾಣಬಹುದು. ಶಿಕ್ಷಣ ಕಾಳಜಿ, ಮಠದಲ್ಲಿ ಸಂಸ್ಕೃತ ಶಾಲೆಗಳ ಉಸ್ತುವಾರಿ, ವೈದಿಕ ಕಾರ್ಯಕ್ರಮಗಳನ್ನು

ಸಮರ್ಪಕವಾಗಿ ನಿರ್ವಹಿಸಿದರು. ಸಾಂಪ್ರದಾಯ, ಪರಂಪರೆಗಳನ್ನು ಹೆಚ್ಚು, ರೂಢಿಸಿಕೊಂಡು ಮಠದಲ್ಲಿ ಬೆಳೆದ ಶಿಷ್ಯರಾಗಿದ್ದ ಚೆನ್ನ ಮಲ್ಲಿಕಾರ್ಜುನರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡರು. ಕೆಲವು ವರ್ಷಗಳ ನಂತರ ಗವಿಮಠದಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆಯು ಗವಿಮಠದಲ್ಲಿಯೇ ಪೂಜೆಗೊಳ್ಳುತ್ತದೆ.

ಎಂಟನೇ ಪೀಠಾಧಿಪತಿಗಳಾದ ಚನ್ನಮಲ್ಲಿಕಾರ್ಜುನ ಸ್ವಾಮಿಗಳು, ಬುಕ್ಕಸಾಗರದ ಹಿರಿಯ ಮಠದ ಸಂಗಮೇಶ್ವರ ಸ್ವಾಮಿಗಳನ್ನು ತಮ್ಮ ಉತ್ತರಾಧಿಕಾರಿಗಳನ್ನು ಮಾಡಿಕೊಂಡು ಗವಿಮಠದ ಪರಂಪರೆಯನ್ನು ಮುಂದುವರಿಸಿದರು ಅವರ ಕಾಲಕ್ಕೂ ಹೇಳಿಕೊಳ್ಳುವಂಥ ಜನಪರ ಕಾರ್ಯಗಳು ಕಂಡುಬರುತ್ತಿಲ್ಲ ಇವರ ಗದ್ದುಗೆಯು ದೇವಗೊಂಡನಹಳ್ಳಿಯಲ್ಲಿದೆ. ಈಗ ಆ ಮಠವು ದುರಸ್ತಿಯಲ್ಲಿದೆ ಹೆಚ್ಚಿನ ಮಾಹಿತಿ ತಿಳಿದುಬರುತ್ತಿಲ್ಲ.

ಪೂಜ್ಯ ಸಂಗನ ಬಸವ ಸ್ವಾಮಿಗಳು ಒಂಭತ್ತನೇ ಪೀಠಾಧಿಪತಿಗಳಾಗಿ ಗವಿಮಠದ ಪರಂಪರೆಯನ್ನು ಮುಂದುವರೆಸಿದರು. ತಪೋನಿಷ್ಠರಾದ ಸ್ವಾಮಿಗಳು ಮಠದ ಕೆರೆಯ ವಿಸ್ತಾರವನ್ನು ಪೂರ್ಣ ಗೊಳಿಸಿದ್ದು ಕಾಣುತ್ತದೆ. ಶಿಕ್ಷಣ, ಸಂಸ್ಕೃತಾಭ್ಯಾಸ, ವೈದಿಕ ಶಿಕ್ಷಣವನ್ನು ಯಥಾಪ್ರಕಾರ ಮುಂದುವರೆಸಿದರು ಜೊತೆಗೆ ಭಕ್ತ ಸಮೂಹಕ್ಕೆ ಅಸಾಧ್ಯ ಲೀಲೆಗಳನ್ನು ತೋರಿಸಿದ್ದು ಕಂಡು ಬರುತ್ತದೆ. ಶಾಖಾ ಮಠಗಳ ಉಸ್ತುವಾರಿಯನ್ನು ನೋಡುತ್ತ ಸಂಚಾರ ಗೈಯುತ್ತ ಹೂವಿನಹಡಗಲಿಯ ಭಕ್ತರ ಒತ್ತಾಯಕ್ಕೆ ಸ್ಪಂದಿಸಿ ಶಾಖಾ ಮಠವನ್ನು ಕಟ್ಟಿಸಿದರು. ಸುಮಾರು ೩೦ ಎಕರೆ ಜಮೀನು ಮಾಡಿದರು. ಒಕ್ಕಲುತನಕ್ಕೆ ಹೆಚ್ಚಿನ ಪ್ರಾಶಸ್ತ್ಯನೀಡಿದ್ದು ಕಂಡುಬರುತ್ತದೆ. ಇಂದಿಗೂ ಕೃಷಿಯನ್ನು ಮುಂದುವರೆಸಿದ್ದನ್ನು ಕಾಣುತ್ತೇವೆ, ಸುತ್ತಲಿನ ಊರುಗಳಾದ ಮಕರಬ್ಬಿ ಕಾಂತೇಬೆನ್ನೂರುಗಳಲ್ಲಿಯೂ ಶಾಖಾ ಮಠಗಳನ್ನು ಸ್ಥಾಪಿಸಿ ಧರ್ಮ ಪ್ರಚಾರವನ್ನು ಹೆಚ್ಚಿಸಿದ್ದು ಕಂಡುಬರುತ್ತದೆ. ಕಾಂತೇಬೆನ್ನೂರಲ್ಲಿಯ ಮಠದ ಕಟ್ಟಡವು ಹಾಳಾಗಿದೆ. ಮಕರಬ್ಬಿಯಲ್ಲಿಯೂ ಮಠವು ಸಂಪೂರ್ಣ ಹಾಳಾಗಿದೆ. ಆ ಜಾಗೆಯಲ್ಲಿ ಶಾಲಾ ಕಂಪೌಂಡ ನಿರ್ಮಿಸಿದ್ದಾರೆ. ಸ್ವಾಮಿಗಳ ಗದ್ದುಗೆ ಹಿಂದೆ ಇತ್ತು ಎಂದು ಊರಿನ ಹಿರಿಯರು ಕ್ಷೇತ್ರಕಾರ್ಯದಲ್ಲಿ ಹೇಳಿದ್ದನ್ನೂ ಇಲ್ಲಿ ನೆನಪಿಸಬಹುದು, ತಮ್ಮ ಉತ್ತಾರಾಧಿಕಾರಿಯನ್ನಾಗಿ ಚೆನ್ನಬಸವ ಸ್ವಾಮಿಗಳನ್ನು ನೇಮಿಸಿದರು.

ಗವಿಮಠದ ಪರಂಪರೆಯಲ್ಲಿ ಹತ್ತನೇ ಪೀಠಾಧಿಪತಿಗಳಾದ ಚನ್ನಬಸವ ಸ್ವಾಮಿಗಳು ಒಳ್ಳೇ ತಪಸ್ವಿಗಳು. ಪರಂಪರೆಯನ್ನು ಹಾಗೂ ಸಂಸ್ಕೃತಿಯನ್ನು ಊರ್ಜಿತಗೊಳಿಸಿದ್ದು ಕಂಡುಬರುತ್ತದೆ. ಇವರ ಕಾಲಕ್ಕೆ ಗವಿಮಠಕ್ಕೂ ಹಾಗೂ ಗದುಗಿನ ತೋಂಟದಾರ್ಯಮಠಕ್ಕೂ ಅನ್ಯೋನ್ಯ ಸಂಬಂಧವು ಇದ್ದ ಬಗ್ಗೆ ಉಲ್ಲೇಕವಿದೆ. ಗವಿಮಠದ ಶಿಷ್ಯರಾಗಿದ್ದ ಸದಾಶಿವ ಸ್ವಾಮಿಗಳು ಗದುಗಿನ ತೋಂಟದ ಮಠಕ್ಕೆ ಜಗದ್ಗುರುಗಳಾಗಿದ್ದ ಸಂಗತಿ ತಿಳಿದು ಬರುತ್ತದೆ.[೧] ಗದುಗಿನಲ್ಲಿ ಸದಾಶಿವ ಸ್ವಾಮಿಗಳ ಅಡ್ಡಪಲ್ಲಕ್ಕಿ ಉತ್ಸವದಲ್ಲಿ ಅಡ್ಡಿ ಉಂಟಾದಾಗ ಗವಿಮಠದ ಗುರುಗಳನ್ನು ನೆನಸಿದಾಗ ಪರಿಹಾರವಾಯಿತು ಎಂದು ಉಲ್ಲೇಖವಿದೆ.

ಈ ಮೇಲಿನ ಘಟನೆಯನ್ನು ಹೇಳಿ, ಸ್ಮರಣೆ ಮಾಡುವ ಮಂಗಳಾರತಿ ಪದವು ಗದಗ-ಬೆಟಗೇರಿ ಹಾಗೂ ಕೊಪ್ಪಳ ಭಾಗದ ಜನರಲ್ಲಿ ಇಂದಿಗೂ ಇದ್ದುದು ಕ್ಷೇತ್ರ ಕಾರ್ಯದಿಂದ ತಿಳಿದು ಬರುತ್ತದೆ.

ಮಂಗಲೆನ್ನ ಕುರುಂಗನಯನೆ। ತುಂಗ ಗುರು ಗವಿಸಿದ್ಧಗೆ।
ಮೀರಾಲಂ ಬಹಾದ್ದೂರಗಾಗಿಹೆ। ಕ್ರೂರ ರೋಗವ ತೊಲಗಿಸೆ।
ಮೀರಿದಾ ಜಹಗೀರು ಪಡೆದ। ಧೀರಗೆ ಗಂಭೀರಗೆ।
ಮೆರೆವ ತೋಂಟದ। ಪರಮ ಯೋಗಿಯ।
ಮೆರವಣಿಗೆಯು ನಿಲ್ಲಲು। ಸ್ಮರಿಸಿದಾಕ್ಷಣ।
ವರ ಉತ್ಸವವ ಮೆರೆಸಿದನುಪಮ ಶೀಲಗೆ।।

ಎಂದು ಹಾಡುವದನ್ನು ಗಮನಿಸಿದಾಗ ಮಹಾತಪಶ್ವಿಗಳು ಎಂಬುದರಲ್ಲಿ ಸತ್ಯಾಂಶ ಕಾಣುತ್ತೇವೆ. ಈ ಸಂತೋಷದಲ್ಲಿ ಕೊಪ್ಪಳಕ್ಕೆ ಆಗಮಿಸಿ ಗುರುಗಳ ಲೀಲೆಯನ್ನು ಗದುಗಿನ ಸದಾಶಿವ ಸ್ವಾಮಿಗಳು ಕೊಂಡಾಡಿದರಂತೆ. ಆಗಾಗ್ಗೆ ಕೊಪ್ಪಳಕ್ಕೆ ಆಗಮಿಸುತ್ತಿದ್ದ ಅವರು ಅನಾರೋಗ್ಯದಿಂದ ಕೊಪ್ಪಳದಲ್ಲಿಯೇ ಲಿಂಗೈಕ್ಯರಾಗಿದ್ದರಿಂದ ಅವರ ಗದ್ದುಗೆ ಕೊಪ್ಪಳ ಗವಿಮಠದಲ್ಲಿರುವುದು ಒಂದು ಪುರಾವೆ.[೨]

---

೧) ಡಾ।। ವೈ. ವಾಗೇಶ ಶಾಸ್ತ್ರಿಗಳು - ಗವಿಸಿದ್ಧೇಶ್ವರ ಪುರಾಣ ಪು-೧೫೩-೧೯೭೧

೨) "ಗವಿದೀಪ್ತಿ" ಶ್ರೀ ಗ.ವಿ.ಬಳಗ ಕೊಪ್ಪಳ - ೧೯೭೬

ಚೆನ್ನಬಸವಸ್ವಾಮಿಗಳು ಹೈದ್ರಾಬಾದ ಪ್ರದೇಶದಲ್ಲಿ ಧರ್ಮಪ್ರಚಾರ ಮಾಡುವ ಮೂಲಕ ಹಾಗೂ ಜನಪರ ಕಾರ್ಯಗಳನ್ನು ಕೈಕೊಂಡುದಕ್ಕೆ ಮೆಚ್ಚಿ ಹೈದ್ರಾಬಾದ ನಿಜಾಮರು ಪೋತನಾಳ, ಮರಿಚೇಡು, ಮಣ್ಣೂರು, ಬಹದ್ದೂರಬಂಡಿ, ಬಟಗೇರಿ, ಮಂಡಲಗಿರಿಗಳನ್ನು ಜಹಗೀರು ಕೊಟ್ಟರು. ಇವರ ಕಾಲಕ್ಕೆ ಗವಿಮಠದ ಮುಖ ಮಂಟಪವನ್ನು ನಿರ್ಮಿಸಿದ ಬಗ್ಗೆ ಗೋಡೆಕಲ್ಲಿನಲ್ಲಿ ನಮೂದಿಸಿದ್ದಾರೆ. ಸ್ವಾಮಿಗಳ ಕೃಪೆಯಿಂದ ಮಕ್ಕಳ ಭಾಗ್ಯ ಪಡೆದ ಆನೆಗೊಂದಿ ರಾಜರು ಗವಿಮಠಕ್ಕೆ ಸಂಗಮೇಶ್ವರದಲ್ಲಿ ಇದ್ದ ಹೊಲಗಳನ್ನು ದಾನವಾಗಿ ನೀಡಿದ ಬಗ್ಗೆ ಮಠದಲ್ಲಿ ದಾಖಲೆಗಳು ಇವೆ.

ಇವರ ಕಾಲದಿಂದಲೇ ಗವಿಮಠದ ಪರಂಪರೆ ವಿಸ್ತಾರವಾದದ್ದು. ಜಾಗೃತ ಪೀಠವೆನ್ನುವದಕ್ಕೆ ಇಲ್ಲಿ ವಿವರಿಸುವ ವಿವರಣೆಯಿಂದ ನೋಡಬಹುದು. ಕೊಪ್ಪಳ ಸಮೀಪದ ಗುಡ್ಡದ ಹಿಂದಿನ ಮಗ್ಗಲಲ್ಲಿ ಮಂಗಳಾಪುರವೆಂಬ ಗ್ರಾಮವಿದೆ. ಅಲ್ಲಿಯ ಮಹಾದೇವಯ್ಯನವರ ಮಗನಾದ ಗುಡ್ಡದಯ್ಯ ಶಿಶು ಇದ್ದಾಗಲೇ ಆತನ ಲಕ್ಷಣ ಚಟುವಟಿಕೆಗಳನ್ನು ಗಮನಿಸಿದ ತಂದೆ ತಾಯಿಗಳು ಗವಿಮಠದ ಪೂಜ್ಯರಿಗೆ ವಿಷಯ ತಿಳಿಸಿದರು, "ಬೆಳೆಯಸಿರಿ ಮೊಳಕೆಯಲ್ಲಿಯೇ ನೋಡು ಎನ್ನುವಂತೆ ಜೊತೆಗಾರರೊಂದಿಗೆ ದನಕಾಯಲು ಗುಡ್ಡದಲ್ಲಿರುವ ಮಳೆಯ ಮಲ್ಲೇಶ್ವರ ದೇವಸ್ಥಾನದ ಹತ್ತಿರ ಬರುತ್ತಿದ್ದರು. ಸ್ನೇಹಿತರೂ ಸಹ ಈತನ ವಿಚಿತ್ರ ನಡಾವಳಿ, ಚಟುವಟಿಕೆ ಗಮನಿಸಿ, ಪದೇ ಪದೇ ದೇವರ ಮುಂದೆ ಕುಳಿತು ಧ್ಯಾನಾಸಕ್ತನಾಗಿರುವ ಸನ್ನಿವೇಶವಂತೂ ಅವರ ಕುತುಹಲ ಕೆರಳಿಸಿ, ಆಶ್ಚರ್ಯವನ್ನುಂಟು ಮಾಡಿತು. ಆತನ ಬಾಲಲೀಲೆಗಳನ್ನು ನೋಡಿ, ಸ್ವಾಮಿಗಳು ಇವರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡು, "ಗವಿಸಿದ್ಧೇಶ್ವರ" ಎಂದು ಪೂನರ್ ನಾಮಕರಣ ಮಾಡಿ, ಸಂಪೂರ್ಣ ಮಠದ ಜವಾಬ್ದಾರಿ ಒಪ್ಪಿಸಹತ್ತಿದರು. ಇವರು ಗವಿಮಠದ ಪರಂಪರೆಯಲ್ಲಿ ಹನ್ನೊಂದನೇ ಪೀಠಾಧಿಪತಿಗಳು.

ಇವರ ಕೆಲವು ಅಸಾಧ್ಯ ಲೀಲೆಗಳನ್ನು ಇಲ್ಲಿ ಗಮನಿಸಬಹುದು. ಸಾಮಾನ್ಯವಾಗಿ ಅತಿಮಾನುಷವಾದ ನಡವಳಿಕೆಗಳನ್ನು ಅಥವಾ ಘಟನಾವಳಿಗಳನ್ನು ನಾವು ಲೀಲೆಗಳೆಂದು ಕರೆಯುವದುಂಟು.[೧] ಇವು ಸಾಮಾನ್ಯ ಮನುಷ್ಯರಿಂದ ಸಾಧ್ಯವಿಲ್ಲದ ಅದ್ಭುತ ಕಾರ್ಯಗಳಾಗಿವೆ. ಕೊಪ್ಪಳ ಗವಿಮಠದ ಅನೇಕ ಸ್ವಾಮಿಗಳು ಇಂತಹ ಅಸಾಧ್ಯ ಸಾಹಸದ

---

೧. ಕನ್ನಡ ನಿಘಂಟು-ಸಂ-೫ ಕಸಾಪ೧೯೮೮-ಪು ೫೪೨೨

ವ್ಯಕ್ತಿಗಳಾಗಿದ್ದವರು ಎಂದು ಹೇಳುವ ಅನೇಕ ದೃಷ್ಟಾಂತಗಳು ನಮ್ಮ ಮುಂದಿವೆ. ಭಕ್ತರ ಧಾರ್ಮಿಕ ನಂಬಿಕೆಗಳಿಗೆ ಇಂಬುಕೊಡುವ ಕೆಲವು ಲೀಲಾ ಸಂಗತಿಗಳನ್ನು ಮುಂದೆ ಪರಿಶೀಲಿಸಲಾಗಿದೆ.

ಗವಿಮಠದ ಗವಿಸಿದ್ಧೇಶ್ವರರು ತತ್ವಜ್ಞಾನಿಗಳು, ತಪೋಧನರೂ ಮತ್ತು ಲೀಲಾ ಪುರುಷರೂ ಆಗಿದ್ದರು. ಆವರ ಜೀವಿತದ ಅಲ್ಪಕಾಲದಲ್ಲಿಯೇ ಅನೇಕ ಅಸಾಧ್ಯ ಲೀಲೆಗಳಿಂದ ಮೆರೆದುದಾಗಿ ತಿಳಿಯುತ್ತದೆ. ಇಲ್ಲಿ ಹಿಂದೆ ತಿಳಿಸಿದ ಕೆಲವು ಸಂಗತಿಗಳು ಅವರ ಧಾರ್ಮಿಕ ಬದುಕಿಗೆ ಹೇಳಿ ಮಾಡಿಸಿದಂಥವುಗಳು ಎಂಬುದು ಗಮನಾರ್ಹ.

ಕೊಪ್ಪಳ ಗುಡ್ಡದ ಹಿಂದೆ ಇರುವ ಚಿಕ್ಕಗ್ರಾಮ ಮಂಗಳಾಪುರ. ಹಿರಿಯಮಠದ ಮಹಾದೇವಯ್ಯ ಹಾಗೂ ಗುರುಲಿಂಗಮ್ಮನವರಿಗೆ ಬಹುದಿನಗಳಿಂದ ಮಕ್ಕಳಾಗಿರಲಿಲ್ಲ. ಗುಡ್ಡದಲ್ಲಿರುವ ಮಳೇಮಲ್ಲೇಶ್ವರನ ದೇವಸ್ಥಾನ ಒಳ್ಳೆ ಜಾಗ್ರುತಸ್ಥಾನವೆಂದು ನಂಬಿಕೆ ಇತ್ತು. ಆ ದೇವರ ಅನುಗ್ರಹದಿಂದ ಜನಿಸಿದ ಗುಡದಯ್ಯನ ಬಾಲ್ಯ ಲೀಲೆಗಳನ್ನು ನೋಡಿ ಈತ ಸಾಮಾನ್ಯ ಮಗುವಲ್ಲ, ದೈವೀ ಪುರುಷನೆಂದು ತಂದೆ ತಾಯಿಯವರು ಆಶ್ಚರ್ಯದೊಂದಿಗೆ ಸಂತೋಷಪಟ್ಟರು. ಮಗು ಬೆಳೆದಂತೆ ಆತನ ಚಟುವಟಿಕೆಗಳಲ್ಲಿ ಅದ್ಭುತ ಬದಲಾವಣೆ ಕಂಡು ಬಂದವಂತೆ. ಪ್ರತಿದಿನ ದನಗಾಹಿಗಳೊಂದಿಗೆ ತಾನೂ ಹೋದಾಗ, ಆಗಾಗ ಶಿವಧ್ಯಾನದಲ್ಲಿ ಲೀನನಾಗಿ ಇರುತ್ತಿದ್ದನಂತೆ. ಬೆಳೆಯ ಸಿರಿ ಮೊಳಕೆಯಲ್ಲಿ ಎನ್ನುವಂತೆ ಬಾಲಕನು ಅಸಾಮಾನ್ಯ ಲೀಲೆಗಳನ್ನು ಗೈದ ಬಗ್ಗೆ ತಿಳಿದು ಬರುತ್ತದೆ. ಕೊಪ್ಪಳದ ಮಾಲೀಗೌಡರಾದ ಬಸನಗೌಡರ ಸತ್ತ ಆಕಳವನ್ನು ಬದುಕಿಸಿದನಂತೆ. ಮತ್ತು ಗೌಡರ ಪತ್ನಿ ಬಸಮ್ಮ ಅವರಿಗೆ ತಮ್ಮ ಜಡೆ ನೀಡಿ ನಿತ್ಯ ಪೂಜಿಸಿದಲ್ಲಿ ಮಕ್ಕಳನ್ನು ಪಡೆಯುತ್ತೀರೆಂದು ಆಶೀರ್ವದಿಸಿದರಂತೆ, ಮಾಲೀಗೌಡರ ಮನೆಯಲ್ಲಿ ಇಂದಿಗೂ ಭರಣಿಯಲ್ಲಿ ಪೂಜ್ಯರ ಜಡೆ ಪೂಜೆಗೊಳ್ಳುತ್ತದೆ. ಅಂದಿನಿಂದ ಅವರಿಗೆ ಜಡೇಗೌಡರ ಎಂದು ಕರೆದರಂತೆ. ಅಲ್ಲದೆ ಕೊಪ್ಪಳದ ಮರಾಠರ ಕುಟುಂಬದಲ್ಲಿ ಸತ್ತಮಗುವೊಂದನ್ನು ಬದುಕಿಸಿದ ಉಲ್ಲೇಖವಿದೆ.[೧] ಗೌಡರ ಮನೆಯಲ್ಲಿಯೇ ಹೆಚ್ಚು ವಾಸ್ತವ್ಯ ಇದ್ದುದರಿಂದ ಭಕ್ತಜನರಲ್ಲಿ ಬಾಲಕನನ್ನು ನೋಡಲು ತಂಡ ತಂಡವಾಗಿ ಬರಹತ್ತಿದಾಗ, ಗೌಡರು ಮಠಕ್ಕೆ ಹೋಗಿ ಜ. ಚನ್ನಬಸವ ಸ್ವಾಮಿಗಳಲ್ಲಿ ವಿನಂತಿಸಿಕೊಂಡು ಈತನು

೧. "ಗವಿಸಿದ್ಧೇಶ್ವರ ಪುರಾಣ" ಪಂ.ವೈ.ನಾಗೇಶಶಾಸ್ತ್ರಿಗಳು – ೧೯೭೧

ಅಸಾಮಾನ್ಯ ಬಾಲಕ ತಮ್ಮ ಹತ್ತಿರವೇ ಬೆಳೆಯಲಿ ಎಂದು ಗವಿಮಠಕ್ಕೆ ಕಳಿಸಿದರು. ಯೋಗ ಸಿದ್ಧಿಯನ್ನು ಪಡೆದ ಆ ಮಗುವಿಗೆ ಗವಿಸಿದ್ಧೇಶ್ವರ, ಎಂದು ಪುನರ್ ನಾಮಕರಣ ವಾಯಿತಂತೆ.

ಇನ್ನೊಂದು ಲೀಲೆಯನ್ನು ನೋಡಬಹುದು --- ಅಮವಾಸ್ಯೆಯಂದು ಚಂದ್ರದರ್ಶನ ಮಾಡಿದ ಸಂದರ್ಭವು. ಹೈದ್ರಾಬಾದ್ ನಿಜಾಮನ ಆಡಳಿತದಲ್ಲಿದ್ದ ಕೊಪ್ಪಳದ ಮಂತ್ರಿ ಆಗಿದ್ದ ಮೀರಆಲಂ ಕೊಪ್ಪಳಕ್ಕೆ ಬಂದು ದರ್ಬಾರು ನಡೆಸಿದ್ದಾಗ ಪಂಡಿತರು, ಜ್ಯೋತಿಷಿಗಳು, ಕವಿಗಳು ಹಾಜರಿದ್ದ ವಿದ್ವತ್ ಪ್ರದರ್ಶನ ನಡೆದಾಗ ಜ್ಯೋತಿಷಿಯೊಬ್ಬರು ಬಾಯಿತಪ್ಪಿನಿಂದಾಗಿ ಅಮವಾಸ್ಯೆಯ ಬದಲಾಗಿ ಹುಣ್ಣಿಮೀಎಂದಾಗ ಸಿಟ್ಟಿಗೆದ್ದ ಮಂತ್ರಿಯು ನಾಳೆಚಂದ್ರನನ್ನು ತೋರಿಸು ಇಲ್ಲವಾದಲ್ಲಿ ನಿನಗೆ ಶಿಕ್ಷೆ ಖಂಡಿತ ಎಂದನು. ಚಿಂತಿತನಾದ ಆತನಿಗೆ ಕನಸಿನಲ್ಲಿ ಆರಾಧ್ಯದೇವಿ ಬಂದು ನೀನು ಗವಿಸಿದ್ಧೇಶ್ವರರನ್ನು ಮೊರೆಹೋಗು ಚಿಂತೆದೂರವಾಗುತ್ತದೆ ಎಂದಳಂತೆ. ಅದರಂತೆ ಮಠದ ಸ್ವಾಮಿಗಳನ್ನು ಬೇಡಿದಾಗ ಪೂಜ್ಯರು ಅಭಯವಿತ್ತು, ಆನಿನ್ನ ಮಂತ್ರಿಯನ್ನು ಸಾಯಂಕಾಲ ನಮ್ಮ ಮಠದ ಕಡೆನೋಡಲು ತಿಳಿಸು ಎಂದರು. ಅಪ್ರಕಾರ ಪೂರ್ಣಚಂದ್ರನನ್ನು ಕಂಡು ಮಂತ್ರಿ ಬೆರಗಾದನಂತೆ. ಈ ಅಘಟಿತ ಘಟನೆ ದೈವಲೀಲೆ ಸರಿ.[೧]

ಕುಷ್ಠರೋಗವನ್ನು ಕಳೆದ ಭವರೋಗ ವೈದ್ಯರು ಎನ್ನುವದಕ್ಕೆ ಇನ್ನೊಂದು ಘಟನೆಯನ್ನು ನೋಡಬಹುದು, ಮಂತ್ರಿ ಮೀರ ಅಲಂಗೆ ಕುಷ್ಠರೋಗ ಇತ್ತು. ಎಷ್ಟೋವೈದ್ಯರನ್ನು ಕಂಡು ಚಿಕಿತ್ಸೆ ಪಡೆದರೂ ಗುಣಮುಖವಾಗದೇ ಇದ್ದಾಗ ಗವಿಮಠಕ್ಕೆ ಬಂದು ಪೂಜ್ಯರ ದರ್ಶನ ಪಡೆದು, ವಿನಂತಿಸಿಕೊಂಡನು.

---

೧. 'ಗವಿದೀಪ್ತಿ' ಗ.ವಿ.ಬಳಗದ ಪ್ರಕಟನೆ, ಪು – ೨೯೯–೧೯೭೬ ಹಾಗೂ ಬಿ.ಸಿ.ಪಾಟೀಲ ರೂಪಕ ಪು.–೧೧–೧೯೯೫

ಭಕ್ತರನ್ನು ಕಾಪಾಡುವದೇ ದೇವರ ಕೆಲಸ, ಗವಿಸಿದ್ಧೇಶನು ನಿನ್ನನ್ನು ಕಾಪಾಡುತ್ತಾನೆ, ಚಿಂತೆಬೇಡ ಎಂದು ಹೇಳಿ ಮಹಾ ಪ್ರಸಾದ ಕೊಟ್ಟು, ಔಷಧ ಉಪಚಾರವನ್ನು ಮಾಡಿದ ಬಗ್ಗೆ ಉಲ್ಲೇಖ ಇದೆ. ಆಲಂನು ಭಕ್ತಿಯಿಂದ ಮಠಕ್ಕೆ ದಿನಾಲೂ ಆಗಮಿಸಿ ಗುರುಗಳ ದಿವ್ಯ ದರ್ಶನ, ಪ್ರಸಾದ ಸ್ವೀಕರಿಸಿದನು, ನಂತರ ಈ ದೊಡ್ಡ ರೋಗದಿಂದ ಮುಕ್ತನಾದನು.[೧]

ಈ ಮೇಲಿನ ಲೀಲಾ ಕಥೆಗಳನ್ನು ಗಮನಿಸಿದಾಗ ಪೂಜ್ಯರು ಜಾತಿ, ಮತ–ಪಂಥವನ್ನು ನೋಡದೇ ಸರ್ವರನ್ನು ಸಮಾನ ದೃಷ್ಟಿಯಿಂದ ಕಾಣುತ್ತಿದ್ದದು ಕಂಡುಬರುತ್ತದೆ, ಇದೂ ಕೂಡಾ ಜನಪರ ಕಾರ್ಯವೆಂದೇ ಭಾವಿಸಬೇಕು, ಈ ಕಾರಣಕ್ಕಾಗಿಯೇ ಗವಿಮಠಕ್ಕೆ ಮೀರಆಲಂ ಮಂತ್ರಿ ತನ್ನ ವಶದಲ್ಲಿದ್ದ ಬಹದೂರಬಂಡಿ ಗ್ರಾಮವನ್ನು ದಾನವಾಗಿ ಕೊಟ್ಟಬಗ್ಗೆ (೧೮೦೧ರಲ್ಲಿ) ಮಠದಲ್ಲಿ ಸನ್ನದು ಇದೆ.[೨]

ಇಲ್ಲಿ ಪೂಜ್ಯರು ಪರಂಪರಾಗತವಾಗಿ ಬಂದಿರುವ ದಿವ್ಯ ವನಸ್ಪತಿ ಔಷಧ (ಆರ್ಯವೇದ) ಪಂಡಿತರಾಗಿದ್ದುದು ತಿಳಿಯುತ್ತದೆ. ಅದೇ ಪರಂಪರೆ ಮುಂದಿನ ಎಲ್ಲಾ ಸ್ವಾಮಿಗಳೂ ಸಾಧಿಸಿಕೊಂಡು ಬರುತ್ತಿದ್ದಾರೆ ತಮ್ಮ ಗುರುಗಳಾದ ಚೆನ್ನಬಸವ ಸ್ವಾಮಿಗಳಿಗಿಂತ ಮೊದಲೇ ೧೮೧೩ರಲ್ಲಿ ಸಜೀವ ಸಮಾಧಿಯನ್ನು ಹೊಂದಿದರಂತೆ.[೨] ಅಂದಿನಿಂದಲೇ ಕೊಪ್ಪಳ ಗವಿಸಿದ್ಧೇಶ್ವರರ, ಜಾತ್ರಾ ಮಹೋತ್ಸವ ಮಹಾರಥೋತ್ಸವ ಪ್ರಾರಂಭವಾಯಿತಂತೆ. ಗವಿಮಠದ ಪರಂಪರೆಯಲ್ಲಿ ಇವರು ಹನ್ನೊಂದನೇಅವರು. ಇವರ ಗದ್ದುಗೆಯನ್ನು ಜಾಗೃತ ಸ್ಥಾನವೇಂದು ಭಕ್ತಜನರು ಇಂದಿಗೂ ನಂಬುತ್ತಿದ್ದಾರೆ.
ಇವರ ನಂತರ ಹಿರಿಯ ಶಾತವೀರ ಸ್ವಾಮಿಗಳು ೧೨ನೇ ಪೀಠಾಧ್ಯಕ್ಷರೆಂದು ಅಧಿಕಾರ ವಹಿಸಿಕೊಂಡರು. ಜ. ಗವಿಸಿದ್ಧೇಶ್ವರ ಸ್ವಾಮಿಗಳ ಸಂಪೂರ್ಣ ಕೃಪೆಗೆ ಪಾತ್ರರಾಗಿದ್ದರು ಎಂದು ಮೈಲಾರದ ಬಸವಲಿಂಗ ಶರಣರು ತಮ್ಮ ಶಿವಾನುಭವ ದರ್ಪಣದಲ್ಲಿ ಹೀಗೆ ನೆನೆಯುತ್ತಾರೆ.

---

೧) ಪಂ. ವ್ಯೈ. ನಾಗೇಶ ಶಾಸ್ತ್ರೀಗಳು – 'ಗವಿಸಿದ್ಧೇಶ್ವರ ಪುರಾಣ'–೧೬ನೇ ಸಂಧಿ–೧೯೭೧ ಮತ್ತು ಬಿ.ಸಿ.ಪಾಟೀಲ್ ಗವಿಮಠದ ರೂಪಕ – ಪು–೧–೧೯೯೫

೨) "ಶಾಂತಪ್ರಭೆ"–ಗ.ವಿ.ಬಳಗದ ಪ್ರಕಟಣೆ – ಪುಟ–೧೪೩–೧೯೯೩



ಗವಿಯ ಶಾಂತವೀರ ನಿಜದನು ಭವಸಾರ ।

ಭುವನದೊಳಿಹ ಶಿವಶರನ ಗಣಂಗಳೆ ।

ತವಕದೊಳವಿರತ ಪೊರೆವ ಸುಧೀರ ।

ಮುನ್ನಿನಾದಿನಾಥ ನಂಬಿದವರನ್ನು ಪೊರೆವದಾತ ।

ಅನ್ಯವನರಿಯದೆ ತನ್ನ ಭಜಿಸುತಿಹ

ಚೆನ್ನವೀರಮದ್ ಗುರು–ಗುರುವರ ನೀತ ।

ಇಲ್ಲಿ ಚೆನ್ನವೀರಮದ್ ಗುರು–ಗುರುವರ ನೀತನೆಂದು ಭಕ್ತಿಯಿಂದ ನೆನೆದಿರುವದರಿಂದ ಮೈಲಾರದ ಬಸವಲಿಂಗ ಶರಣರ ಗುರುಗಳಾದ ಲಿಂಗನಾಯಕನ ಹಳ್ಳಿ ಚೆನ್ನವೀರ ಸ್ವಾಮಿಗಳ ಗುರುಗಳಿವರೆಂದು ತಿಳಿದು ಬರುತ್ತದೆ.[೧] ಇವರ ಸಮಕಾಲೀನರಾದ ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಚೆನ್ನವೀರ ಸ್ವಾಮಿಗಳ ಹತ್ತಿರ ಆಶ್ರಯಿಸಿ, ಅಭ್ಯಾಸ ಮಾಡಿದ್ದು ತಿಳಿದು ಬರುತ್ತದೆ.[೨]

ಮುಂಡರಗಿ ಹತ್ತಿರ ಕಪೋತಗಿರಿಯಲ್ಲಿಯ ಕೊನೆಯ ಕೊಳ್ಳದಲ್ಲಿದ್ದ ತಪಸ್ವಿಗಳಾದ ಶಾಂತವೀರ ಸ್ವಾಮಿಗಳ ದರ್ಶನ ಪಡೆದರು, ಆ ತಪಸ್ವಿಗಳೆ ಗವಿಮಠದ ಹಿರಿಯ ಶಾಂತವೀರ ಸ್ವಾಮಿಗಳೆಂದು ತಿಳಿದು ಬರುತ್ತದೆ. ಕಪೋತಗಿರಿಯಲ್ಲಿ ನಂದಿವೇರಿಮಠ ಇದೆ. ಇಲ್ಲಿ ಈ ಪರಂಪರೆಯಲ್ಲಿದ್ದ ಆರನೇ ಪೀಠಾಧಿಪತಿಗಳಾದ ಜ.ಶಿವಲಿಂಗ ಸ್ವಾಮಿಗಳು ಆಗಾಗ್ಗೆ ಬರುತ್ತಿದ್ದು, ಲಿಂಗೈಕ್ಯರಾದ ಪ್ರಯುಕ್ತ ಅವರ ಗದ್ದುಗೆ ಅಲ್ಲಿಯೇ ಇದೆ ಎಂದು ಹೇಳುತ್ತಾರೆ, ಜ. ಹಿರಿಯ ಶಾಂತವೀರ ಸ್ವಾಮಿಗಳ ಗದ್ದುಗೆ ಕೊಪ್ಪಳ ಮಠದಲ್ಲಿದೆ. ಇವರ ನಂತರ ಸೇವೆಯಲ್ಲಿದ್ದ ಶಿವಶಾಂತವೀರ ಸ್ವಾಮಿಗಳು ಪೀಠಕ್ಕೆ ಬಂದರು. ಇವರು ಹುಚ್ಚಪ್ಪ ಸ್ವಾಮಿಗಳೆಂದು ಪ್ರಸಿದ್ಧರಾಗಿದ್ದು, ಇವರು ಕೂಡಾ ಅನೇಕ ಲೀಲೆಗಳನ್ನು ತೋರಿಸಿ ಭಕ್ತರನ್ನು ಉದ್ಧರಿಸಿದ ಬಗ್ಗೆ ತಿಳಿಯುತ್ತದೆ. ಇವರು ಕೊಪ್ಪಳ ತಾಲೂಕಿನ ಬಿಸರಳ್ಳಿಯ ಬೃಹನ್ಮಠ (ಹಿರೇಮಠ)ದ ಶಿವಬಸವಾರ್ಯ ಶಾಸ್ತ್ರಿಗಳ ಜೇಷ್ಠಪುತ್ರರು, ಇವರ ಕಾಲಕ್ಕೂ ಮಠದಲ್ಲಿ ಅನ್ನದಾಸೋಹ,

---

೧) ಸ. ಸ. ಬಸವನಾಳ – ಮೈಲಾರದ ಬಸವಲಿಂಗಶರಣರು – ಪು–೧೮೭–ಉದ್ಧೃತ 'ಗವಿದೀಪ್ತಿ' ಕೊಪ್ಪಳ –೧೯೭೬

೨) ಶ್ರೀ ನಿ. ಪ್ರ.ಬಾಲಲೀಲಾ ಮಹಾಂತಶಿವಯೋಗಿಗಳು –'ಕೈವಲ್ಯದರ್ಪಣ' ಪು–೩–೧೯೫೨

ಶಿಕ್ಷಣವ್ಯವಸ್ಥೆ ಯಥಾ ಪ್ರಕಾರ ಸಾಗಿತ್ತು. ಆದರೆ ಹೆಚ್ಚು ಊರ್ಜಿತಗೊಂಡಬಗ್ಗೆ ತಿಳಿಯುತ್ತಿಲ್ಲ. ಇವರು ಪರಂಪರೆಯ ೧೩ನೇ ಪೀಠಾಧ್ಯಕ್ಷರು. ಬಿಸರಳ್ಳಿ ಗ್ರಾಮದಲ್ಲಿ ಇವರ ಮನೆತನದವರು ಈಗಲೂ ಇದ್ದಾರೆ.

ಇವರ ನಂತರ ಕೊಪ್ಪಳ ತಾಲೂಕಿನ ಮಾದಿನೂರ ಬೃಹನ್ಮಠದ ಗುರುಬಸಯ್ಯನವರ ಮಗನು ಮರಿಶಾಂತವೀರ ಸ್ವಾಮಿಗಳು, ಪರಂಪರೆಯ ೧೪ನೇ ಸ್ವಾಮಿಗಳಾಗಿ ಅಧಿಕಾರಕ್ಕೆ ಆಗಮಿಸಿದರು, ಇವರ ಕಾಲಕ್ಕೂ ಮಠದ ಚಟುವಟಿಕೆಗಳು ಯಥಾಪ್ರಕಾರ ಮುಂದುವರಿದಿದ್ದುದು ತಿಳಿಯುತ್ತದೆ. ಇವರ ಸೇವೆಯಲ್ಲಿದ್ದ ತಾಂಬ್ರಗುಂಡಿಯ ಪಟ್ಟದಾರ್ಯರ ಪುತ್ರ ಅನ್ನದಾನಯ್ಯ ಅವರು ಶಿವಶಾಂತವೀರ ಸ್ವಾಮಿಗಳೆಂದು ೧೫ನೇ ಪಟ್ಟಾಧ್ಯಕ್ಷರಾದರೆಂದು ತಿಳಿಯುತ್ತದೆ. ಇವರು ಗಡ್ಡಧಾರಿಗಳಾಗಿದ್ದರಿಂದ ಇವರಿಗೆ ಗಡ್ಡದ ಅಜ್ಜನವರು ಎಂದು ಭಕ್ತರು ಕರೆಯುತ್ತಿದ್ದರಂತೆ. ತಾಮ್ರಗುಂಡಿಯಲ್ಲಿ ಇವರ ವಂಶದವರು ಇದ್ದಾರೆ. ಗವಿಮಠದ ಕಾರ್ಯಕ್ಷೇತ್ರವನ್ನು ವಿಸ್ತಾರಗೊಳಿಸಿದರು. ಪಂಡಿತರಿಗೆ, ಕಲಾವಿದರಿಗೆ, ವಿದ್ವತ್ ಜನರಿಗೆ ಆಶ್ರಯ ನೀಡಿದ್ದರು. ಇವರು ಕೂಡಾ ಜಾತಿ ಮತಗಳನ್ನು ಎಣಿಸದೇ ಮಠದಲ್ಲಿ ಎಲ್ಲ ಮಕ್ಕಳಿಗೂ ದಾಸೋಹದಲ್ಲಿ ಸೇರಿಸಿದ್ದರು. ಶಿಕ್ಷಣಕ್ಕೆ ಹೆಚ್ಚು ಒತ್ತುಕೊಟ್ಟು, ಸಂಸ್ಕೃತ, ಕನ್ನಡ ಕಲಿಸುವ ಏರ್ಪಾಡು ಮಾಡಿದ್ದರು. ಇವರನ್ನು ನೋಡಿದ ಕೊಪ್ಪಳದ ಹಿರಿಯ ನಾಗರಿಕರು ಕೆಲವು ವರ್ಷಗಳ ಹಿಂದೆ ಹೇಳಿದ್ದು ತಿಳಿಯುತ್ತದೆ.[೧]

ಬಳ್ಳಾರಿ ಜಿಲ್ಲಾದಲ್ಲಿ ಇವರ ಕಾರ್ಯಕ್ಷೇತ್ರ ವಿಸ್ತಾರಅಗಿತ್ತು. ಕಡ್ಲಬಾಳು ಗ್ರಾಮದಲ್ಲಿ ಶಾಖಾ ಮಠ ಕಟ್ಟಿಸಿದ್ದಾರೆ. ಮಠದಲ್ಲಿ ಬಡಮಕ್ಕಳಿಗಾಗಿ ಶಿಕ್ಷಣದ ವ್ಯವಸ್ಥೆ, ಶಾಸ್ತ್ರ ಪುರಾಣ ಬೋಧಿಸುವ ವ್ಯವಸ್ಥೆಯನ್ನು ಮಾಡಿದ್ದು ತಿಳಿದು ಬರುತ್ತದೆ. ಪ್ರತಿ ವರ್ಷ ಸೀಗಿ ಹುಣ್ಣಿಮೆಯ ದಿನ ಜಾತ್ರೆ ನಡೆದು ಭವ್ಯವಾದ ರಥೋತ್ಸವವು ಜರುಗುತ್ತದೆ, ಇವರಕಾಲಕ್ಕೆ ಗವಿಮಠದಲ್ಲಿ ಅನೇಕ ವಿದ್ವಾಂಸರಿಗೆ ಆಶ್ರಯವಿತ್ತಿದ್ದರು. ಆದರಲ್ಲಿ ಪ್ರಖ್ಯಾತ ಪಂಡಿತ ಕೊಂಗವಾಡ ವೀರಭದ್ರ ಶಾಸ್ತ್ರಿಗಳೂ ಒಬ್ಬರು. ಆಸ್ಥಾನ ಪಂಡಿತರಾಗಿ ಪಂಡಿತ ಡಾ।। ವೈ. ನಾಗೇಶಶಾಸ್ತ್ರಿಗಳು ಇದ್ದರು. ಇವರಿಂದ ಕೊಪ್ಪಳ ಗವಿಶಿದ್ಧೇಶ್ವರ ಪುರಾಣವನ್ನು ಬರೆಯಿಸಿದರು. ಶಾಸ್ತ್ರಿಗಳು ಕನ್ನಡ ಭಾಷಾ ಮಹಾ ಸಾಹಿತಿಗಳು, ಕವಿಗಳಾಗಿದ್ದರು.

---

೧. "ಗವಿದೀಪ್ತಿ"– ಗವಿಮಠದ ಪರಂಪರೆ – ಎಚ್. ಎಸ್. ಪಾಟೀಲ್ ಪು–೩೦೪– ೧೯೭೬

೧೯೩೩ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ೧೯ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರಿಂದ [೧] ಇದು ಗವಿಮಠಕ್ಕೆ ಹೆಮ್ಮೆಯ ವಿಷಯ ಎಂಬುದನ್ನು ಗಮನಿಸಬೇಕು. ಪೂಜ್ಯರು ಸ್ವತಃ ಪಂಡಿತರಾಗಿದ್ದರಿಂದ ಶಿಕ್ಷಣದ ಅಭಿವೃದ್ಧಿಗೆ ಹೆಚ್ಚು ಅವಕಾಶಮಾಡಿದ್ದು ತಿಳಿಯುತ್ತದೆ.

ಜ. ಶಿವಶಾಂತವೀರ ಸ್ವಾಮಿಗಳು ಉಗ್ರತಪಸ್ವಿಗಳಾಗಿದ್ದರು. ವಾಕ್ಯಸಿದ್ಧಿಯು ಅದ್ಭುತವಾಗಿತ್ತು. ಶಿಕ್ಷಣ ಪ್ರಸಾರ ಕೃಷಿ ಕಾರ್ಯಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಟ್ಟಿದ್ದರು. ಇಂದಿಗೂ ನಾವು ಕೊಪ್ಪಳ, ಕಡ್ಲಬಾಳ, ಹೂವಿನ ಹಡಗಲಿ ಗವಿಮಠಗಳಲ್ಲಿ ಕೃಷಿಕಾರ್ಯದ ಸಾಧನೆ ನೋಡಬಹುದು. ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಕನ್ನಡ, ಸಂಸ್ಕೃತ, ಸಂಗೀತ ವಿಷಯಗಳನ್ನು ಅಭ್ಯಾಸ ಮಾಡಿಸುತ್ತಿದ್ದರು. ಭಕ್ತರ್ ಜೊತೆ ಗ್ರಾಮಗಳಿಗೆ ಬೇಟಿ ನೀಡಿದಾಗ ಅಲ್ಲಿ ಖಾಸಗಿ ಶಾಲೆಗಳನ್ನು ಮಠ, ದೇವಾಲಯಗಳಲ್ಲಿ ತೆರೆದು ತಮ್ಮ ಮಠದ ಶಿಷ್ಯರೊಬ್ಬರನ್ನು ಶಿಕ್ಷಕರನ್ನಾಗಿ ನೇಮಿಸುತ್ತಿದ್ದುದು ತಿಳಿಯುತ್ತದೆ.

ಆಗ್ಗೆ ಉಜ್ಜನಿ ಪೀಠದ ಜ.ಸಿದ್ಧಲಿಂಗ ಶಿವಾಚಾರ್ಯರು ಸಹ ಸಂಸ್ಕೃತ ವಿದ್ವಾನರಾಗಿದ್ದ ಕೊಂಗವಾಡದ ವೀರಭದ್ರ ಶಾಸ್ತ್ರಿಗಳಿಂದ ಸಂಸ್ಕೃತ ಅಭ್ಯಾಸವನ್ನು ಮಾಡಿದ ಬಗ್ಗೆ ತಿಳಿಯುತ್ತದೆ. ಈ ವಿಷಯವನ್ನು ಆಗಾಗ್ಗೆ ಜ.ಮರಿಶಾಂತವೀರ ಸ್ವಾಮಿಗಳು ಹೇಳುತ್ತಿದ್ದರಂತೆ. ಮರಿಶಾಂತವೀರ ಸ್ವಾಮಿಗಳೇ ಸ್ವತಃ ಸಂಸ್ಕೃತ ವಿದ್ವಾನರಾಗಿದ್ದು ತಾವೇ ಅನೇಕಸಾರಿ ಶಿಷ್ಯರಿಗೆ ಬೋಧಿಸುತ್ತಿರಂತೆ.

ಜ.ಶಿವಶಾಂತವೀರ ಸ್ವಾಮಿಗಳ ಅಪೇಕ್ಷೆಯಂತೆ ಸೂಡಿಯ ಜುಕ್ತಿಹಿರೇಮಠದ ಶ್ರೀಕಂಠಶಿವಾಚಾರ್ಯರು ಮುಂದೆ ಮರಿಶಾಂತವೀರ ಸ್ವಾಮಿಗಳೆಂಬ ಪುನರ್ ನಾಮದಿಂದ ಗವಿಮಠದ ೧೬ನೇ ಪೀಠಾಧ್ಯಕ್ಷರೆಂದು ೧೯೨೨ನೇ ಡಿಸೆಂಬರದಲ್ಲಿ ಅಧಿಕಾರ ಸ್ವೀಕರಿಸಿದರು.

---

೧. ಶ್ರೀ ಜೋಳದ ರಾಶಿ ದೊಡ್ಡನಗೌಡರು – ಪಂ.ವ್ಯೆ.ನಾಗೇಶ ಶಾಸ್ತ್ರಿಗಳು ಪು–೨೪–೧೯೮೦

ಈಗಿನ ಗದಗ ಜಿಲ್ಲೆಯ ರೋಣ ತಾಲೂಕಿನ ಸೂಡಿಯು ಕನ್ನಡನಾಡಿನ ಚರಿತ್ರೆಯಲ್ಲಿ ಪ್ರಸಿದ್ಧಿಪಡೆದ ಗ್ರಾಮವು. ಇದರ ಸುತ್ತಲಿನ ಪ್ರದೇಶಕ್ಕೆ ಕಿಸುಕಾಡು ಎನ್ನುತ್ತಿದ್ದುದು ಇತಿಹಾಸದಿಂದ ತಿಳಿಯುತ್ತದೆ. ಕ್ರಿ.ಶ. ೧೧೧೦ರಲ್ಲಿ ಹುನಗುಂದ ತಾಲೂಕಿನ 'ಅರಸಿಬೀಡಿ' ಎಂಬಲ್ಲಿ ರಾಜ್ಯವಾಳುತ್ತಿದ್ದ ಚಾಲುಕ್ಯರ ರಾಜಕುವರಿ 'ಅಕ್ಕಾದೇವಿ'ಯ ಆಡಳಿತಕ್ಕೆ ಕಿಸುಕಾಡು ಒಳಪಟ್ಟಿತ್ತು. ಸೂಡಿಯಲ್ಲಿ ರಾಷ್ಟ್ರಕೂಟ, ಚಾಲುಕ್ಯ, ಕಳಚೂರ್ಯ ಇತ್ಯಾದಿ ಅರಸುಮನೆತನದ ಹಲವು ಶಾಸನಗಳು ದೊರೆತಿವೆ.[೧]

ಕ್ರಿ.ಶ. ೮-೯ನೇ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಕಾಳಾಮುಖ ಸಂಪ್ರದಾಯವು ಪ್ರಚಾರದಲ್ಲಿತ್ತು. ಪ್ರಬಲವಾಗಿ ಪ್ರಸಿದ್ಧಿಪಡೆದದ್ದು ಸುಮಾರು ೧೦-೧೧ನೇ ಶತಮಾನದಲ್ಲಿ[೨] ಆಗ ಶ್ರೀಶೈಲ ಕ್ಷೇತ್ರವು ಸುಪ್ರಸಿದ್ಧ ಕಾಳಾಮುಖ ಕೇಂದ್ರವಾಗಿತ್ತು. ಬಹುತೇಕ ಈ ಕೇಂದ್ರದಿಂದ ಅನೇಕ ಕಾಳಾಮುಖರು ನಮ್ಮ ರಾಜ್ಯದ ಅನೇಕ ಕಡೆ ಬಂದಿದ್ದರು. ಈ ನಾಡಿಗೂ ಬಂದಿದ್ದರೆಂದು ಹೇಳಬಹುದು. ಇದಕ್ಕೆ ಸಾಕ್ಷಿಯಾಗಿ ಸೂಡಿಯಲ್ಲಿ ಪ್ರಾಚೀನ ಮಲ್ಲಿಕಾರ್ಜುನ ದೇವಾಲಯವಿದೆ.

ಆಗ್ಗೆ ಸೂಡಿಯು ಒಂದು ಅಗ್ರಹಾರವೂ ಆಗಿತ್ತು. ಅವರ ಸ್ಥಾನ ಪತಿಗಳು ಲಾಕುಳಾಗಮದಲ್ಲಿ ಪ್ರವೀಣರಾಗಿದ್ದುದು ತಿಳಿಯುತ್ತದೆ. ಸೂಡಿಯಲ್ಲಿ ಜುಕ್ತಿಹಿರೇಮಠ ಎಂಬ ಮನೆತನವಿದೆ. ಇವರ ವಂಶದಲ್ಲಿ ಯತಿಗಳ ಪರಂಪರೆಯೇ ಸಾಗಿಬಂದದ್ದು ಉಲ್ಲೇಖವಿದೆ. ಹಿಂದೆ ಕೊಟ್ಟೂರ ಬಸವೇಶ್ವರ ಶಿವಾಚಾರ್ಯರು ಜುಕ್ತಿ ಹಿರೇಮಠದ ಪಟ್ಟಾಧಿಕಾರಿಗಳಾಗಿದ್ದರು. ಇವರು ಗವಿಮಠದ ಮರಿಶಾಂತವೀರ ಸ್ವಾಮಿಗಳ ದೊಡ್ಡಪ್ಪನವರ ಮಕ್ಕಳೆಂದು ತಿಳಿಯುತ್ತದೆ.[೩]

---

೧. ಧಾರವಾಡ ಜಿಲ್ಲಾ ಗೆಝೆಟಿಯರ್-ಪುಟ-೮೫೪-ಉದ್ಧೃತ-'ಗವಿದೀಪ್ತಿ'-೧೯೭೬

೨. ಡಾ||ಎಂ.ಚಿದಾನಂದಮೂರ್ತಿ ಕ.ಶಾ.ಸಂ. ಅಧ್ಯಯನ-ಪು-೧೩೧-೧೯೬೬

೩. ಲೇಖಕರು ಸೂಡಿಯಲ್ಲಿ ಕ್ಷೇತ್ರಕಾರ್ಯದಲ್ಲಿ ಜುಕ್ತಿಹಿರೇಮಠ ಅವರ ಮನೆತನದವರಲ್ಲಿ ವಿಚಾರಿಸಿದಸಂಗತಿ.

ಸೂಡಿಯ ಜುಕ್ತಿಹಿರೇಮಠದ ಬಸವಲಿಂಗಯ್ಯ ಹಾಗೂ ಶಾಂತಮ್ಮನವರ ಪುತ್ರನಾದ ಶ್ರೀಕಂಠನು ದಿನಾಂಕ : ೦೩-೧೨-೧೮೮೮ರಲ್ಲಿ ಜನಿಸಿದರು. ಬಸವಲಿಂಗಯ್ಯ ಅವರು ಪ್ರಸಿದ್ಧ ಜ್ಯೋತಿಷಿಗಳು. ಮಗನ ಜನ್ಮ ಕುಂಡಲಿ ನೋಡಿ ಈತ ದೊಡ್ಡಸನ್ಯಾಸಿ ಆಗಿ ಪ್ರಸಿದ್ಧಿ ಪಡೆಯುತ್ತಾನೆಂದು ಜಾತಕ ಬರೆದಂತೆ, ಮುಂದೆ ಗವಿಮಠದ ಪರಂಪರೆಯಲ್ಲಿ ೧೬ನೇ ಪೀಠಾಧಿಪತಿಗಳಾಗಿದ್ದುದು ತಿಳಿಯುತ್ತದೆ. ಇವರೂ ಸಹ ಕಾಶಿಯಲ್ಲಿ ಜಂಗಮವಾಡಿ ಮಠದಲ್ಲಿ ಸಂಸ್ಕೃತ, ವೇದ ಶಿಕ್ಷಣವನ್ನು ಪಡೆದರು. ಇವರ ಘನ ವಿದ್ವತ್ತನ್ನು ಕಂಡು, ತಮ್ಮ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡರು, ೧೯೦೯ ಡಿಸೆಂಬರ್ ೨೭,೨೮,೨೯ ರಂದು ಬಳ್ಳಾರಿಯಲ್ಲಿ ಅಖಿಲಭಾರತ ಐದನೇ ವೀರಶೈವ ಮಹಾ ಸಭೆಗೆ ಜ. ಶಿವಶಾಂತವೀರ ಮಹಾಸ್ವಾಮಿಗಳು ಆಗಮಿಸಿದ್ದರು.[೧] ಸಭಾ ಅಧ್ಯಕ್ಷತೆಯನ್ನು ವಾರದ ಮಲ್ಲಪ್ಪನವರು ವಹಿಸಿದ್ದರು. ಆಗ್ಗೆ ಶ್ರೀಕಂಠನೂ ಆಗಮಿಸಿದ್ದರಂತೆ. ಆತನ ಜಾಣ್ಮೆ, ವಾಕ್ ಚಾತುರ್ಯ ನೋಡಿ, ಸಂತೋಷದಿಂದ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡರಂತೆ.

ಕ್ರಿ.ಶ. ೧೮೦೧ ರಲ್ಲಿಯೇ ಹಿಂದಿನ ಹೈದ್ರಾಬಾದ್ ನಿಜಾಮರಿಂದ ಹಲವು ಹಳ್ಳಿಗಳನ್ನು ಪಡೆದಿದ್ದ ಗವಿಮಠವು ಸಂಸ್ಥಾನ ಮಠವಾಗಿ ಬೆಳೆಯತೊಡಗಿತು. ಜ ಮರಿಶಾಂತವೀರ ಸ್ವಾಮಿಗಳು ಕಠೋರ ಯೋಗಾಭ್ಯಾಸದ ಫಲವಾಗಿ, ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದರು. ಅಪೂರ್ವ ತೇಜಸ್ಸನ್ನು ಹೊಂದಿದವರಾಗಿದ್ದರು.

ಇವರ ಜೀವಿತ ಕಾಲದಲ್ಲಿ ಬಡ ವಿದ್ಯಾರ್ಥಿಗಳಿಗೆ ಮಠದಲ್ಲಿಯೇ ವ್ಯವಸ್ಥೆಮಾಡಿ, ಶಿಕ್ಷಣಕ್ಕೆ ಹೆಚ್ಚು ಅವಕಾಶ ಕಲ್ಪಿಸಿದ್ದರು. ಜೊತೆಗೆ ಉಚಿತ ಪ್ರಸಾದ ವ್ಯವಸ್ಥೆ ಮಾಡಿದ್ದರು (ಇವರ ಜನಪರ ಕಾರ್ಯಗಳನ್ನು ಪ್ರತ್ಯೇಕ ಅಧ್ಯಾಯದಲ್ಲಿ ವಿವರಿಸಲಾಗಿದೆ).

---

೧. "ಆಲಮೇಲ ಶಿವಲಿಂಗರಾವ್ ದೇಶಮುಖರು"-ಶ್ರೀ ಸಿದ್ಧಲಿಂಗ ದೇಸಾಯಿ-ಪು. ೨೦-೨೦೦೪

ಪ್ರತಿ ವರ್ಷ ಜಾತ್ರಾ ಮಹೋತ್ಸವದಲ್ಲಿ ಹಲವಾರು ಗುರು–ವಿರಕ್ತ ಸ್ವಾಮಿಗಳನ್ನು ಆವ್ಹಾನಿಸಿ, ಅವರಿಗೆ ಗೌರವ ನೀಡುತ್ತಾರೆ. ಕೆಲವರನ್ನು ಪಲ್ಲಕ್ಕಿಯಲ್ಲಿ ಮೆರೆಸುತ್ತಾರೆ. ತಾವೆಂದೂ ಪಲ್ಲಕ್ಕಿಯಲ್ಲಿ ಕೂತಿಲ್ಲವೆಂದು ಹೇಳುತ್ತಾರೆ. ತಾವು ಪರಸ್ಥಳಕ್ಕೆ ಭಿಕ್ಷೆ ಸಂಚಾರಕ್ಕೆ ಹೋಗುವಾಗ ಎತ್ತಿನ ದಮಣಿಯ ಲ್ಲಿ ಹೋಗುತ್ತಿದ್ದರಂತೆ. ಆ ಗ್ರಾಮದಲ್ಲಿ ಜಾತಿ–ಮತ–ಧರ್ಮ ಎಂಬುದನ್ನು ಎಣಿಸದೇ ಎಲ್ಲಾ ಭಕ್ತರನ್ನು ಮುಕ್ತ ಮನಸ್ಸಿನಿಂದ ಆಶೀರ್ವದಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಕೊಪ್ಪಳದಲ್ಲಿ ತಮ್ಮ ಕಾಲಕ್ಕೆ ಪ್ರಾಥಮಿಕ, ಪ್ರೌಢ ಹಾಗೂ ಕಾಲೇಜುಗಳನ್ನು ೧೯೫೦ ರ ಹಿಂದೆಯೇ ಪ್ರಾರಂಭಿಸಿದ್ದರು. (ಪೂರ್ಣ ವಿವರಕ್ಕಾಗಿ ಪ್ರತ್ಯೇಕ ಶೈಕ್ಷಣಿಕ ಅಧ್ಯಾಯದಲ್ಲಿ ವಿವರಿಸಲಾಗಿದೆ). ಅನೇಕ ಪ್ರತಿಭಾವಂತ ವಿಧ್ಯಾರ್ಥಿಗಳು ಉನ್ನತ ಹುದ್ದೆಗೆ ಹೋದ ಉದಾಹರಣೆಗಳಿವೆ. ಆಗ್ಗೆ ಹೈದ್ರಾಬಾದ್ ನಿಜಾಮರ ಆಡಳಿತದಲ್ಲಿ ಶಿಕ್ಷಣವು ತೀರಾ ಹಿಂದುಳಿದಿತ್ತು. ಸ್ವಾಮಿಗಳು ಈ ಕೊರತೆಯನ್ನು ಹೋಗಲಾಡಿಸಿದರು. ಇವರು ಒಳ್ಳೇ ವಾಙ್ಮಯಿಗಳಾಗಿದ್ದರು. ವಾದ–ವಿವಾದಗಳನ್ನು ಬಹಳ ಜಾಣ್ಮೆಯಿಂದ ಪರಿಹರಿಸುತ್ತಿದ್ದರು.

ಜ. ಮರಿಶಾಂತವೀರ ಸ್ವಾಮಿಗಳು ಸುಮಾರು ೧೯೨೪–೨೫ ನೇ ಸಾಲಿನಲ್ಲಿ ಬನವಾಸಿ ಪ್ರಕರಣದಲ್ಲೂ ಸಮರ್ಪಕವಾಗಿ ವಾದಿಸಿ ತಮ್ಮ ಪಾಂಡಿತ್ಯ, ಚಾತುರ್ಯ ಹಾಗೂ ಶಾಸ್ತ್ರಗಳ ಸೈದ್ಧಾಂತಿಕ ಆಧಾರದಿಂದ ವೀರಶೈವರು ಶೂದ್ರರಲ್ಲ ಎಂಬುದನ್ನು ಸಾಬೀತು ಪಡಿಸಿದ್ದು ತಿಳಿಯುತ್ತದೆ[೧] (ಹಾನಗಲ್ ಕುಮಾರ ಸ್ವಾಮಿಗಳ ತಂಡದಲ್ಲಿ).

ಉತ್ತರ ಕರ್ನಾಟಕದಲ್ಲಿ ಪರಳಿ–ಬನವಾಸಿ ಪ್ರಕರಣಗಳ ಮೊದಲೇ ೧೯೦೧ ರಲ್ಲಿ ಗೋಪಾಲ ಮತ್ತು ಹಣಮಂತ ಎಂಬುವರಿಗೆ ಮೊಕದ್ದಮೆಯಲ್ಲಿ ಮುಂಬಯಿ ಹೈಕೋರ್ಟ ಲಿಂಗಾಯತರು ಶೂದ್ರರು ಎಂಬ ತೀರ್ಪನ್ನು ನೀಡಿದ್ದರು. ಇದರಿಂದ ಸಹಜವಾಗಿಯೇ ವೀರಶೈವ ಜನಾಂಗಕ್ಕೆ ನೋವುಂಟಾಗಿತ್ತು. ಆಗ್ಗೆ ಪೂಜ್ಯರ ವಾದದಿಂದ ಶಾಸ್ತ್ರಾಧಾರಗಳಿಂದಲೂ ವ್ಯಾಜ್ಯವು ಪರಿಹಾರವಾಗಿತ್ತೆಂದು ತಿಳಿಯುತ್ತದೆ.[೨]

೧. ವಿರೂಪಾಕ್ಷ ಸ್ವಾಮಿ. ಮುಧೋಳ–ಗವಿದೀಪ್ತಿ ಪು ೨೪, ೧೯೭೬

೨. ಡಾ॥ವೀರಣ್ಣ ರಾಜೂರು, "ಹಾಲಭಾವಿ ವೀರಭದ್ರಪ್ಪನವರು" ಪು–೩೮

ಜ.ಮರಿಶಾಂತವೀರ ಸ್ವಾಮಿಗಳು ಪಂಡಿತರಾಗಿದ್ದರು. ಧರ್ಮಶಾಸ್ತ್ರದಲ್ಲೂ ನಿಷ್ಠಾವಂತರಾಗಿದ್ದರು. ವೀರಶೈವ ಧರ್ಮದ ಸಮಾಜದಲ್ಲಿ ಉಂಟಾಗಿದ್ದ ಗುರು-ವಿರಕ್ತರ ಕಲಹದ ಬಗ್ಗೆ ನೊಂದಿದ್ದರು. ಇದು ಅವರ ಅನುಕಂಪವನ್ನು ತಿಳಿಸುತ್ತದೆ. ಈ ರೀತಿ ಪೂಜ್ಯರು ಸುಮಾರು ೭೯ ವರ್ಷಕಾಲ ಜೀವಿಸಿ ಲೋಕೋಪಕಾರಮಾಡಿ ಮಠದಲ್ಲಿ ಶಿಕ್ಷಣ, ಧರ್ಮ, ಶಾಸ್ತ್ರ, ಸಂಗೀತ ಕೇಂದ್ರಗಳನ್ನು ಸ್ಥಾಪಿಸಿ ಮಠದ ಕೀರ್ತಿ ಹೆಚ್ಚಿಸಿದ್ದಾರೆ. ತಮ್ಮ ಅಂತ್ಯ ಕಾಲಕ್ಕೆ ತಮ್ಮ ವಂಶಜರಾದ ಶಿವಶಾಂತವೀರ ಸ್ವಾಮಿಗಳಿಗೆ ೧೭ನೇ ಪೀಠಾಧಿಪತಿಗಳೆಂದು ನಿಯಮಿಸಿ ಅಧಿಕಾರ ನೀಡಿದರು. ದಿನಾಂಕ : ೦೧-೦೭-೧೯೬೭ ರಂದು ಲಿಂಗೈಕ್ಯರಾದರು. ಇವರ ಗದ್ದುಗೆಯು ಕೊಪ್ಪಳ ಮಠದಲ್ಲಿದ್ದು ಇಂದಿಗೂ ಪೂಜೆಗೊಳ್ಳುತ್ತದೆ. ಜಾಗೃತ ಸ್ಥಾನವೆಂದು ಭಕ್ತಜನರು ನಂಬಿದ್ದಾರೆ.

ಜ. ಶಿವಶಾಂತವೀರ ಸ್ವಾಮಿಗಳು ೧೭ನೇ ಪೀಠಾಧಿಪತಿಗಳೆಂದು ಅಧಿಕಾರ ವಹಿಸಿಕೊಂಡರು. ಶಾಲಾ ಶಿಕ್ಷಕರಾಗಿ ಚಿಕ್ಕಮಕ್ಕಳಿಗೆ ಬೋಧನೆಮಾಡುತ್ತ ಗ್ರಾಮ ಜೀವನದಲ್ಲಿ ಕಾಯಕ ಮಾಡುತ್ತಿದ್ದವರು. ಜಗದ್ಗುರು ಸ್ಥಾನಕ್ಕೇರಿದ ಮಹಾಮಹಿಮರು. ನಾಡಿಗೆ, ನಾಡಿನ ಜನತೆಗೆ ಕಲ್ಯಾಣ ಬಯಸುತ್ತ ಮಠದ ಪರಂಪರೆ, ಸಂಸ್ಕೃತಿಯನ್ನು ನಿಷ್ಠೆಯಿಂದ ಕಾಪಾಡಿದವರು.

ಇದಕ್ಕೂ ಪೂರ್ವದಲ್ಲಿ ರೋಣ ತಾಲೂಕಿನ ಸೂಡಿಯ ಜುಕ್ತಿ ಹಿರೇಮಠದ ಪಟ್ಟಾಧ್ಯಕ್ಷರಾಗಿದ್ದರು. ಪೂರ್ವಾಶ್ರಮದ ಹೆಸರು ಉಮಾಪತಯ್ಯ. ಸೂಡಿಯಲ್ಲಿ ಪ್ರಸಿದ್ಧ ಜ್ಯೋತಿಷಿಗಳಾಗಿದ್ದ ಜಕ್ತಿಹಿರೇಮಠ ಮನೆತನದ ಜಗದೀಶಯ್ಯ ಮತ್ತು ಬಸಮ್ಮನವರ ಜೇಷ್ಠಪುತ್ರರಾಗಿ ದಿನಾಂಕ : ೦೭-೦೫-೧೯೩೧ ರಲ್ಲಿ ಜನಿಸಿದ ಇವರು ಮುಂದೆ ದೊಡ್ಡಮಠದ ಸ್ವಾಮಿಗಳಾಗುತ್ತಾರೆಂದು ಜನ್ಮ ಕುಂಡಲಿಯಿಂದ ತಿಳಿದಿದ್ದರು. ಪ್ರಾರಂಭಿಕ ಅಭ್ಯಾಸವು ಕೊಪ್ಪಳ ಗವಿಮಠದಿಂದ ಪ್ರಾರಂಭವಾಯಿತು. (೧೬ನೇ ಪೀಠಾಧಿಪತಿಗಳ ಸಂಬಂಧಿಗಳಾಗಿದ್ದರಿಂದ) ನಂತರ ಸೂಡಿಯಲ್ಲಿ ತಾಯಿಯ ತವರೂರಾದ ಚಳಗೇರಿಯಲ್ಲೂ ಪ್ರಾಥಮಿಕ ಶಿಕ್ಷಣ ಪಡೆದರು. ತಮ್ಮ ಮನೆತನದ ದಿವ್ಯ ಚಾರಿತ್ರ್ಯ, ಸರಳಜೀವನ ಅದರಲ್ಲಿ ಸಂಪೂರ್ಣ ನೆಲೆಗೊಂಡಿದ್ದವು.

ಕೆಂಪಗಿನ ಗೌರವ ವರ್ಣ, ಮುದ್ದಾದ ಮುಖದ ಉಮಾಪತಯ್ಯನನ್ನು ಸಂಪೂರ್ಣ ವಾತ್ಸಲ್ಯದಿಂದ ಬೆಳೆಸಲು ಬಯಸಿದ ತಾಯಿ ಬಸಮ್ಮನವರು ಆತನ ಐದನೇ ವರ್ಷದಲ್ಲಿಯೇ ಶಿವಾಧೀನರಾದರು. ಊರಿನ ಹಿರಿಯರು ಜಗದೀಶಯ್ಯನವರಿಗೆ ಎರಡನೇ ಮದುವೆಮಾಡಿ, ಮಲತಾಯಿ ಸಾವಿತ್ರಮ್ಮ ಅವರಿಗೆ ಉಮಾಪತಯ್ಯನ ಯೋಗ್ಯಕ್ಷೇಮ ಒಪ್ಪಿಸಿದರು. ಸಾವಿತ್ರಮ್ಮ ಹಾಗೂ ಬಸಮ್ಮ ಸ್ವಂತ ಸಹೊದರಿಯರಾಗಿದ್ದರಿಂದ ಸಹಜವಾಗಿಯೇ ತಾಯಿವಾತ್ಸಲ್ಯವು ಬೆಳೆದು ಬಂತು. ನಂತರ ಶಿಕ್ಷಣ, ಗವಿಮಠದಲ್ಲಿ ನಡೆಯಿತು.

ವೈದಿಕ, ಕನ್ನಡ ಸಾಹಿತ್ಯ, ಸಂಸ್ಕೃತ ಹಾಗೂ ಮಠದ ಪರಂಪರಾಗತವಾಗಿ ಬಂದ ಆಯುರ್ವೇದ ಅಭ್ಯಾಸದಲ್ಲಿ ಒಳ್ಳೇ ತರಬೇತಿ ಪಡೆದರು ತಮ್ಮ ೧೫ ನೇ ವಯಸ್ಸಿನಲ್ಲಿ ಆಗಿನ ಮುಲ್ಕೀ ಪರಿಕ್ಷೆಯನ್ನು (ಧಾರವಾಡ ಜಿಲ್ಲೆಯಲ್ಲಿ ೭ನೇ ತರಗತಿ ಪಬ್ಲಿಕ್ ಪರೀಕ್ಷೆಗೆ ಮುಲ್ಕೀ ಅನ್ನುತ್ತಿದ್ದರು) ೧೯೪೬ ರಲ್ಲಿ ಶಾಲೆಗೆ ಪ್ರಥಮಸ್ಥಾನದಲ್ಲಿ ಉತ್ತೀರ್ಣರಾಗಿದ್ದರು. ನಂತರ ಎರಡು ವರ್ಷ ೧೯೪೭-೪೮ ರಲ್ಲಿ ಗದುಗಿನಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿಯನ್ನು ಉತ್ತಮ ದರ್ಜೆಯಲ್ಲಿ ಪಾಸಾಗಿದ್ದರಂತೆ ೧೯೫೧ ರಲ್ಲಿ ಹಿಂದಿನ ಪೀಠಾಧಿಪತಿಗಳಾಗಿದ್ದ ಜ. ಮರಿಶಾಂತವೀರ ಸ್ವಾಮಿಗಳು ಕೊಪ್ಪಳದಲ್ಲಿ ಪ್ರಾಥಮಿಕ ಶಾಲೆ ಪ್ರಾರಂಭಿಸಿದ್ದರು. ಅಲ್ಲಿ ಉಮಾಪತಯ್ಯನವರನ್ನೂ ಶಿಕ್ಷಕರೆಂದು ನೇಮಿಸಿದರು. ೧೯೫೮ ರಲ್ಲಿ ಪೂಜ್ಯ ಮರಿಶಾಂತವೀರ ಸ್ವಾಮಿಗಳು ವೃದ್ಧಾಪ್ಯದಿಂದ ತಮ್ಮ ಉತ್ತರಾಧಿಕಾರಿಗಳನ್ನು ಹುಡುಕಾಡಿದರು. ಆಗ್ಗೆ ಕೊಪ್ಪಳದ ಪ್ರಮುಖರಾಗಿದ್ದ ಮುದಗಲ್ ಸಂಗಪ್ಪನವರು ಬಳ್ಳೊಳ್ಳಿ ವೀರಬಸಪ್ಪ, ನಿಡಶೇಶಿ ಅವರು ದಿವಟರ ಬಸಪ್ಪ ಹಾಗೂ ಕವಲೂರ ಓಣಿಯ ಪ್ರಮುಖರನ್ನು, ಸದ್ಭಕ್ತರನ್ನು ಕರೆಯಿಸಿ ವಿಚಾರ ವಿನಿಮಯ ಮಾಡಿದರು ಚುರುಕು ಬುದ್ಧಿಯ, ಮೇರು ಲಿಂಗಾನಿಷ್ಠಾರಾದ ತಮ್ಮ ಪೂರ್ವಾಶ್ರಮದ ಹಿನ್ನಲೆ ಅರಿತ ಉಮಾಪತಯ್ಯ ಮಾಸ್ತರರನ್ನೇ ತಮ್ಮ ಉತ್ತರಾಧಿಕಾರಿಯಾಗಿ ನೇಮಿಸಬಹುದು ಎಂದು ಒಮ್ಮತ ಸೂಚಿಸಿದರು ಆ ಪ್ರಕಾರ ಅನಿವಾರ್ಯವಾಗಿ ಪೂಜ್ಯರ ಅಪ್ಪಣೆಯನ್ನು ಒಪ್ಪಿಕೊಂಡು ಶಿಕ್ಷಕ ನೌಕರಿಗೆ ರಾಜೀನಾಮೆ ನೀಡಿ ೧೯೫೮ ರಲ್ಲಿ ಗವಿಮಠದಲ್ಲಿ ೧೭ ನೇ ಪೀಠಾಧಿಪತಿಗಳೆಂದು ನೇಮಕವಾಗಿ ಮಠದ ಜವಾಬ್ದಾರಿ ವಹಿಸಿಕೊಂಡರು ಕೆಲವೇ ವರ್ಷಗಳಲ್ಲಿ ಮಠ ಎಲ್ಲಾ ಕೆಲಸಗಳನ್ನು ಇವರೇ ಮಾಡುತ್ತ, ಗುರುಗಳ ಸೇವೆಮಾಡಹತ್ತಿದರು ಅನಾರೋಗ್ಯದಿಂದ ೧-೭-೧೯೬೭ ರಂದು ಪೂಜ್ಯ ಮರಿಶಾಂತ ವೀರ ಸ್ವಾಮಿಗಳು ಲಿಂಗೈಕ್ಯರಾದರು.

---

ಆಧಾರ-'ಗವಿದೀಪ್ತಿ' -ಗವಿ ಬಳಗ ಕೊಪ್ಪಳ ಪ್ರಕಾಶಿತ, ಲೇ. ಎಚ್.ಎಸ್.ಪಾಟೀಲ 'ಗವಿಮಠದ ಪರಂಪರೆ'-೧೯೭೬

**ಇವರ ಘನ ಕಾರ್ಯಗಳು:-** ಪೀಠಾಧಿಪತಿಗಳಾಗಿದ್ದುಕೊಂಡು ಜನಪರ ಕಾರ್ಯಗಳನ್ನು ಸಾಕಷ್ಟು ಪ್ರಾಮಾಣದಲ್ಲಿ ಮಾಡಿದ ಪೂಜ್ಯರು, ೧೯೬೬ ರಿಂದಲೇ ಗವಿಮಠದಲ್ಲಿ ತಮ್ಮೊಡನೆ ಅಧ್ಯಯನ ಮಾಡಿದ ಸ್ವಾಮಿಗಳು ಪಟ್ಟದ ದೇವರು ಮಠದಲ್ಲಿ ಓದಿದ ಹಳೇ ವಿದ್ಯಾರ್ಥಿ ಬಳಗ ಸೇರಿಸಿ ಗವಿಸಿದ್ಧೇಶ್ವರ ಕೃಪಾ ಪೋಷಿತ ಬಳಗ ಎಂದು ಹೆಸರಿಸಿದರು. ೧೯೬೭ ರ ಜನವರಿ ತಿಂಗಳಲ್ಲಿ ಜಾತ್ರಾ ಮಹೋತ್ಸವ ಕಾಲದಲ್ಲಿ ಒಳಗಾದ ಉದ್ಘಾಟನೆಯನ್ನು ಮುಂಡರಗಿಯ ಡಾ|| ಜ. ಅನ್ನದಾನೀಶ್ವರ ಮಹಾಸ್ವಾಮಿಗಳ ಅಮೃತ ಹಸ್ತದಿಂದ ಮಾಡಿಸಿದರು. ಈ ಬಳಗದ ಸಹಕಾರದಿಂದಲೇ ಪ್ರತಿವರ್ಷ ಜಾತ್ರಾ ಉತ್ಸವದ ಮರುದಿನ ಧಾರ್ಮಿಕ ಗೋಷ್ಠಿ ಸಾಂಸ್ಕೃತಿಕ ಕಾರ್ಯಕ್ರಮ ಏರ್ಪಡಿಸಿ ನಾಡಿನ ಅನೇಕ ವಿದ್ವಾಂಸರನ್ನು ಅಹ್ವಾನಿಸಿ ಉಪನ್ಯಾಸ ಕಾರ್ಯಕ್ರಮ ಏರ್ಪಡಿಸುತ್ತಾರೆ. ಈ ಬಳಗದ ವತಿಯಿಂದ ೧೯೯೩ ರ ನವ್ಹಂಬರ ೧೭,೧೮ ರಂದು ಜ.ಶಿವಶಾಂತವೀರ ಸ್ವಾಮಿಗಳ ಷಷ್ಠಬ್ದಿ ಪೂರ್ತಿ ಸಮಾರಂಭ ಮಾಡಿ "ಶಾಂತಪ್ರಭೆ" ಎಂಬ ಕಾರ್ಯ ಸಾಧನೆಯ ಅಭಿನಂದನಾ ಗ್ರಂಥವನ್ನು ಪ್ರಕಟಿಸಿದರು. ಮಠದಲ್ಲಿ ತಮ್ಮ ಗುರುಗಳ ಗದ್ದುಗೆ ಮೇಲೆ ಪಂಚಲೋಹದ ಕಳಸಾರೋಹಣ ಮಾಡಿಸಿದ್ದಾರೆ. ಬೆಟ್ಟದ ಮೇಲೆ ಕೈಲಾಸ ಮಂಟಪ ನಿರ್ಮಿಸಿ ಅದರ ಅಕ್ಕ ಪಕ್ಕ ಅನ್ನಪೂರ್ಣೇಶ್ವರಿ, ಗಣೇಶರ ಗುಡಿಗಳನ್ನು ನಿರ್ಮಿಸಿದ್ದಾರೆ. ಕತೃ ಗದ್ದುಗೆಯ ಹತ್ತಿರ ಶಿವಾನುಭವ ಮಂಟಪ ನಿರ್ಮಿಸಿ ಪ್ರತಿ ತಿಂಗಳೂ ಶಿವಾನುಭವಕಾರ್ಯಕ್ರಮವನ್ನು ಸೋಮವಾರ ಮಾಡುತ್ತಾರೆ. ವಿದ್ವಾಂಸರಿಂದ ಕಲೆ, ವಿಜ್ಞಾನ, ಸಂಗೀತ, ತತ್ವಶಾಸ್ತ್ರ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳ ಗೋಷ್ಠಿಗಳನ್ನೂ ನಡೆಸುತ್ತಾರೆ. ಸಾಕಷ್ಟು ಸಂಖ್ಯೆಯಲ್ಲಿ ಭಕ್ತ ಆಸಕ್ತರು ಸೇರುತ್ತಾರೆ. ಇದು ಇಪ್ಪತ್ತೈದು ವರ್ಷಗಳಿಂದ ನಡೆದು ಬಂದಿದೆ. ಧಾರ್ಮಿಕ ಕಾರ್ಯಕ್ರಮವಾದ ಹರಕೆ ತೇರು ಎಳೆಯುವುದನ್ನು ಹೊಸದಾಗಿ ಮಾಡಿದ್ದಾರೆ. ಭಕ್ತರು ಬೇಡಿಕೊಂಡು ತಮ್ಮ ಇಷ್ಟಾರ್ಥಗಳಿಗಾಗಿ ಹರಕೆ ತೇರು ಎಳೆಯುತ್ತಾರೆ. ಇದು ಪ್ರತೀ ಅಮವಾಸ್ಯೆಯ ದಿನ ಸಾಯಂಕಾಲ ಜರುಗುತ್ತದೆ. ಅಂದು ಸಣ್ಣ ಜಾತ್ರೆಯೋಪಾದಿಯಲ್ಲಿ ಜನರು ಸೇರುತ್ತಾರೆ. ಗವಿಮಠದ ಮೇಲೆ ಅಪಾರ ನಂಬಿಕೆಯಿದ್ದುದು ಇದರಿಂದ ತಿಳಿದು ಬರುತ್ತದೆ.

ಕರ್ತೃ ಗವಿಸಿದ್ಧೇಶ್ವರ ನಿತ್ಯ ಮಹಾಭಿಷೇಕದ ವ್ಯವಸ್ಥೆ ಮಾಡಿದ್ದರೆ ೩೬೫ ಜನರಿಂದ ಸಂಗ್ರಹಿಸಿದ ಹಣವನ್ನು ಬ್ಯಾಂಕಿನಲ್ಲಿಟ್ಟು ಅದರಿಂದ ಬರುವ ಬಡ್ಡಿ ಹಣ ದಿಂದ ನಿತ್ಯ ವರ್ಷವಿಡೀ ಪೂಜಾ ಜರುಗುತ್ತದೆ. ಗವಿಮಠದಲ್ಲಿ ಬಹಳ ಹಿಂದಿನ ಪೂಜ್ಯರು ನಿರ್ಮಿಸಿದ್ದ ಕರೆಯ ಹೂಳನ್ನು ತಗೆಯಿಸಿ ಲಕ್ಷಾಂತರ ಹಣ ಖರ್ಚುಮಾಡಿ ಕೆರೆಯ ವಿಸ್ತಾರಮಾಡಿ ಊರಿನ ಜನರಿಗೆ, ದನಕರುಗಳಿಗೆ ಉಪಯೋಗಕ್ಕಾಗಿ ಅವಕಾಶ ಮಾಡಿದರು. ಹಿಂದೆ ನೀರಿನ ಅಭಾವವಿತ್ತು. ಇಡೀ ಕೊಪ್ಪಳ ನಗರವೇ ಈ ಕೆರೆ ನಿರ್ಮಿಸಿದ್ದಕ್ಕೆ ಕೊಂಡಾಡಿದರು. ಪ್ರತಿವರ್ಷ ನೀರಿನ ಸಂಗ್ರಹ ಹೆಚ್ಚಿತು. ಇದು ಜನಪರ ಕಾಳಜಿಯನ್ನೂ ತೋರಿಸುತ್ತದೆ.

ಈ ಭಾಗದಲ್ಲಿಯೇ ಅತೀ ಸುಂದರ ಹಾಗೂ ಭೌವ್ಯವಾದ ತೇರನ್ನು ಭಕ್ತರ ಕಾಣಿಕೆಯಿಂದ ತೇಗಿನ ಕಟ್ಟಿಗೆಯಿಂದ ಮಾಡಿಸಿದ್ದಾರೆ. ಇದಕ್ಕೂ ಮೊದಲಿನ ತೇರನ್ನೂ ಲಿಂಗಸೂರಿನ ಬಡಿಗೇರು ಮಾಡಿದ್ದರು. ಜನಪದ ಡೊಳ್ಳಿನ ಹಾಡಿನಲ್ಲೂ ಈ ತೇರು ಮಾಡಿಸಿದ ಬಗ್ಗೆ ಜನರು ಹಾಡುತ್ತಿದ್ದಾರೆ (ಇದನ್ನು ಪ್ರತ್ಯೇಕ ಅಧ್ಯಾಯದಲ್ಲಿ ಉಲ್ಲೇಖಸಲಾಗಿದೆ) ತೇರಿನ ಬಹೃತ್ ಮನೆಯನ್ನು ಮಠದ ಹೆಬ್ಬಾಗಿಲಿನ ಪಕ್ಕದಲ್ಲಿಯೇ ನಿರ್ಮಿಸಿದ್ದಾರೆ.

ಕೊಪ್ಪಳ ನಗರದಲ್ಲಿ ಧಾರ್ಮಿಕ ಹಾಗೂ ಸಾಹಿತ್ತಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವದಕ್ಕೆ ಮದುವೆ, ಮುಂಜಿವೆ, ಸಮಾರಂಭಗಳು ನಡೆಯುವದಕ್ಕಾಗಿಯೇ ಭವ್ಯವಾದ ಕಲ್ಯಾಣಮಂಟಪವನ್ನು ಹೆಬ್ಬಾಗಿಲಿನ ಎಡಭಾಗದಲ್ಲಿ ಸುಸಜ್ಜಿತವಾಗಿ ಆಧುನಿಕವಾಗಿ ನಿರ್ಮಿಸಿದ್ದಾರೆ. ಇದೂ ಕೂಡಾ ಸಂಪೂರ್ಣ ಭಕ್ತರ ಕಾಣಿಕೆಯಿಂದ ಕೂಡಿದೆ. ಇದಕ್ಕೆ ಹೊಂದಿಕೊಂಡು ಸಾವಿರಾರು ಜನರು ಏಕ ಕಾಲಕ್ಕೆ ಭೋಜನ ಮಾಡಲು ಸುಸಜ್ಜಿತವಾಗಿ ಭವನವನ್ನು ನಿರ್ಮಿಸಿದ್ದಾರೆ. ನಿತ್ಯದ ಅನ್ನ ದಾಸೋಹದ ಮನೆಯೂ ಕೂಡ ಇದಕ್ಕೆ ಹೊಂದಿ ಇರುತ್ತದೆ.

ಮಠದಲ್ಲಿ ಉಚಿತ ಪ್ರಸಾದ ನಿಲಯದಲ್ಲಿದ್ದು ಓದುವ ವಿದ್ಯಾರ್ಥಿಗಳಿಗೆ ವಾಸಕ್ಕಾಗಿ ಹಳೆಯ ಕೊಠಡಿಗಳ ಮೇಲೆ ಸುಮಾರು ಐವತ್ತು ಕೊಠಡಿಗಳನ್ನು ಸ್ವಾಮಿಗಳು ನಿರ್ಮಿಸಿದ್ದಾರೆ. ಈಗ ಸಾವಿರಾರು ವಿದ್ಯಾರ್ಥಿಗಳು ಪ್ರಾಥಮಿಕ ಹಂತದಿಂದ ಕಾಲೇಜು ಹಂತದವರೆಗೆ ಅವಕಾಶವನ್ನು ಜಾತಿ ಮತವನ್ನೇಣಿಸದೇ ಕಲ್ಪಿಸಿದ್ದಾರೆ. ಇಲ್ಲಿ ಸ್ವಾಮೀಜಿಯವರ ಶೈಕ್ಷಣಿಕ ಕಾಳಜೀಯನ್ನು ಗುರುತಿಸಬಹುದು.

**ಸಾಹಿತ್ಯ ಸೇವೆ :**

## ಸಾಹಿತ್ಯ ಸೇವೆ:

ಜ. ಶಿವಶಾಂತವೀರ ಮಹಾಸ್ವಾಮಿಗಳ ಸಾಹಿತ್ಯ ರಚನಾ ಕುರಿತು ಇಲ್ಲಿ ವಿವರಿಸಲಾಗಿದೆ. ಸ್ವಾಮೀಜಿ ಅವರು ಮಹಾ ಪಂಡಿತರು, ವೈದ್ಯರು, ಶಿಕ್ಷಣ ಪ್ರೇಮಿಗಳು ಹಾಗೂ ಆಧ್ಯಾತ್ಮಿಗಳಾಗಿದ್ದಂತೆ, ಕವಿಗಳೂ, ಲೇಖಕರೂ ಆಗಿದ್ದಾರೆ. ರಚಿಸಿದ ಕೃತಿಗಳು ಅಲ್ಪವಾಗಿದ್ದರೂ ಅತ್ಯಂತ ಅರ್ಥಪೂರ್ಣವಾಗಿವೆ. ಅನುಷ್ಠಾನ ಕಾಲಕ್ಕೆ ಆಗಾಗ್ಯೆ ಮೂಡಿಬಂದ ಪದ್ಯಗಳು ಮನನೀಯವಾಗಿವೆ.

ಪೂಜ್ಯರು ರಚಿಸಿದ ಗವಿಸಿದ್ಧೇಶ್ವರ ಸುಪ್ರಭಾತವು ಅತ್ಯುತ್ತಮ ಕೃತಿಯು. ನಕ್ಷತ್ರ ಮಾಲಿಕೆಯಂತೆ ೨೭ ಚೌಪದಿಗಳಲ್ಲಿ ಕತೃವಿನ ಲೀಲೇಗಳನ್ನು ಹಾಡಿ ೨೮ನೇ ನುಡಿಯಲ್ಲಿ ಗುರುಗಳಿಗೆಲ್ಲರಿಗೂ ಮಂಗಳ ಹಾಡಿದ್ದಾರೆ. ಜಂಗಮ ಶ್ರೇಷ್ಠನಾದ ಗವಿಸಿದ್ಧೇಶ್ವರನಲ್ಲಿ ತಮ್ಮ ತಾಪ–ಪಾಪ ಸಮುದಾಯವನ್ನು ನೀಗಿ, ಪೊರೆಯಲು ಪ್ರಾರ್ಥಿಸಿದ ಪೂಜ್ಯರು, ಬಾಗಿಬಂದ ಭಕ್ತರ ತೊಂದರೆಗಳನ್ನು ಮಹಾಸ್ವಾಮಿಗಳು ಕಳೆಯುತ್ತಾರೆಂಬ ಧೇಯವನ್ನು ಮುಂದಿಡುತ್ತಾರೆ. ಹಾಗೆಯೇ ಅದನ್ನು ಸಮರ್ಥಿಸುತ್ತಾರೆ.

ಸಕಲ ತಾಪವ ಕಳೆವ ಲಿಂಗಯೋಗಿಯು ನೀನು ।
ಅಕಳಂಕ ಜಗದೊಡೆಯನಾಗಿರುತಿರೆ ॥
ನಿಖಿಲವೇ ಜಡ ಜನರ ಮನಮಲಿನವನು ಕಳೆದು ॥
ಸಕಲ ನಿಷ್ಕಲ ಜಗವ ರಕ್ಷಿಸುವದು ॥ [೧]

ಶಿವಭಾವದ ಪೂಜ್ಯರು ಪರಮಗುರು ಗವಿಸಿದ್ಧೇಶ್ವರರ ಸುಪ್ರಭಾತವನ್ನು ಹಾಡುತ್ತ " ಎದ್ದೇಳು ಬೆಳಗಾಯಿತು " ಎನ್ನುವಲ್ಲಿ ಮೈ ಮರೆತು ಹೇಳುವಲ್ಲಿ ಪ್ರಥಮದಲ್ಲಿಯೇ ಸ್ಮರಿಸುತ್ತ

"ಕಾಲ ಕರ್ಮಗಳನ್ನು ಮೀರಿನಿಂತಿಹೆ ದೇವ ।
ಕೇಳು ನಿನಗೆಲ್ಲಹುದು ಅಸ್ತೋದಯ
ಬಾಲಭಾವದಿ ನಾನು ನುಡಿಯುತಿರುವೆ "

ಎಂದು ಎಚ್ಚರಿಕೆ ವಹಿಸಿದ್ದಾರೆ.

---

೧) ಗವಿಸಿದ್ಧೇಶ್ವರ ಸುಪ್ರಭಾತ – ಜ. ಶಿವಶಾಂತವೀರಸ್ವಾಮಿಗಳು. ಪು–೦೧, ಪದ್ಯ ೨, ಳ.–೧೯೬೯



ಆತನು ಸದಾ ಜಾಗೃತನೇ. ಆತನಿಗೆ ವಸ್ತುತಃ ಅಸ್ತೋದಯಗಳೇ ಇಲ್ಲದಿರುವಾಗ ಬೆಳಗಾಗುವದೆಲ್ಲಿ? ಆತನನ್ನು ಎಬ್ಬಿಸುವದೆಲ್ಲ?ಎಂದು ಬಾಲಭಾವದಿಂದ ನಾನು ಭಕ್ತರ ಕಲ್ಯಾಣಕ್ಕೆ ಸ್ತುತಿಸುತ್ತಿದ್ದೇನೆಂದು ತಮ್ಮ ಭಾವವನ್ನು ಇಲ್ಲಿವ್ಯಕ್ತ ಪಡಿಸಿದ್ದಾರೆ.

"ನ-ಗುರುರೋರಧಿಕಂ" ಗುರುವಿಗಿಂತ ದೊಡ್ಡದು ಈ ಜಗದೊಳು ಯಾವುದೂ ಇಲ್ಲವೆಂದು ವೇದವೇ ಹೇಳುತ್ತಿರುವಾಗ, ನಿನ್ನ ಮಹಿಮೆಗಳನ್ನು ಪೊಗಳಲೆನ್ನಳವಲ್ಲ. ಮಹಿಮಾ ಪುರುಷ, ಮಂಗಳ ಮೂರ್ತಿ, ಜಂಗಮವರ್ಯ, ಶಕ್ತಿ-ವಿಶಿಷ್ಠಶಿವಲಿಂಗ, ಸಿದ್ಧರಧೀಶನಾದ ನಿನ್ನನ್ನು ಸ್ತುತಿಸುವದು ಸಾಧ್ಯವಿಲ್ಲವೆಂದು ಹೇಳುತ್ತ, ಪೂಜ್ಯರು ಗವಿಸಿದ್ಧೇಶನ ಸಾಕ್ಷಾತ್ಕಾರಕ್ಕೆ ಸಾಧನ ನಿರೂಪಿಸುತ್ತಾರೆ.

"ಮೇಲು ಕುಂಡಲಿ ಮಾಡಿ ಲಿಂಗಯೋಗದೊಳಾಡಿ
ಸಾಲು ಚಕ್ರಗಳಲ್ಲಿ ಸುಳಿದಾಡುತ" - - - -

ಲಿಂಗಾಂಗ ಯೋಗವನ್ನು ಸಾಧಿಸಿದವರು ಮಾತ್ರ ನಿನ್ನ ದರ್ಶನವ ಪಡೆಯಬಲ್ಲರು. ನಿನ್ನ ಸಾಕ್ಷಾತ್ಕಾರ ಮಾಡಿಕೊಳ್ಳಬಲ್ಲರೆಂಬುದನ್ನು ಸೂಚ್ಯವಾಗಿ ಹಾಡಿದ್ದಾರೆ.

ಸ್ವಾಮೀಜಿಯವರಲ್ಲಿ ಸಹಜವಾದ ಪ್ರಾತಃಕಾಲದ ಪರಿಸರವನ್ನು ಅದೆಷ್ಟು ರಮ್ಯವಾಗಿ ಚಿತ್ರಿಸಿದ್ದನ್ನು ನಾವು ನೋಡಬಹುದು.

"ಎಡಬಲದ ಮರಗಳಲಿ ವಾಸಗೈಯುತಲಿರುವ ।
ಕಡುಜಾಣ ಪಕ್ಷಿಗಳು ಗಡನೇಳುತ ।
ಕೊಡು ಎಮಗೆ ದರ್ಶನವ ಎನುತ ದನಿ ಗೈಯ್ಯುತಿವೆ ।। "
"ಅಳಿಕುಲವು ಕೋಗಿಲೆಯು ತಿಳಿಗೊಳದ ಹಂಸಗಳು ।
ಗಿಳಿ ಗುಬ್ಬಿ ಕಾಗಿ ಬಲು ಖೇಚರಿಗಳು ।
ಬಿಳಿವಿಡಿದು ಬೆಳಗಿನೊಳು ಹಾರಲನುವಾಗಿಹವು ।।"[೧]

---

೧. 'ಗವಿಸಿದ್ಧೇಶ್ವರ ಸುಪ್ರಭಾತ' - ಜ.ಶಿವಶಾಂತವೀರ ಮಹಾಸ್ವಾಮಿಗಳು. ಪದ್ಯ-೮-೧೯೬೯.

ಸುಪ್ರಭಾತದ ಸೊಬಗು ಅದೆಷ್ಟು ಸುಂದರ ! ಎಷ್ಟು ಸಹಜ ವಾಗಿದೆ. ಗವಿಮಠದ ಪರಿವಾರದ ಕರ್ತವ್ಯವನ್ನು ಸಹ ಉಚ್ಚರಿಸಿದ್ದಾರೆ. ಸ್ವಾಮಿಗಳ ಸಾಧನೆಯನ್ನು ಸೂಚಿಸಿದ್ದಾರೆ.

ಈಗ ಮರಿಗಳು ಮಠದಿ ಮಂತ್ರವ ಪಠಿಸುತಲಿಹರು ।
ಶ್ರೀ ಗುರುವೆ ಭವರೋಗ ನೀಗೆನುತಲಿ ।
ಬೇಗ ನಿದ್ರೆಯನೀಗಿ ಛಾತ್ರಗಣ ಓದುವದು ।[೧]

ವೇಳೆಯಿದು ಉತ್ತಮವು ದೇವನೊಲಿವುದುಕೆಂದು ಕೋಳಿ ಕೂಗದ ಮುನ್ನ ತಾವೇಳಬೇಕೆಂದು ನಿರೂಪಿಸುತ್ತಾರೆ. ಮತ್ತು ಈ ರೀತಿ ಅರ್ಥವನ್ನು ಮಾಡುತ್ತಾರೆ--- ಸಾಧಕರಾದ ಮರಿಗಳು ಪ್ರಾತಃ ಪಠಣ ಮಾಡಬೇಕು. ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕು. ಸ್ವಾಮಿಗಳು ಶಿವಪೂಜೆ ಮಾಡಬೇಕು. " ಮಹಾನುಭಾವಿ ಬಸವಣ್ಣನವರು – ಸುಪ್ರಭಾತ ಸಮಯದಲಿ ಅರ್ಥಿಯಲಿ ಲಿಂಗವ ನೆನೆದರೆ ತಪ್ಪುವದು ಅಪಮೃತ್ಯು ಕಾಲಕರ್ಮಂಗಳು" ಎಂದು ಅಪ್ಪಣೆಮಾಡಿದ್ದನ್ನು ಸರ್ವರೂ ಸ್ಮರಿಸಬೇಕು. ಇದರಿಂದ ಭವರೋಗ ನೀಗುವದು ನಿಶ್ಚಿತವಾಗಿದೆ. ಈ ರೀತಿ ಕ್ರಮಬದ್ಧವಾದ ಉಪದೇಶವನ್ನು ನೀಡುತ್ತ ಗವಿಶಿದ್ಧೇಶನ ಲೀಲೆಗಳನ್ನು ಕೊಂಡಾಡಿದ್ದಾರೆ. ಬರವಣಿಗೆಯ ಕೃತಿಗಳು ವಿರಳವಾದರೂ, ಅವರ ಅನುಭವದಿಂದ ಕೂಡಿದ ಪದ್ಯಗಳು, ಮಂಗಳಾರತಿಗಳು ಮನನೀಯವಾಗಿವೆ.

ಗವಿಮಠಾಧೀಶರ ಸಪ್ತಕದಲ್ಲಿ ಎಲ್ಲಾ ಗುರುಗಳನ್ನು ನುತಿಸಿದ್ದಾರೆ. ಅನುಷ್ಟುಪ್ ಛಂದಸ್ಸಿನಲ್ಲಿ ಸಪ್ತಕ ಸುಂದವಾಗಿದೆ. ಪುಣ್ಯ ಪುರುಷರಾಗಿ ಜನ್ಮತಾಳಿ ಬಾಲ್ಯದಿಂದಲೂ ವೈರಾಗ್ಯ ಶೀಲರಾದ ಶ್ರೀಗಳು ವಯಸ್ಸಿಗೆ ಬಂದಾಗ ಸಂಸಾರ ಹೇಯವು ಎಂಬುದು ಸಹಜವಾಗಿ ಬಂದಿದೆ. ಸಂಸಾರಿಕ ಜೀವನ ಕಂಡು ತಮ್ಮ ಮನಸ್ಸಿಗೆ ತಾವೇ ಹೇಳಿಕೊಳ್ಳುವ ರೀತಿ ಮನೋಹರವಾಗಿದೆ.

---

೧) 'ಗವಿಸಿದ್ಧೇಶ್ವರ ಸುಪ್ರಭಾತ' – ಜ.ಶಿವಶಾಂತವೀರ ಮಹಾಸ್ವಾಮಿಗಳು. ಪದ್ಯ–೧೨–೧೯೬೯.

ಏನುವಿಚಿತ್ರವಿದು ಸಂಸಾರ? ಮನವೆ ।

ತಿಳಿದರೆ ಇದು ಬಹು ನಿಸ್ಸಾರ ॥

ಸತಿಪತಿಗಳು ನಿತ್ಯ ಕೂಡ್ತಾರಾ ।

ಎತ್ತಿ ಎತ್ತಿ ಮಗನ ಮುದ್ದಾಡ್ತಾರಾ ।

ಮತ್ತೆ ಮೋಹಕೆ ಬಿದ್ದು ತಾವು ಮರೀತಾರಾ ।

ಏನು ವಿಚಿತ್ರವಿದು ?

ಬಂಧು ಬಾಂಧವರೆಲ್ಲ ಬರತಾರ ।

ಬಂದು ಒಂದೇ ದಿನ ದುಃಖ ಮಾಡ್ತಾರ ।

ಬಂದ ದಾರೀಲೆ ಮರಳಿ ಹೋಗ್ತಾರ ।

ಮಂದ ಮತಿಗಳು ಸ್ಥಿರವೆಂದು ನಂಬ್ಯಾರ ॥

ಶ್ರೀ ಗವಿಶಿದ್ಧೇಶ್ವರ ಸುಯೋಗಿಯ ನಂಬಿ।

ವಿರಾಗದಿ ಇಹಪರ ಸಾಧಿಸುವರು ।।ಪ।।

ಹಾಗೇ ದೇವರಲ್ಲಿ ನಂಬಿಗೆ ಇರಿಸಿ ವಿರಾಗದಿಂದ ಬಾಳಿದರೆ, ಪರಮುಕ್ತಿ ದೊರಕುತ್ತದೆ. "ವಿರಾಗದಿ" ಪದಪ್ರಯೋಗ ಅರ್ಥಪೂರ್ಣವಾಗಿದೆ.

ಸಂಸಾರ ಎಂಬುದನ್ನು ಒಳಮನಸ್ಸಿನಲ್ಲಿ ಆಳವಾಗಿ ವಿಚಾರಿಸಿ ಸಂಪೂರ್ಣವಾಗಿ ಅದರಿಂದ ದೂರ ನಿಂತು ಪಟ್ಟಾಧಿಕಾರಿಗಳಾಗಿ ನಂತರ ನಿರಂಜನ ಮೂರ್ತಿಗಳಾಗಿ ಹೇಳುವ ಸ್ತುತಿ ಪದ್ಯಗಳು ಮನೋಜ್ಞವಾಗಿವೆ. ಮತ್ತು ಬೋಧಪ್ರದವಾಗಿರುವದನ್ನು ನಾವು ಕಾಣಬಹುದು.

ಶಿವಾಯ ನಮಃ ಎಂಬೈದಕ್ಷರಗಳು

ರಸನೆಯೊಳಿರಬೇಕು ।

ಶಿವನೆ ಚರಕಾರ ಜಗವೆಂಬ ಭಾವವು

ಒಲಿಯುತ ಬರಬೇಕು ।

ಎಂದು ಪಂಚಕಗಳನ್ನು ನುತಿಸುವಲ್ಲಿ ಅಷ್ಟಾವರಣ, ಪಂಚಾಚಾರ ತತ್ವವನ್ನು ತಿಳಿಸಿದ್ದಾರೆ. ಜ್ಞಾನ ಕರ್ಮ ಸಮಸಮುಚ್ಚವನ್ನು ಸೂಚಿಸಿ ಷಟಸ್ಥಲಾಚರಣೆಯನ್ನು ನಿರೂಪಿಸುತ್ತಾರೆ.

ಕಾಲಕಾಲನೇ ಕರದ ಲಿಂಗವೆಂಬ ನಿಶ್ಚಯವಿರಬೇಕು ಎಂದು ಲಿಂಗಾಚಾರವನ್ನು ಹೇಳಿ ಲಿಂಗನಿಷ್ಠೆಯನ್ನು ಬೆಳೆಸುವಂತೆ ಬೋಧಿಸಿ ಪ್ರಾಣಲಿಂಗ ಭಾವಲಿಂಗಗಳ ಸಾಧನೆಯನ್ನು ತಿಳಿಸಿದ್ದಾರೆ.

"ದೇವಬಂದಾನ ನಮ್ಮ ಸ್ವಾಮಿ ಬಂದಾನ" ಎನ್ನುವ ಪದ್ಯದಿಂದ ಭಕ್ತರ ಭಕ್ತಿಯ ಯೋಗಕೆ ಒಲಿದು ಮುಕ್ತಿಯಮಾರ್ಗವ ತೋರಬಂದಾನು। ಎಂಬ ತತ್ವವನ್ನು ತಿಳಿಯ ಪಡಿಸುತ್ತಾರೆ. ಗುರುಭಕ್ತರ ಸಂಬಂಧ ಇಲ್ಲಿ ವೇದ್ಯವಾಗುತ್ತದೆ. ಗುರುಗಳು ಬರುವದು ಭಕ್ತರ ಉದ್ಧಾರಕ್ಕೆ, ಭಕ್ತಿ ಇದ್ದಲ್ಲಿ ಗುರುಕೃಪೆಯಾಗುತ್ತದೆ. ಮುಕ್ತಿಪಥವನ್ನು ತೋರಿಸುವದೇ ಗುರುವಿನ ಕರ್ತವ್ಯವೆಂಬುದನ್ನು ತೋರಿಸುತ್ತಾರೆ.

ಸಂಸಾರದಲ್ಲಿದ್ದು ಭಗವದ್ಗೀತೆಯ ಸಂದೇಶದಂತೆ ಕರ್ಮಫಲದ ಬಗೆಗೆ ಆಶಿಸದೆ ಕರ್ತವ್ಯ ಪರಾಯಣನಾಗಬೇಕು. ಆದರೆ ಶರಣರು ಪೂಜಿಸಿದ ಫಲ ಕೈಯ್ಯಮೇಲೆಂದು ಪ್ರತಿಪಾದಿಸಿದ್ದನ್ನು ಗಮನಿಸಿದಾಗ ನಂಬಿಕೆಯುಳ್ಳ ಭಕ್ತ ತಾನಿರುವಾಗಲೆ ತನ್ನ ನಂಬಿಗೆಯ ಪ್ರತಿಫಲವನ್ನು ಅವಶ್ಯ ಪಡೆಯುತ್ತಾನೆ. ಶ್ರೀಗಳು ಅದನ್ನು ಹೇಗೆ ನಂಬಬೇಕೆಂಬುದನ್ನು ಸಹ ತಿಳಿಸುತ್ತಾರೆ.

**ತನು-ಮನ ಭಾವದ ಚಿನುಮಯ ಲಿಂಗವ ಮನುಜಪದೊಡನನುದಿನ ನೆನೆನೆನೆದು।**

ತನುಮನು-ಭಾವಗಳಿಗೆ ಸಂಬಂಧವಾದ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳನ್ನು ನಂಬಬೇಕು. ಅವು ಹೊರಗಿನವುಗಳಲ್ಲ. ಶಿರದ ಮನೆಯೊಳಗಿರುವ ಚೈತನ್ಯವೇ ಇಷ್ಟ-ಪ್ರಾಣ-ಭಾವಲಿಂಗಗಳು, ಅರುಹಿನ ಕುರುಹೇ ಇಷ್ಟಲಿಂಗ, ಅದಕ್ಕಾಗಿ ಲಿಂಗವನ್ನು ನಂಬಿ ಗುರುಪೇಳಿದ ಮಂತ್ರದ ಧ್ಯಾನವನ್ನು ಅಥವಾ ಜಪಾನುಷ್ಠಾನವನ್ನು ಶ್ರದ್ಧೆಯಿಂದ ಕೈಕೊಂಡರೆ ಸದ್ಗುರು ಅವಶ್ಯವಾಗಿ ರಕ್ಷಿಸುತ್ತಾನೆ. ಅಲ್ಲದೆ ತಾನೇ ಲಿಂಗವಾಗುತ್ತಾನೆ, ಮಂತ್ರಸ್ವರೂಪವೇ ಆಗುತ್ತಾನೆ.

ಇದು ಅಲ್ಲದೆ ಪೂಜ್ಯರು ರಚಿಸಿದ ಮಂಗಳಾರತಿ ಪದಗಳಲ್ಲಿಯೂ ಸಹ ತತ್ವವನ್ನು ಅನುಭವವನ್ನು ತುಂಬಿರಿಸಿದ್ದಾರೆ.

ಕುಂಬದಾರತಿ ಬೆಳಗುವೆ ಸಾಂಬಗೆ ।

ಮಹಾಲಿಂಗ ಸುಗುರು ಚರವರಗೆ ॥

ಇಲ್ಲಿ ವೀರಶೈವರಿಗೆ ಪೂಜ್ಯರೆನಿಸಿದ ಗುರುಲಿಂಗ ಜಂಗಮಕ್ಕೆ ಮಂಗಲಗೈದಿದ್ದಾರೆ. ಅವರ ಕರ್ತವ್ಯವೇನೆಂಬುದನ್ನು ಪ್ರತಿಪಾದಿಸಿದ್ದಾರೆ. ಗುರು ಶಿಷ್ಯನ ಮಸ್ತಕದಲ್ಲಿಯ ವಸ್ತುವನ್ನು ಹಸ್ತತಲಕ್ಕೆ ತಂದುಕೊಡುತ್ತಾನೆ. ಅದುವೇ ಇಷ್ಟಲಿಂಗ ಅದನ್ನು ಮೂಲಾಧಾರ ಚಕ್ರದಿಂದ ಪಶ್ಚಿಮ ಶಿಖಾಚಕ್ರದವರೆಗೆ ಅಂದರೆ ಆರ್ಧಾಚಕ್ರದಲ್ಲಿಯ ಆ ಚರಲಿಂಗವನ್ನು ಮೊದಲು ಮಾಡಿ, ಭಾವಲಿಂಗದ ಅನುಸಂಧಾನವನ್ನು ನಿವೃತ್ತಿ ಕ್ರಮದಲ್ಲಿ ಮಾಡಬೇಕೆಂಬ ಬಗೆಯನ್ನು ವಿವರಿಸಿದ್ದಾರೆ. ಮುಖಜಂಗಮವೆಂಬುದನ್ನರಿತು ಪರಮಗುರು ಮರಿಶಾಂತರಲ್ಲಿ ತನುಮನಧನಗಳನ್ನು ಸಮರ್ಪಿಸಿ ದಾಸೋಹಂ ಭಾವಿಯಾಗುವ ಭಾವ ವ್ಯಕ್ತವಾಗುತ್ತದೆ.

<u>ಜ. ಶಿವಶಾಂತವೀರ ಸ್ವಾಮಿಗಳ ಘನ ಸಂಕಲ್ಪಗಳು</u>

ಜನಸಾಮಾನ್ಯರಿಗೆ ಬಹು ಆಶೆಗಳಿರುವಂತೆ ಶಿವಯೋಗಿಗಳಿಗೆ ಸಂಕಲ್ಪಗಳಿರುತ್ತವೆ. ಪೂಜ್ಯರ ಸಂಕಲ್ಪಗಳು ವ್ಯೆಯಕ್ತಿಕವಾಗಿರದೇ ಸಮಸ್ತ ಜೀವರಾಶಿಯ ಸರ್ವಾಂಗೀಣ ಅಭಿವೃದ್ಧಿಯ ಆಶಯವನ್ನು ಹೊಂದಿರುತ್ತದೆ. ಸಕಲ ಚರಾಚರ ಜೀವಿಗಳು ಶಿವನ ಈ ನೆಲೆಯಲ್ಲಿ ಸುಖ-ಶಾಂತಿ ಹಾಗೂ ಸಮೃದ್ಧ ಬಾಳನ್ನು ಬೆಳಗಬೇಕೆಂದು ಅವರ ಸಂಕಲ್ಪವಾಗಿರುತ್ತದೆ. ಶಿವಶಾಂತವೀರ ಮಹಾಸ್ವಾಮಿಗಳು ತಮ್ಮ ಸಮಸ್ತ ಶಕ್ತಿಯನ್ನು ಸರ್ವರ ಒಳಿತಿಗಾಗಿ ಅರ್ಪಿಸಿಕೊಂಡಿರುವ ಅಪರೂಪದ ಶಕ್ತಿಯ ಕೇಂದ್ರವೇ ಇವರಾಗಿದ್ದರು ಎಂದು ತಿಳಿದುಬರುತ್ತದೆ.

ಗವಿಸಿದ್ದೇಶ್ವರರ ಗದ್ದುಗೆಯ ತ್ರಿಕಾಲ ಪೂಜೆಯು ನಿರಂತರವಾಗಿ ನೆರವೇರುವ ಉದ್ದೇಶದ ಸಂಕಲ್ಪವು ರುದ್ರಾಭಿಷೇಕದ ಸಂಕಲ್ಪ. ಇದಕ್ಕೆ ಸದ್ಭಕ್ತರು ೧೦೦/- ರೂ. ಬ್ಯಾಂಕಿನಲ್ಲಿಟ್ಟು ಆ ಠೇವಣಿಯಿಂದ ಬರುವ ಬಡ್ಡಿ ಹಣದಲ್ಲಿ ಪೂಜಾಕಾರ್ಯ ಜರುಗುವ ವ್ಯವಸ್ಥೆ ಇರುತ್ತದೆ.

ಕೆರೆಯ ಮಧ್ಯದಲ್ಲಿ ತಮ್ಮ ಗುರುಗಳಾದ ಜ.ಮರಿಶಾಂತವೀರ ಸ್ವಾಮಿಗಳ ಚಿಕ್ಕಮಂದಿರ ಕಟ್ಟಿಸಿ, ಕೆರೆಯ ನೀರಿನಲ್ಲಿ ತೆಪ್ಪೋತ್ಸವ ಮಾಡಿಸುವ ಯೋಜನೆಯಿಟ್ಟುಕೊಂಡಿದ್ದಾರೆ. ಮತ್ತು ಹೂಗಿಡ-ಮರ ಬಳ್ಳಿಯನ್ನು ಕೆರೆಯ ಸುತ್ತಲೂ ಬೆಳೆಸಿ, ಕಾರಂಜಿ ಹಾಕಿಸಿ ಸಾರ್ವಜನಿಕ ವಿಹಾರ ಧಾಮ ಮಾಡಿಸುವ, ಚಿಕ್ಕಮಕ್ಕಳಿಗೆ ಕೆರೆಯಲ್ಲಿ ಚಿಕ್ಕ ಬೋಟ ಇಟ್ಟು ವಿಹಾರಕ್ಕಾಗಿ ವ್ಯವಸ್ಥೆಯನ್ನು ಕೈಕೊಳ್ಳುವವರಿದ್ದರು. ಏಕಕಾಲಕ್ಕೆ ಸಾವಿರಾರು ಜನರು ಭೋಜನಕ್ಕೆ ಕೂಡ್ರುವ ಮಹಾಪ್ರಸಾದ ನಿಲಯವನ್ನು ಕಟ್ಟಿಸಿದ್ದಾರೆ. ಗವಿಮಠದ ಬಲಭಾಗದಲ್ಲಿರುವ ದನದ ಕೊಟ್ಟಿಗೆಯನ್ನು ನಿರ್ಮಿಸಿ, ನೂರಾರು ಗೋವುಗಳನ್ನು ಸಾಕಿದ್ದಾರೆ, ಪ್ರತಿದಿನ ಊಟದಲ್ಲಿ ಮಜ್ಜಿಗೆ ಮೊಸರು, ಸರ್ವರಿಗೂ ಪ್ರಸಾದ ಮಾಡುವದರಲ್ಲಿ ಉಪಯೋಗಿಸುತ್ತಾರೆ.

ಪ್ರಾಥಮಿಕ, ಪ್ರೌಢ ಹಾಗೂ ಕಾಲೇಜಿನ ವಿದ್ಯಾರ್ಥಿಗಳು ವಾಸವಾಗಿರಲು ವಸತಿ ಹಾಗೂ ಪ್ರಸಾದ ನಿಲಯದ ವ್ಯವಸ್ಥೆಯನ್ನು ದೊಡ್ಡಪ್ರಮಾಣಕ್ಕೆ ಏರಿಸಿ, ಸಾವಿರಾರು ವಿದ್ಯಾರ್ಥಿಗಳು ವಿದ್ಯಾಭ್ಯಾಸಮಾಡಲು ಮತ್ತು ಸಂಸ್ಕೃತ ಪಾಠಶಾಲೆ, ಜೋತಿಷ್ಯ, ವೈದಿಕ ಅಭ್ಯಾಸಿಗಳಿಗೂ ವ್ಯವಸ್ಥೆಯನ್ನು ವಿಸ್ತರಿಸಲಾಗಿದೆ.

ಕಲ್ಯಾಣ ಮಂಟಪವನ್ನು ನಿರ್ಮಿಸಿ ಅದರ ಎಡಭಾಗಕ್ಕೆ ಹಲವು ಸ್ನಾನಗೃಹಗಳು, ಶೌಚಾಲಗಳನ್ನು ಆಧುನಿಕ ರೀತಿಯಲ್ಲಿ ನಿರ್ಮಿಸಿದ್ದಾರೆ. ಭಕ್ತರಿಗೆ ಹೆಚ್ಚಿನ ಅನುಕೂಲವಾಗಲೆಂದು ಸ್ನಾನಗೃಹದ ವ್ಯವಸ್ಥೆ ಪೂಜಾಗೃಹಗಳನ್ನು ನಿರ್ಮಿಸಿದ್ದಾರೆ. ಆಧುನಿಕ ಸೌಲಭ್ಯಗಳುಳ್ಳ ಯಾತ್ರಿ ವಸತಿಗೃಹಗಳನ್ನು ಹಾಗೂ ವ್ಯಾಪಾರೀ ಮಳಿಗೆಗಳನ್ನು ಮಠದ ಹೊರಗೋಡೆಗೆ ಹೊಂದಿ ಕಟ್ಟಿಸಿದ್ದಾರೆ.

ಮಠದ ಮುಂಭಾಗದಲ್ಲಿ ಜಾತ್ರೆನಡೆಯುವ ಬಯಲಿಗೆ ಹೊಂದಿಕೊಂಡು ಗುಡ್ಡದ ಜಾಗೆಯಲ್ಲಿ ಈ ಭಾಗದ ಜನತೆಗೆ, ತಮ್ಮ ಗುರುಗಳ ಪರಂಪರೆಯನ್ನು ಮುಂದುವರೆಸುವದಕ್ಕಾಗಿ ಆಯುರ್ವೇದಿಕ ಚಿಕಿತ್ಸೆಗಾಗಿ ನೂರಾರು ಹಾಸಿಗೆಯ ಬೃಹತ್ ಆಸ್ಪತ್ರೆಯ ಕಟ್ಟಡಕ್ಕೆ ಅಸ್ತಿಭಾರ ಹಾಕಿದ್ದರು. ಈಗ ಆಯುರ್ವೇದ ಆಸ್ಪತ್ರೆಯು ಈ ಭಾಗದ ಜನರಿಗೆ ವರ ಪ್ರದವಾಗಿರುವದನ್ನು ನಾವು ನೋಡಬಹುದು.

ಗವಿಮಠವು ತನ್ನ ಆಯುರ್ವೇದ ಚಿಕಿತ್ಸೆಗೆ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದಿದೆ. ಅಂತೆಯೇ ಗವಿಸಿದ್ಧೇಶ್ವರರ ಕಾಲಕ್ಕೆ ಆಗಿನ ಹೈದ್ರಾಬಾದ ಮುಖ್ಯಮಂತ್ರಿ ಮೀರಅಲಂ ಖಾನ ಬಹದ್ದೂರ ಕುಷ್ಠರೋಗವನ್ನು ವಾಸಿಮಾಡಿದ್ದು. ಗುರು ಕೃಪೆಯೊಂದಿಗೆ ಈ ಆಯುರ್ವೇದ ಚಿಕಿತ್ಸೆಯೂ ಕಾರಣವೆಂದು ಉಲ್ಲೇಖಿಸಬಹುದು. ಈ ಪರಂಪರೆ ಇನ್ನೂ ಹೆಚ್ಚು ಅಭಿವೃದ್ಧಿಗೊಳ್ಳಬೇಕಾಗಿದೆ. ಈ ದೆಸೆಯಲ್ಲಿ ಈಗಿನ ೧೮ನೇ ಜಗದ್ಗುರುಗಳು ಬೃಹತ್ ಪ್ರಮಾಣದಲ್ಲಿ ಆಯುರ್ವೇದ ಕಾಲೇಜು, ಆಸ್ಪತ್ರೆಯನ್ನು ಬೆಳೆಸುತ್ತಿರುವದನ್ನು ಕಾಣಬಹುದು.

ಜ. ಶಿವಶಾಂತವೀರ ಮಹಾಸ್ವಾಮಿಗಳು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಇತರೆ ಮಠಗಳೊಂದಿಗೆ ಅನ್ಯೋನ್ಯತೆಯನ್ನು ಬೆಳೆಯಿಸಿಕೊಂಡಿದ್ದರು. ಆ ಮಠಗಳನ್ನು ಸಹ ಸೂವ್ಯವಸ್ಥೆಯಿಂದ ಬೆಳೆಯಲು ಒಳ್ಳೇ ಮಾರ್ಗದರ್ಶನ ನೀಡಿದ್ದರೆಂದು ತಿಳಿದು ಬರುತ್ತಿದೆ. ಆ ಮಠಗಳನ್ನು ಇಲ್ಲಿ ಹೆಸರಿಸಬಹುದು ಮಂಗಳೂರು, ಬೆದವಟ್ಟಿ, ಕುಷ್ಟಗಿ, ಸಂತೆಕಲ್ಲೂರು, ಹೆಬ್ಬಾಳು, ಬಳಗಾನೂರು, ಚಳಗೇರಿ, ಗಂಗಾವತಿಯ ಕಲ್ಮಠ, ಕಮತಗಿಮಠ, ಹೊಸಳ್ಳಿ ಬೂದಿಸ್ವಾಮಿಮಠ, ಹಾಲವಿ (ಆಂದ್ರಪ್ರದೇಶ), ಬಗನಾಳು, ಇತ್ಯಾದಿ. ಈ ಎಲ್ಲಾ ಮಠಗಳಿಗೆ ಅಧಿಕಾರ ಗುರುಗಳು ಆಗಿದ್ದರು ಎಂದು ಆಯಾ ಮಠದ ಸಧ್ಯದ ಸ್ವಾಮಿಗಳಿಂದ ಕ್ಷೇತ್ರ ಕಾರ್ಯದಲ್ಲಿ ತಿಳಿದು ಬಂದಿದೆ.

ಎಪ್ಪತ್ಮೂರು (೭೩) ವರ್ಷಗಳ ಜ. ಶಿವಶಾಂತವೀರ ಮಹಾಸ್ವಾಮಿಗಳು ತಮ್ಮ ಜೀವಿತದ ಕೊನೆಯವರೆಗೂ ಆರೋಗ್ಯ ಪೂರ್ಣವಾಗಿ, ಮುಖದಲ್ಲಿ ಒಳ್ಳೇ ಕಾಂತಿಯುತವಾಗಿ ಭಕ್ತಜನರ ಕಲ್ಯಾಣಕ್ಕೆ ತಮ್ಮನ್ನೇ ಅರ್ಪಿಸಿಕೊಂಡರು. ೨೦೦೨ ರಲ್ಲಿ ಹೆಚ್ಚು ಕಾರ್ಯ ಬಾಹುಲ್ಯದಿಂದಾಗಿ ಆರೋಗ್ಯದ ಮೇಲೆ ದುಷ್ಪರಿಣಾಮ ಆಗಿ ಆಸ್ಪತ್ರೆ ಸೇರಿದರು. ಅಲ್ಲಿಯೇ ವಿಚಾರ ಮಗ್ನರಾಗಿ ಇನ್ನೇನು ತಾವು ಬಹಳ ದಿನ ಬದುಕುವ ಭರವಸೆ ಇಲ್ಲವೆನಿಸಿ, ಭಕ್ತರನ್ನು ಕರೆಯಿಸಿ ಈಗಾಗಲೇ ತಾವು ಗುರುತಿಸಿದ್ದ ಮರಿದೇವರನ್ನು (ಪರ್ವತಯ್ಯ ಅವರನ್ನು) ಗವಿಮಠಕ್ಕೆ ಪೀಠಾಧ್ಯಕ್ಷರನ್ನಾಗಿ ಮಾಡಲು ತರಾತುರಿ ಅಪ್ಪಣೆ ನೀಡಿದರು. ಅದರಂತೆ ೧೩ ನೇ ಡಿಶಂಬರ್ ೨೦೦೨ ರಂದು ಗವಿಮಠದ ೧೮ ನೇ ಪೀಠಾಧ್ಯಕ್ಷರೆಂದು ಹಾಗೂ "ಗವಿಶಿದ್ದೇಶ್ವರರು" ಎಂದು ಪುನರ್ ನಾಮಕರಣ ಮಾಡಿದರು. ಮಠದ ಸಂಪೂರ್ಣ ಜವಾಬ್ದಾರಿಯನ್ನು ಹಸ್ತಾಂತರಿಸಿ ಪುನಃ ಆಸ್ಪತ್ರೆ ಸೇರಿದರು. ಅನಾರೋಗ್ಯವು ದಿನೇ ದಿನೇ ವಿಷಮವಾಗಿದ್ದರಿಂದ ೨೬/೦೩/೨೦೦೩ ರಂದು ಲಿಂಗೈಕ್ಯರಾದರು.

**೧೮ ನೇ ಪೀಠಾಧಿಪತಿಗಳಾದ "ಗವಿಶಿದ್ಧೇಶ್ವರರು"**

ತಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬಂತೆ; ಗುಲಬರ್ಗಾ ಜಿಲ್ಲೆಯ ಹಾಗರ ಗುಂಡಗಿ ಗ್ರಾಮದಿಂದ ಬಂದು ಮುಂಡರಗಿ ಮಠದಲ್ಲಿದ್ದು ಓದು ಮುಂದುವರೆಸಲು ಪ್ರಾಥಮಿಕ ಶಾಲಾ ಶಿಕ್ಷಣ ಮುಗಿಸಿ ತಮ್ಮ ಪಾಲಕರೊಂದಿಗೆ ಕೊಪ್ಪಳ ಮಾರ್ಗವಾಗಿ ಮುಂಡರಗಿಗೆ ಹೊರಟಾಗ, ಸಂಜೆ ಬಸ್ ತಪ್ಪಿ ಅನಿವಾರ್ಯವಾಗಿ ಕೊಪ್ಪಳ ಗವಿಮಠಕ್ಕೆ ಹೋಗಿ ಅಲ್ಲಿ ತಂಗಿದರು. ಮಹಾಸ್ವಾಮಿಗಳ ದರ್ಶನ ಪಡೆಯುತ್ತಿದ್ದಾಗ ತಮ್ಮ ಉದ್ದೇಶ, ವಿಚಾರಗಳನ್ನು ತಿಳಿಸಿದಾಗ, ಪೂಜ್ಯರು ಮುಂಡರಗಿಗೇಕೆ ನಮ್ಮ ಮಠದಲ್ಲಿಯೇ ಇದ್ದು ಅಭ್ಯಾಸ ಮುಂದುವರೆಸಬಹುದಲ್ಲ ಎಂದು ಹೇಳಿದಾಗ, ಮನದಲ್ಲಿ ಗೊಂದಲ ಹಾಗೂ ಆಶೆ ಅಂಕುರಿಸಿದ ಪರ್ವತಯ್ಯನವರು ಹಾಗೂ ಅವರ ಪಾಲಕರು ಪೂಜ್ಯರ ಸಲಹೆಯನ್ನು ಒಪ್ಪಿಕೊಂಡರು. ಕೊಪ್ಪಳ ಗವಿಮಠಕ್ಕೆ ಮುಂದೆ ಪೀಠಾಧ್ಯಕ್ಷರಾಗುವದಕ್ಕೆ ಈ ಎಲ್ಲಾ ಕಾರಣಗಳು ಗೋಚರಿಸಿದ್ದು ಒಂದು ಸುಯೋಗವೇ ಸರಿ. ಆತನ ತಂದೆ-ತಾಯಿಯರೂ ಸಹ ತುಂಬಾ ಸಂತೋಷಪಟ್ಟು ಒಪ್ಪಿದರು.

ಪರ್ವತಯ್ಯನು ಯಥಾಪ್ರಕಾರ ಮಠದಲ್ಲಿ ಉಳಿದ ವಿದ್ಯಾರ್ಥಿಗಳಂತೆ ದೈನಂದಿನ ಕೆಲಸ ಕಾರ್ಯಗಳನ್ನು ಮಾಡುತ್ತ ಗವಿಶಿದ್ದೇಶ್ವರ ಹೈಸ್ಕೂಲಿಗೆ ಹೆಸರು ನೋಂದಾಯಿಸಿದರು. ಪೂಜ್ಯರು ಅಂದಿನಿಂದಲೇ ಈತನ ಮೇಲೆ ವಿಶೇಷ ಆಸಕ್ತಿ ವಹಿಸುತ್ತಿದ್ದುದು ಯೋಗಾಯೋಗವೇ ಬಂದಿತು. ದಿನಾಂಕ ೦೧/೦೬/೧೯೭೭ ರಂದು ಜನಿಸಿದ, ಪರ್ವತಯ್ಯನ ತಂದೆ-ತಾಯಿಗಳಾದ ಹಿರೇಮಠದ ಶ್ರೀ ನೀಲಯ್ಯ ಹಾಗೂ ಶ್ರೀಮತಿ ಈರಮ್ಮ ಅವರು ಒಳ್ಳೇ ಸಂಪ್ರದಾಯಸ್ತ ಮನೆತನದವರು, ಶಿಷ್ಟಾಚಾರ ಹೊಂದಿದವರು. ಅವರು ಬಹಳ ಸಂತೋಷದಿಂದ ಮಗನನ್ನು ಕೊಪ್ಪಳ ಗವಿಮಠದಲ್ಲಿ ಬಿಟ್ಟು ಊರಿಗೆ ಹೋದರು. ಪ್ರತಿ ಯುಗಕ್ಕೆ ಒಬ್ಬ ಮಹಾ ಪುರುಷರು, ಧರ್ಮದ ಏಳ್ಗೆಗಾಗಿ ಹುಟ್ಟಿ ಬರುವಂತೆ, ನಮ್ಮ ಭಾಗಕ್ಕೆ "ಗವಿಶಿದ್ಧೇಶ್ವರರೇ" ಮತ್ತೊಮ್ಮೆ ಹುಟ್ಟಿ ಬಂದಂತೆ, ಪರ್ವತಯ್ಯನವರು ಹುಟ್ಟಿ ಬಂದದ್ದು, ಗವಿಮಠದಲ್ಲಿಯೇ ವಿಶ್ರಮಿಸಿದ್ದು, ನಮ್ಮ ಭಾಗದ ಪುಣ್ಯವೆಂದು ಭಾವಿಸಿದ್ದೇವೆ.

ಇತ್ತ ದಿನ ಕಳೆದಂತೆ ಪರ್ವತಯ್ಯನವರ ವಿದ್ಯಾಭ್ಯಾಸ, ಮಠದ ಕೆಲಸ, ಸ್ವಾಮಿನಿಷ್ಠೆ ಮಹಾಸ್ವಾಮಿಗಳಿಗೆ ಬಹಳೇ ಸಂತೋಷವನ್ನುಂಟು ಮಾಡಿತು. ಈತನ ಬಗ್ಗೆ ವಿಶೇಷ ಕಾಳಜೀ ವಹಿಸುತ್ತಿದ್ದರು. ಶಾಲೆಯಲ್ಲೂ ಮುಗ್ಧ ಸ್ವಭಾವದ ಶಿಷ್ಯನನ್ನು ಎಲ್ಲಾ ಶಿಕ್ಷಕರೂ ಆಶ್ಚರ್ಯದಿಂದ ಕಾಣುತ್ತಿದ್ದರು.

ವಿದ್ಯಾರ್ಥಿಯಾದ ಈತನ ತೇಜಸ್ಸು, ಗಾಂಭೀರ್ಯ, ಓದುವ ಹಂಬಲವನ್ನು ಅರಿತ ಪೂಜ್ಯರು ತಮ್ಮ ನಿಕಟ ವರ್ತಿಯನ್ನಾಗಿ ಮಾಡಿಕೊಂಡು, ಪೂಜಾ ವಿಧಿ–ವಿಧಾನಗಳನ್ನು ಸ್ವತಃ ಕಲಿಸಹತ್ತಿದರು. ಆತನ ಮಾರ್ಗವೇ ವಿಶೇಷವಾಗಿ ಸಾಗಹತ್ತಿತು. ಬೆಳೆಯ ಸಿರಿ ಮೊಳಕೆಯಲ್ಲಿ ಇದ್ದಂತೆ ಮುಂದೆ ಜಗದ್ಗುರುವಿನ ಲಕ್ಷಣಗಳನ್ನು ಗುರುತಿಸಿಕೊಂಡ ಪೂಜ್ಯರು ಸ್ವತಃ ಸಂಸ್ಕೃತ ಅಭ್ಯಾಸ ಭೋಧಿಸಹತ್ತಿದರು. ಗುರುವಿಗೆ ತಕ್ಕ ಶಿಷ್ಯನಾಗಿ ಹೈಸ್ಕೂಲ ಶಿಕ್ಷಣವನ್ನು ಸದ್ದು–ಗದ್ದಲವಿಲ್ಲದೇ ಉನ್ನತ ಶ್ರೇಣಿಯಲ್ಲಿ ಮುಗಿಸಿದನು. ನಂತರ ಗವಿಶಿದ್ದೇಶ್ವರ ಕಾಲೇಜಿನಲ್ಲಿ ಪಿ.ಯು.ಸಿ ಹಾಗೂ ಬಿ.ಎ ಪದವಿಯ ನ್ನು ಉತ್ತಮ ಶ್ರೇಣಿಯಲ್ಲಿ ಪಾಸು ಮಾಡಿದನು. ಆಗಂತೂ ಪೂಜ್ಯರಿಗೆ ಬಹಳೇ ಸಂತೋಷವಾಯಿತು.

ಇನ್ನೂ ಹೆಚ್ಚಿನ ಅಭ್ಯಾಸ ಮಾಡಬೇಕೆಂಬ ಶಿಷ್ಯನ ಉತ್ಕಟ ಬಯಕೆಯಂತೆ, ತಿರುಪತಿಗೆ ಕಳಿಸಿ, ಅಲ್ಲಿ ಸಂಸ್ಕೃತ –ಆಧ್ಯಾತ್ಮ ಶಿಕ್ಷಣವನ್ನು ಕಲಿಯಲು ಪೂಜ್ಯರು ಏರ್ಪಾಡು ಮಾಡಿದರು. ಅಲ್ಲಿ ಶಿಕ್ಷಣವನ್ನು ಸಮರ್ಪಕವಾಗಿ ಮಾಡಿ ಮುಗಿಸಿ, "ಶಾಸ್ತ್ರೀ" ಎಂಬ ಪದವಿಯನ್ನು ಉನ್ನತ ಶ್ರೇಣಿಯಲ್ಲಿ ಪಾಸು ಮಾಡಿದರು, ಆದಾಗ್ಯೂ ಶಿಕ್ಷಣದ ದಾಹ ತೀರಲಿಲ್ಲ. ಮುಂದೆ ಪುಣೆಯ ವಿಶ್ವವಿದ್ಯಾಲಕ್ಕೆ ಸೇರಿ ಅಲ್ಲಿ ಎಂ.ಎ. ತತ್ವಶಾಸ್ತ್ರ (ಫಿಲಾಸಫಿ) ಹಾಗೂ ಎಂ.ಎ. ಇಂಗ್ಲೀಷ, ಹೀಗೆ ಎರಡು ಸ್ನಾತಕೋತ್ತರ ಪದವಿ ಪಡೆದು ಪಂಡಿತರಾಗಿ ಬಂದರು.

ಪೂಜ್ಯ ಮಹಾಸ್ವಾಮಿಗಳು ತುಂಬಾ ಸಂತೋಷ ಪಟ್ಟು, ಈತನು ನಮ್ಮ ಆಶೆ ಆಕಾಂಕ್ಷೆಗಳನ್ನು ಈಡೇರಿಸಬಲ್ಲನು ಎಂದು ಮನಗಂಡು, ಈ ಹಿಂದೆ ತಾವು ಮನದಲ್ಲಿ ತೀರ್ಮಾನಿಸಿದ್ದ ಹಾಗೆ ಈತನನ್ನೇ ಗವಿಮಠದ ಉತ್ತರಾಧಿಕಾರಿಯೆಂದು ನೇಮಿಸಿದರು. ತಮಗೆ ಅನಾರೋಗ್ಯದ ಕಾರಣ ಡಿಸೆಂಬರ್, ೧೩

ರಂದು ೨೦೦೨ನೇ ಇಸ್ವಿಯಲ್ಲಿ ಪೀಠಾರೋಹಣ ಕಾರ್ಯವನ್ನು ಮುಗಿಸಿ, ಮಠದ ಸಂಪೂರ್ಣ ಕಾರ್ಯಭಾರವನ್ನು ಒಪ್ಪಿಸಿದರು.

ಕೇವಲ ೨೫ ವರ್ಷದ ಪರ್ವತಯ್ಯ ದೇವರು ೧೮ನೇ ಜಗದ್ಗುರುಗಳಾಗಿ ಅಭಿನವ "ಗವಿಸಿದ್ಧೇಶ್ವರರು" ಎಂಬ ಪುನರ್ ನಾಮಕರಣದಿಂದ ಗವಿಮಠದ ಏಳಿಗೆಗಾಗಿ, ಭಕ್ತಸಮೂಹದ ಆಶೆಗಳನ್ನು ಪೂರೈಸಲು ದಿನವಿಡಿ ಕಾರ್ಯಕ್ರಮ ಹಾಕಿಕೊಂಡು, ತಮ್ಮ ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿಯೇ ನಡೆಯುತ್ತಿದ್ದುದನ್ನು ಕಾಣುತ್ತಿದ್ದೇವೆ. ಪರಂಪರೆ ಹಾಗೂ ಪ್ರಕೃತಿ ಎರಡನ್ನೂ ಪ್ರೀತಿಸುವವರಾಗಿದ್ದಾರೆ.

ತಮ್ಮ ಗುರುಗಳಾದ ಲಿಂ.ಜ. ಶಿವಶಾಂತವೀರ ಮಹಾಸ್ವಾಮಿಗಳು ಅರ್ಧಕ್ಕೆ ನಿಲ್ಲಿಸಿದ್ದ ಆಯುರ್ವೇದ ಕಾಲೇಜು ಹಾಗೂ ಆಸ್ಪತ್ರೆ ಕಟ್ಟಡವನ್ನು ಭವ್ಯವಾಗಿ ನಿರ್ಮಿಸಿ, ಅಲ್ಲಿಯೇ ಈಗ ರೋಗಿಗಳಿಗೆ ಚಿಕಿತ್ಸೆ ನೀಡಲಾಗುತ್ತಿದೆ. ೧೯೯೮ರಲ್ಲಿ ಪ್ರಾರಂಭಗೊಳಿಸಿದ್ದ ಈ ಆಸ್ಪತ್ರೆ ಈಗ ಬೃಹದಾಕಾರದಲ್ಲಿ ಬೆಳೆದು, ಸುಸಜ್ಜಿತ ರೀತಿಯಲ್ಲಿ ಜನತೆಗೆ ಸೇವೆಸಲ್ಲಿಸಲು ನಿಂತಿರುವದು ನಮ್ಮ ಭಾಗಕ್ಕೆ ಹೆಮ್ಮೆಯ ವಿಷಯ.

ದಿವ್ಯ ಕಾಂತಿಯ ಪೂಜ್ಯರು ಒಳ್ಳೇ ಚಟುವಟಿಕೆವುಳ್ಳವರಾಗಿದ್ದು, ನಿತ್ಯ ತ್ರಿಕಾಲಪೂಜೆ, ವಿಧಿವಿಧಾನಗಳನ್ನು ಕಟ್ಟುನಿಟ್ಟಾಗಿ ಮಾಡುತ್ತ, ಭಕ್ತರ ಆಶೋತ್ತರಗಳನ್ನು ವಿಶಾಲ ಮನಸ್ಸಿನಿಂದ ಬೆಳೆಸುತ್ತಿದ್ದಾರೆ. ಅವರ ಪ್ರವಚನ, ಉಪನ್ಯಾಸಗಳು ಕೇಳುಗರನ್ನು ಮಂತ್ರಮುಗ್ಧರನ್ನಾಗಿಸುತ್ತಿವೆ, ಅಪಾರ ಪಾಂಡಿತ್ಯ ಹೊಂದಿರುವ ಪೂಜ್ಯರು ವಿದ್ಯಾಖನಿ, ತಪೋನಿಧಿ, ಸರ್ವಧರ್ಮ ಸಮನ್ವಯ ಹೃದಯವಂತಿಕೆಗಳು ಗವಿಮಠದ ಏಳ್ಗೆಗೆ ದಾರಿದೀಪಗಳೆನ್ನುವದರಲ್ಲಿ ಎರಡು ಮಾತಿಲ್ಲ.

ಇಂತಹ ದಿವ್ಯ ಪರಂಪರೆಯನ್ನು ಹೊಂದಿದ ಈ ನಾಡಿನ ಗವಿಮಠದ ಶ್ರೇಷ್ಠತೆಯನ್ನು ಮೆರೆಯಲು ಮತ್ತೊಮ್ಮೆ ಗವಿಸಿದ್ಧೇಶ್ವರರು ಜನ್ಮತಾಳಿದ್ದು ಕೊಪ್ಪಳ ನಗರ ಹಾಗೂ ಸುತ್ತಮುತ್ತಲಿನ ಭಕ್ತ ಸಮೂಹದ

ಪುಣ್ಯವೆಂದೇ ಜನರು ಆಡುವ ಮಾತುಗಳು ಸತ್ಯವಾಗಿವೆ. ಪೂಜ್ಯರು ಪರಂಪರೆ ಹಾಗೂ ಪ್ರಕೃತಿ ಎರಡನ್ನೂ ಪ್ರೀತಿಸುವ ವಿಶಾಲ ಭಾವನೆ ಹೊಂದಿದ್ದಾರೆ.

**ಜ. ಶಿವಶಾಂತವೀರ ಮಹಾಸ್ವಾಮಿಗಳು ಹಾಗೂ ಅನುಷ್ಠಾನ**

" ಚತುರ್ ವಿದಾ ಭಜಂತೇಮಾಂ

ಜನಾಃ ಸುಕೃತಿ ನೋಽರ್ಜುನ

ಆರ್ತೋ ಜಿಜ್ಞಾಸು ರರ್ಥಾರ್ಥೀ

ಜ್ಞಾನೀಚ ಭರತರ್ಷಭ ॥"

ಈ ಮೇಲಿನ ಹೇಳಿಕೆಯಂತೆ ಭಕ್ತರು ನಾಲ್ಕು ರೀತಿಯ ಜನರೆಂಬುದು ಗೊತ್ತಾಗುತ್ತದೆ. ಅವರೆಂದರೆ ಆರ್ತಾ ಜಿಜ್ಞಾಸು ಅರ್ಥಾತ್ ಜ್ಞಾನಿ. ಆರ್ತನೆಂದರೆ ದುಃಖಿಯು. ಈತನು ತನ್ನ ದುಃಖವನ್ನು ದೂರಿಕರಿಸಲು ಶಾಂತಿಗಾಗಿ ಪರಮಾತ್ಮನನ್ನು ಭಜಿಸುತ್ತಾನೆ. ಜಿಜ್ಞಾಸು ಎಂದರೆ ಪರಮಾತ್ಮ ಸ್ವರೂಪವನ್ನು ತಿಳಿಯಲು ಅಪೇಕ್ಷೆಯುಳ್ಳವರು. ಇವರು ದೇವರಲ್ಲಿ ತತ್ವ ಜಿಜ್ಞಾಸೆಗಾಗಿ ದೇವರನ್ನು ಪೂಜಿಸುತ್ತಾನೆ, ಭಜಿಸುತ್ತಾನೆ, ಅರ್ಥಾರ್ಥಿ ಎಂದರೆ ಫಲಾಪೇಕ್ಷೆಯುಳ್ಳವರು. ಇವರು ಯಾವುದೋ ಒಂದು ಫಲದಾಸೆಗಾಗಿ ದೇವರನ್ನು ಭಜಿಸುತ್ತಾರೆ. ಜ್ಞಾನಿ ಎಂದರೆ ಪರಮಾತ್ಮನ ತತ್ವವನ್ನು ತಿಳಿದವರು. ಇವರು ಚಿತ್ತ ಶಾಂತಿಗಾಗಿ ಪರಮಾತ್ಮನನ್ನು ಭಜಿಸುತ್ತಾರೆ. ಇವರಿಗೆ ಯಾವ ಆಶೆಗೂ ಅವಕಾಶ ಇರುವದಿಲ್ಲ. ನಿಶ್ಚಿಂತನಾಗಿ ಸೋಹಂ ಎಂದು ಧ್ಯಾನಿಸುತ್ತಾನೆ, ಸೋಹಂ ಎಂದರೆ ಆ ಪರಮಾತ್ಮನೇ ನಾನೆಂದು ಅರ್ಥ. ಈ ಸೋಹಂ ಎಂಬ ಮಂತ್ರವು ಎರಡಕ್ಷರದ ಮಹಾಮಂತ್ರವು. ಎಲ್ಲರ ಉಸಿರಾಟದಲ್ಲಿ ಸಂಚರಿಸುವ ಪ್ರಾಣವಾಯು ಮೂಗಿನಿಂದ ಒಳ ಸೇರುವಾಗ 'ಸೋ' ಎಂತಲೂ ಹೊರಗೆ ಬರುವಾಗ 'ಹಂ' ಎಂತಲೂ ನುಡಿಯುವದೆಂದು ಯೋಗ ಶಾಸ್ತ್ರವು ಹೇಳುತ್ತದೆ. ಆ ಮಂತ್ರದೊಳಗಿನ 'ಸ' ಕಾರ 'ಹ' ಕಾರಗಳ

ಲೋಪದಿಂದ 'ಓಂ' ಎಂದು ಏಕಾಕ್ಷರ ಮಹಾಮಂತ್ರವು ಹುಟ್ಟುತ್ತದೆ ಎಂದು ಯೋಗಶಾಸ್ತ್ರದ ಅಭಿಪ್ರಾಯವಿದೆ. ಈ ಕೆಳಗಿನ ಶ್ಲೋಕವು ಅದನ್ನೇ ದೃಢಪಡಿಸುತ್ತದೆ.

"ಸೋಹಮಿತಿ ದ್ವಿವರ್ಣಾತ್ಮಾ

ಮಹಾಮಂತ್ರೋ ವಿಶಿಷ್ಯತೆ

ಉದೇತಿ ಸಹಯೋರ್ ಲೋಪಾತ್

ಓ ಮಿತ್ಯೇಕಾಕ್ಷರೋ, ಮನುಃ।"

ಈ ಓಂಕಾರವೇ ಮೂಲ ಪ್ರಣವವೆಂದು ಹೆಸರು ಪಡೆದಿದೆ. 'ಓಂ' ಎಂಬ ಅಕ್ಷರದಿಂದ ಸಾಹಿತ್ಯಕ್ಕೆ ಮೂಲವಾದ ಐವತ್ತು ಅಕ್ಷರಗಳು ಉತ್ಪತ್ತಿಯಾಗಿವೆ. ಈ ಓಂಕಾರ ಧ್ವನಿಯಿಂದಲೇ ಸಂಗೀತಕ್ಕೆ ಮೂಲವಾದ ನಾದವು ಉತ್ಪನ್ನವಾಗಿದೆ. ಈ ನಾದವು ಶಬ್ದ ಸ್ವರೂಪವಾದ ಅಕ್ಷರಗಳು ನಮ್ಮ ಶರೀರವನ್ನು ವ್ಯಾಪಿಸಿಕೊಂಡಿವೆ. ಇದೆಲ್ಲವನ್ನು ಯೋಗಿಗಳು ಸ್ಪಷ್ಟಪಡಿಸಿದ್ದಾರೆ. ಈ ಓಂಕಾರವು ಹತ್ತು ಹಲವು ಕೋಟಿ ಮಹಾಮಂತ್ರಗಳಿಗೆ ಜನ್ಮಸ್ಥಾನವಾಗಿದೆ. ಆ ಮಂತ್ರಗಳಲ್ಲಿ ಮುಖ್ಯವಾದ ಷಡಕ್ಷರ ಮಹಾಮಂತ್ರವನ್ನು ಶಿವಯೋಗಿಗಳು ಜಪಿಸುತ್ತಾರೆ, ಸೋಹಂ ಮಂತ್ರದ ಅರ್ಥವು ಈ ಷಡಕ್ಷರ ಮಹಾಮಂತ್ರದಲ್ಲಿ ಅಡಗಿರುವದರಿಂದಲೇ ಅದನ್ನೇ ಧ್ಯಾನಿಸಿ ಶಿವಯೋಗಿಗಳು ಪಂಚಾಕ್ಷರ ಮಂತ್ರ ಸ್ವರೂಪವಾದ ಈ ಜಗತ್ತನ್ನು ಓಂಕಾರ ಸ್ವರೂಪವಾದ ಆತ್ಮವನ್ನು ತಾವು ಸದಾ ಧರಿಸಿ ಪೂಜಿಸುತ್ತಿರುವ ಇಷ್ಟಲಿಂಗದಲ್ಲಿ ದೃಷ್ಟಿಯಿಟ್ಟು ಕೊಂಡು ಆನಂದ ಪಡುತ್ತಾರೆ. ಇಂಥ ಶಿವಯೋಗಿಗಳಲ್ಲಿ ಕೊಪ್ಪಳದ ಗವಿಮಠದ ಜಗದ್ಗುರು ಶಿವಶಾಂತವೀರ ಮಹಾಸ್ವಾಮಿಗಳು ಒಬ್ಬರು. ಈ ಮಹಾತ್ಮರು ಅನುಷ್ಠಾನ ಮೂರ್ತಿಗಳು. ಇವರ ಅನುಷ್ಠಾನವೆಂದರೆ ಈ ಮೇಲೆ ಉಲ್ಲೇಖಿಸಿದ ಮಂತ್ರಾನುಸಂಧಾನವು.

ಈ ಪೂಜ್ಯರು ಸಲ್ಲಿಸುತ್ತಿರುವ ಸಮಾಜೋದ್ಧಾರ ಕಾರ್ಯವು ಲಿಂಗ ಸ್ವರೂಪವಾಗಿ ಲಿಂಗಾನುಸಂಧಾನದ ಸಿದ್ಧಿಯಾಗಿ ಮಹಾಲಿಂಗ ಸ್ವರೂಪವೇ ಆಗಿದ್ದರು. ಆ ಮಹಾ ಪೂಜ್ಯರ ದೃಷ್ಟಿಯಲ್ಲಿ ಜಗತ್ತೆಲ್ಲವೂ ಲಿಂಗ ಸ್ವರೂಪವಾಗಿಯೇ ಕಾಣಿಸುತ್ತದೆ. ಮಹಾಸ್ವಾಮಿಗಳು ಪ್ರತಿಮಂಗಳವಾರಕ್ಕೊಮ್ಮೆ ಮೌನವ್ರತವನ್ನಾಚರಿಸಿ ಜನರ ಭಾವನೆಯನ್ನು ಶುದ್ಧಗೊಳಿಸಿ ಭಕ್ತಿಯನ್ನು ಸ್ಥಿರಗೊಳಿಸುತ್ತಿದ್ದರು. ಆ ಮಹಾಮಹಿಮರಿಂದ ಕೊಪ್ಪಳ ನಾಡು ಪವಿತ್ರವಾಗಿದೆ. ಕೊಪ್ಪಳವು ಸುಕ್ಷೇತ್ರವಾಗಿದೆ. ಕೊಪ್ಪಳ ಗವಿಮಠವು

ಕೈಲಾಸವಾಗಿದೆ. ಪೂಜ್ಯ ಜಗದ್ಗುರು ಗವಿಸಿದ್ಧೇಶ್ವರನ ಪರಮಾವತಾರಿಗಳಾಗಿ ಕೊಪ್ಪಳ ಗವಿಮಠಕ್ಕೆ ಪೀಠಾಧಿಪತಿಗಳಾಗಿದ್ದು ನಮ್ಮೆಲ್ಲರ ಭಾಗ್ಯವೆಂದೇ ಜನತೆ ಹೇಳುತ್ತಿದೆ.

ಹಿರಿಯ ವಿದ್ವಾಂಸರು, ಜಗದ್ಗುರುಗಳು, ಕಂಡಂತೆ ೧೬ನೇ ಪೀಠಾಧ್ಯಕ್ಷರಾದ ಪೂಜ್ಯ ಶ್ರೀ ಜ. ಮರಿಶಾಂತವೀರ ಸ್ವಾಮಿಗಳ ಬಗ್ಗೆ.

**೧) ಸೂರ್ಯ ಸಿಂಹಾಸನಾಧೀಶ್ವರ ಡಾ|| ಶ್ರೀ ಜ.ಚ.ನಿ. ಅವರಿಂದ :-**

ಕರ್ನಾಟಕದ ಪೂರ್ವೇತಿಹಾಸದ ಪುಟಗಳಲ್ಲಿ ಕೊಪಣನಗರದ ಹಿರಿಮೆ-ಹಳಮೆಗಳು ಗಮನಾರ್ಹವಾಗಿದೆ. ಧರ್ಮ, ಅರ್ಥ ಬೇಹಾರಗಳ ಹಿರಿಮೆ ಈ ಕೊಪ್ಪಳಕ್ಕಿದೆ. ಅಶೋಕನ ಕಾಲದ ಶಿಲಾಶಾಸನ ಇಲ್ಲುಂಟು. ಶ್ರೀ ಗವಿಸಿದ್ಧೇಶ್ವರ ಒಳ್ಪಿನ ಗರಡಿ ಇದಾಗಿದೆ. ಅಲ್ಲಿ ಸಿದ್ಧಪುರುಷ ಗವಿಸಿದ್ಧೇಶ್ವರನ ದರ್ಶನವಾದೊಡನೆ ಮೈ ಪುಳಕಿತವಾಗುತ್ತದೆ. ಮನನಿಶ್ಚಲವಾಗುತ್ತದೆ, ನಿರ್ಮಲವಾಗುತ್ತದೆ. ಆ ಮಂಗಳಮಯ ಮಠದ ನೋಟ ಮನಸ್ಸಿಗೊಂದು ಆನಂದ! ತಪಸ್ವಿಗಳ ತೇಜಸ್ಸಿನಿಂದ ತುಂಬಿ ತೂಗುವ ತಾಣ! ಆ ತಾಣದಲ್ಲಿ ತಾವೆ ತಾವಾಗಿ ಮೂರ್ತವಂತರಾದ ಶ್ರೀ ಮರಿಶಾಂತವೀರ ಮಹಾಸ್ವಾಮಿಗಳವರ ದರ್ಶನ.

ತೆಳುವಾಗಿದ್ದರೂ ತೇಜೋವಂತ ಮೂರ್ತಿ, ನೀಳಾದ ತೋಳು. ಅಗಲವಾದ ನೊಸಲು; ವಿಭೂತಿ ವಿಭೂಷಿತ ನೊಸಲು. ಸಂಪಿಗೆ ಹೂವಿನಂತೆ ಸೊಗಸಾದ ಮೂಗು, ಹೊಳೆವ ಕಣ್ಣು, ಪ್ರಸನ್ನ ಮುಖ ಮುದ್ರೆ, ವಿದ್ಯೆಗೆ ತಕ್ಕವಿನಯ, ವ್ಯಕ್ತಿಗಳಿಗೆ ತಕ್ಕ ಅಭಯ, ವೈದ್ಯ ವಿದ್ಯೆಯಲ್ಲಿ ಅಪಾರ ಅನುಭವ, ಮಾತು ಮಿತ; ಭಾವಪೂರ್ಣ ಸಂಪ್ರದಾಯ ಶರಣರಾಗಿದ್ದರೂ ಮೂಢ ಸಂಪ್ರದಾಯವಿರಲಿಲ್ಲ, ಗುರುವರ್ಗದವರನ್ನು ಸಮ ಮನಸ್ಸಿನಿಂದ ಕಾಣುತ್ತಿದ್ದರು. ಪ್ರೌಢ ವಿಚಾರಗಳನ್ನು ಮನಗಂಡು ಪ್ರಚೋದಿಸುತ್ತಿದ್ದರು.

ವಿದ್ಯಾಲಯವನ್ನು ಆರಂಭಿಸಿದ ಕೀರ್ತಿ ಅವರದು. ಸಮಸ್ಯೆಗಳನ್ನು ಸುಲಭವಾಗಿ ಬಿಡಿಸುವ ಜಾಣ್ಮೆ ಅವರಲ್ಲಿತ್ತು. ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಶ್ರೀಗಳ ಸೇವೆ ಸಾಗಿ ಬಂದಿದೆ.

ಅವರಲ್ಲಿದ್ದ ಸೂಕ್ಷ್ಮದೃಷ್ಟಿ, ತೀಕ್ಷ್ಣಬುದ್ಧಿ, ಸಹಿಷ್ಣು ಸ್ವಭಾವ, ಸ್ವಧರ್ಮಾಭಿಮಾನ, ಮಾನವೀಯ ಮೌಲ್ಯ ಮಾಪನ ಶಕ್ತಿ ಇವುಗಳನ್ನು ಕಂಡು ಅಚ್ಚರಿಗೊಂಡಿದ್ದೇವೆ, ಆನಂದಿಸಿದ್ದೇವೆ. ಕೊಪ್ಪಳಕ್ಕೆ ಹೋದಾಗಲೆಲ್ಲ ಅವರಲ್ಲಿಗೆ ಹೋಗಿ ದರ್ಶನ ಪಡೆದು ಸಂಭಾಷಣೆ ಮಾಡಿ ಬರುತ್ತಿದ್ದೆವು. ಅವರಾದರೂ ಕರೆಯಿಸಿಕೊಳ್ಳುತ್ತಿದ್ದರು. ಅನ್ಯೋನ್ಯ ಆತ್ಮೀಯತೆ ಅತ್ಯಂತವಾಗಿದ್ದಿತು. ನಮ್ಮ ಕೃತಿಗಳಲ್ಲಿ ಒಂದಾದ "ಶಿವಾದ್ವೈತದರ್ಶನ" ಅವರಿಗೆ ಅತ್ಯಂತ ಅಚ್ಚುಮೆಚ್ಚಿನ ಹೊತ್ತಿಗೆಯಾಗಿತ್ತು 'ವೀರಶೈವಕ್ಕೆ ಇದೊಂದು ವಿಶಿಷ್ಟ ಕೊಡುಗೆ' ಎಂದು ಅಪ್ಪಣೆಯನ್ನಿತ್ತಿದ್ದರು. ಅವರೊಬ್ಬ ಅದ್ವಿತೀಯ ಪೂಜ್ಯರಾಗಿದ್ದರು.

೨) <u>ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳಿಂದ :-</u>

ವೀರಶೈವ ಸಾಮಾಜದಲ್ಲಿ ಆಯಾಯ ಕಾಲಕ್ಕೆ ಅನೇಕ ಜನ ಮಹಾತ್ಮರೂ, ಅನುಭಾವಿಗಳೂ, ಕರ್ಮಯೋಗಿಗಳೂ, ಶಿವಯೋಗಿಗಳೂ ಜನಿಸಿ ಈ ಸಮಾಜವನ್ನು ಪವಿತ್ರಗೊಳಿಸಿರುತ್ತಾರೆ. ಶ್ರೀ ಬಸವಾದಿ ಪ್ರಮಥರ ಕಾಲದಲ್ಲಿ ಆಗಿಹೋದವರು ಪುರಾತನರು. ಕಳೆದ ಒಂದೆರಡು ಶತಮಾನಗಳಲ್ಲಿ ಅನೇಕರು ಮಠಾಧಿಪತಿಗಳಾಗಿ ಪ್ರಖ್ಯಾತಿ ಪಡೆದಿರುತ್ತಾರೆ.

ಸರ್ಪಭೂಷಣ ಶಿವಯೋಗಿಗಳು, ಘನಮಠಾರ್ಯರು, ಬಾಲಲೀಲಾ ಮಹಾಂತಸ್ವಾಮಿಗಳು, ಅಥಣಿ ಮುರುಘೇಂದ್ರ ಶಿವಯೋಗಿಗಳು, ಸಿದ್ಧಗಂಗೆಯ ಅಟವೀ ಸ್ವಾಮಿಗಳು, ಉರವಕೊಂಡದ ಕರಿಬಸವಸ್ವಾಮಿಗಳು, ಚಿತ್ತರಗಿ ವಿಜಯಮಹಾಂತೇಶ ಸ್ವಾಮಿಗಳು, ಜಗದ್ಗುರು ಜಯದೇವ ಮುರುಘರಾಜೇಂದ್ರ ಸ್ವಾಮಿಗಳು ಹೀಗೆ ಅನೇಕರು ಮಹತ್ಕಾರ್ಯ ಮಾಡಿ ಸಮಾಜವನ್ನು ಚೈತನ್ಯಮಯ ಮಾಡಿರುತ್ತಾರೆ. ಇವರ ಮಾಲಿಕೆಯಲ್ಲಿಯೇ ಜ.ಶ್ರೀ ಮರಿಶಾಂತವೀರ ಸ್ವಾಮಿಗಳು ಗವಿಮಠ ಕೊಪ್ಪಳ

ಇವರು ತಮ್ಮ ಕರ್ತೃತ್ವ ಶಕ್ತಿಯಿಂದಲೂ, ವಿಧಾಯಕ ಕಾರ್ಯಗಳಿಂದಲೂ, ಸದ್ಗುಣಗಳಿಂದಲೂ, ತ್ರಿವಿಧದಾಸೋಹ ಮೂರ್ತಿಗಳಾಗಿ, ಪ್ರಕಾಶಮಾನರಾಗಿ, ಲಿಂಗೈಕ್ಯರಾಗಿದ್ದಾರೆ.

೧೯೧೭ನೇ ಇಸ್ವಿಯಲ್ಲಿ ಕಾಶಿಯಲ್ಲಿ ಸಂಸ್ಕೃತಾಧ್ಯಯನ ಮಾಡಲಿಕ್ಕೆ ನಾವು ವಾರಣಾಸಿಗೆ ಹೋದಾಗ ಶ್ರೀ ಮರಿಶಾಂತವೀರ ಸ್ವಾಮಿಗಳ ಪರಿಚಯವಾಯಿತು. ಸೂಡಿಯ ಗುರು ನಂಜಯ್ಯನವರೇ ಅಲ್ಲಿ ಶ್ರೀಕಂಠಶಾಸ್ತ್ರೀಗಳೆಂದು ಹೆಸರು ಇಟ್ಟುಕೊಂಡಿದ್ದರು. ನಮ್ಮಲ್ಲಿಯ ಹೆಸರುಗಳು ಅಲ್ಲಿಯ (ಕಾಶಿಯ) ಪಂಡಿತರುಗಳಿಗೆ ಸರಿ ಬಾರದ್ದಕ್ಕೆ ಹೊಸ ಹೆಸರು ಇಟ್ಟುಕೊಂಡಿದ್ದರಂತೆ.

ಆ ಕಾಲದಲ್ಲಿ ಮಠದಲ್ಲಿ ಅಭ್ಯಾಸಮಾಡುತ್ತಿದ್ದವರಲ್ಲಿ ಎರಡು ಪಂಗಡಗಳಾಗಿದ್ದವು. ಗುರು-ವಿರಕ್ತರ ಚಳುವಳಿ ಪ್ರಾರಂಭವಾಗಿ ೫-೬ ತಿಂಗಳು ಆಗಿದ್ದಿತು. ಪ್ರತಿದಿನ ಯಾವುದಾದರೊಂದು ಸಮಯದಲ್ಲಿ ವಿಷಯಗಳ ವಾದ ವಿವಾದಗಳು ಸೇರದೇ, ಆಲೋಚನಾ ಪರರಾಗಿದ್ದ ಕಾರಣ ಯುಕ್ತಿಗಳನ್ನು ಹೇಳುತ್ತಿದ್ದರು. ಉಮಾಪತಿಶಾಸ್ತ್ರಿಗಳು ಸೂಡಿ ಇವರು ಉಗ್ರಗಾಮಿಗಳು. ಈ ಕಲಹದಲ್ಲಿ ಮುಂದಾಳುಗಳಾಗಿರುತ್ತಿದ್ದರು. ವಿಷಯ ವಿಕೋಪಕ್ಕೆ ಹೋದಾಗ ಶ್ರೀಕಂಠಶಾಸ್ತ್ರೀಗಳು ಅವರನ್ನು ಬೇರೆಕಡೆಗೆ ಕರೆದುಕೊಂಡು ಹೋಗುತ್ತಿದ್ದರು. ಕಾಶಿಯಲ್ಲಿ ನನ್ನ ಕೂಡ ಸೂಗವೀರ ಶಾಸ್ತ್ರಿಗಳು ಬೆಣಕಲ್, ಗುಡಗೇರಿ ಬಸವಲಿಂಗ ಶಾಸ್ತ್ರಿಗಳು, ಮಾಗಳದ ಬಸವರಾಜ ಶಾಸ್ತ್ರಿಗಳು, ಇವರೆಲ್ಲರೂ ಸಂಸ್ಕೃತ ಅಧ್ಯಯನಕ್ಕೆ ಆಗಮಿಸಿದ್ದರು. ಕಾಶಿಯಲ್ಲಿ ಶ್ರೀ ಜಗದ್ಗುರು ಜಂಗಮವಾಡಿ ಮಠವು ಸುಪ್ರಸಿದ್ಧವಾಗಿರುತ್ತದೆ. ದಕ್ಷಿಣ ದೇಶದಿಂದ ಹೋದವರಿಗೆಲ್ಲ ಅದೇ ಸಂಸ್ಥಾನ ಮಠದಲ್ಲಿ ಅಧ್ಯಯನಕ್ಕೆ ಅನುಕೂಲ ಆಗಿರುತ್ತದೆ. ಇದು ವೀರಶೈವ ಸಮಾಜಕ್ಕೆ ಹೆಮ್ಮೆಯ ವಿಷಯವು.[೧] ನಾನು ಹೋದಾಗ್ಗೆ ೨೫-೩೦ ಜನ ವಿದ್ಯಾರ್ಥಿಗಳು ಇದ್ದರು. ಅವರಲ್ಲಿ ಪಗಡದಿನ್ನಿ ಕಲಿಗಣನಾಥ ಶಾಸ್ತ್ರಿಗಳು, ಯಕ್ಕುಂಡಿ ಗುರುಸಿದ್ಧದೇವರು, ಮಮದಾಪೂರದ ಮಹಾದೇವಸ್ವಾಮಿಗಳು (ಸರ್ಪಭೂಷಣ ಮಠದ ಆರನೇ ಪಟ್ಟಾಧ್ಯಕ್ಷರು ೧೯೩೮ ರಿಂದ ೧೯೬೧ ರವರೆಗೆ ಇದ್ದರು).[೨]

---

೧) 'ಗವಿದೀಪ್ತಿ' ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು ಪು ೩೨-೧೯೭೬.

೨) "ಬೆಂಗಳೂರ ನಗರದ ವೀರಶೈವ ಮಠಗಳ ಸಾಂಸ್ಕೃತಿಕ ಅಧ್ಯಯನ" ಡಾ|| ಬಿ.ಸಿ.ವೀರಪ್ಪ ಪು-೧೭೪-೨೦೦೧



ಮೈಸೂರು ಗೌರೀಶಂಕರ ಸ್ವಾಮಿಗಳು, ನಾಗನೂರಿನ ಕಾಶೀನಾಥಶಾಸ್ತ್ರಿಗಳು, ಹೂಲಿಯ ಚರಮೂರ್ತಿ ನೀಲಕಂಠ ಶಿವಾಚಾರ್ಯರು, ಅಬ್ಬಿಗೇರಿಯ ಸದಾಶಿವಶಾಸ್ತ್ರಿಗಳು (ಜಗದ್ಗುರು ಶಿವಾನಂದಸ್ವಾಮಿಗಳು ಬಾಳೀಹಳ್ಳಿ) ಗುರುಮೂರ್ತಿ ಶಾಸ್ತ್ರಿಗಳು ಕಜ್ಜರಿ, ಉಮಾಪತಿಶಾಸ್ತ್ರಿಗಳು ಸೂಡಿ ಶ್ರೀಕಂಠ ಶಾಸ್ತ್ರಿಗಳು ಸೂಡಿ (ಜಗದ್ಗುರು ಮರಿಶಾಂತವೀರ ಸ್ವಾಮಿಗಳು ಕೊಪ್ಪಳ ಗವಿಮಠ) ನಾಗಭೂಷಣ ಶಾಸ್ತ್ರಿಗಳು ಸುಣಕಲ್‌ಬಿದರಿ, ರಾಜಶೇಖರ ಶಾಸ್ತ್ರಿಗಳು ಮಲ್ಲಾಪುರ, ಇವರೇ ಮೊದಲಾದವರು ಇದ್ದರು.

ಸೂಡಿಯ ಗುರುನಂಜಯ್ಯನವರೇ ಶ್ರೀಕಂಠಶಾಸ್ತ್ರಿಗಳೆಂದು ಹೆಸರಿಟ್ಟುಕೊಂಡಿದ್ದರು. (ನಮ್ಮಲ್ಲಿಯ ಹೆಸರುಗಳು ಅಲ್ಲಿ ಪಂಡಿತರಿಗೆ ಸರಿಹೋಗದ ಕಾರಣ ಹೆಸರನ್ನು ಬದಲಾಯಿಸಿದ್ದರಂತೆ) .

ನಾನು ಅಲ್ಲಿಗೆ ಹೋದ ಒಂದೇವಾರದಲ್ಲಿ ಶ್ರೀಕಂಠಶಾಸ್ತ್ರಿಗಳ ಪರಿಚಯವಾಯಿತು. ಆವಾಗ್ಗೆ ಮಠದಲ್ಲಿದ್ದವರಲ್ಲಿ ಎರಡು ಪಂಗಡವಾಗಿದ್ದವು. ಗುರು ವಿರಕ್ತರ ಚಳುವಳಿ ಪ್ರಾರಂಭವಾಗಿ ೫-೬ ತಿಂಗಳ ಮಾತ್ರ ಆಗಿತ್ತು. ಪ್ರತಿದಿನ ಯಾವುದಾದರೊಂದು ಸಮಯದಲ್ಲಿ ವಾದ - ವಿವಾದಗಳು ತೀಕ್ಷ್ಣವಾಗಿ ನಡೆಯುತ್ತಿದ್ದವು. ನಾನು ಹೊಸಬನಾಗಿದ್ದರಿಂದ ಮೂಕಪ್ರೇಕ್ಷಕನಾಗಿರುತ್ತಿದ್ದೆನು. ವಾದ-ವಿವಾದದಲ್ಲಿ ಶ್ರೀಕಂಠಶಾಸ್ತ್ರಿಗಳು ಸೇರುತ್ತಿರಲಿಲ್ಲ. ಆಲೋಚನಾಪರರಾಗಿದ್ದ ಕಾರಣ ಯುಕ್ತಿಗಳನ್ನು ಹೇಳುತ್ತಿದ್ದರು. ಶ್ರೀ ಉಮಾಪತಿಸ್ವಾಮಿಗಳು ಸೂಡಿ ಅವರು ಉಗ್ರಗಾಮಿಗಳು. ಈ ಕಲಹದಲ್ಲಿ ಮುಂದಾಳು. ವಿಷಯ ವಿಕೋಪಕ್ಕೆ ಹೋದಾಗ ಶ್ರೀಕಂಠಶಾಸ್ತ್ರಿಗಳು ಅವರನ್ನು ಬೇರೆಕಡೆಗೆ ಕರೆದುಕೊಂಡು ಹೋಗುತ್ತಿದ್ದರು.

**ಸದ್ಗುಣ ಪಂಡಿತರು :-** ಶ್ರೀಕಂಠಶಾಸ್ತ್ರಿಗಳು (ಪೂಜ್ಯ ಮರಿಶಾಂತವೀರ ಸ್ವಾಮಿಗಳು) ನನಗಿಂತ (ಚಂದ್ರಶೇಖರ ಶಾಸ್ತ್ರಿಗಳು) ಮೊದಲು ೨ ವರ್ಷ ಕಾಶಿಗೆ ಹೋಗಿದ್ದರು. ಅವರು ಬಹಳ ಶ್ರೇಷ್ಠಗುಣಗಳನ್ನು ಅಳವಡಿಸಿಕೊಂಡಿದ್ದರು. ತಮ್ಮ ಸಹಾಧ್ಯಾಯರ ಕೂಡ ಬಹಳ ಚನ್ನಾಗಿ ನಡೆದುಕೊಳ್ಳುತ್ತಿದ್ದರು. ಬಿರುನುಡಿಗಳನ್ನು ಎಂದೂ ಯಾರಿಗೂ ಅವರು ಆಡುತ್ತಿರಲಿಲ್ಲ. ವಿದ್ಯಾರ್ಥಿ ಅವಸ್ಥೆಯಲ್ಲಿ ಸಹಜವಾಗಿ ಒಬ್ಬರಿಗೊಬ್ಬರು ವಿವಾದಕ್ಕೆ ಇಳಿಯುವದು ಸ್ವಾಭಾವಿಕ. ಇಂಥ ಪ್ರಸಂಗದಲ್ಲಿ ಶ್ರೀಕಂಠಶಾಸ್ತ್ರಿಗಳು ಮಧ್ಯಸ್ಥರಾಗಿ ಬುದ್ಧಿವಾದ ಹೇಳುತ್ತಿದ್ದರು. ಅವರು ಎಂದೂ ಭಾವವಶರಾಗುತ್ತಿರಲಿಲ್ಲ.

**ನಡೆನುಡಿ :-** ಶ್ರೀಕಂಠಶಾಸ್ತ್ರಿಗಳು ಯಾವಾಗಲೂ ನುಡಿದಂತೆ ನಡೆಯುತ್ತಿದ್ದ ಕಾರಣ ವಿದ್ಯಾರ್ಥಿ ಬಳಗವು ಅವರಲ್ಲಿ ತುಂಬಾ ಶ್ರದ್ಧೆಯಿಂದ ನಡೆದುಕೊಳ್ಳುತ್ತಿತ್ತು. ಮನುಷ್ಯನು ಪರರಿಗೆ ಬೇಕಾದಷ್ಟು ಉಪದೇಶಮಾಡಬಹುದು ಆದರೆ ತಾನು ಅದರಂತೆ ನಡೆಯುವದು ಕಷ್ಟಕರವಾದುದು. ಜ್ಞಾನ, ಕ್ರಿಯೆ ಎರಡೂ ಬೇಕು. ಎರಡರಲ್ಲೂ ಒಂದಿಲ್ಲದಿದ್ದರೆ ಅವನ ಬಾಳು ಹಸನವಾಗುವದಿಲ್ಲ. ಶ್ರೀಕಂಠಶಾಸ್ತ್ರಿಗಳು ಎಂದೂ ದಾರಿತಪ್ಪಿ ನಡೆಯಲಿಲ್ಲ. ಇದು ಅವರಲ್ಲಿದ್ದ ಶ್ರೇಷ್ಠಗುಣ ಆಗಿರುತ್ತದೆ. ನುಡಿದಂತೆ ನಡೆ ಇದೇ ಜನ್ಮ ಕಡೆ ಎಂದು ಎಲ್ಲಾ ಶರಣರೂ ಬಸವಾದಿ ಪ್ರಮಥರೂ ಸಹ ಇದನ್ನೇ ಉಚ್ಛರಿಸಿದ್ದಾರೆ. ಅದಕ್ಕಾಗಿಯೇ ಇವರು ಮುಂದೆ ದೊಡ್ಡ ಮಠಾಧಿಪತಿಗಳಾದರು. ವೀರಶೈವ ಸಮಾಜವು ಜ್ಞಾನಕ್ರಿಯಾತ್ಮಕವಾದುದು. ಒಂದು ವೃಕ್ಷದಲ್ಲಿ ಹಣ್ಣುಗಳಿವೆ ಎಂದು ತಿಳಿದುಕೊಳ್ಳುವದೇ ಜ್ಞಾನ, ಆ ಮರವನ್ನು ಹತ್ತಿ ಹಣ್ಣುಗಳನ್ನು ತಿನ್ನುವದೇ ಕ್ರಿಯೆ ಅಥವಾ ಪರಸ್ತ್ರೀಯರನ್ನು ಮುಟ್ಟಬಾರದೆಂಬುದೇ ಜ್ಞಾನ ಅದರಂತೆ ನಡೆದುಕೊಳ್ಳುವದೇ ಕ್ರಿಯೆ. ಇದನ್ನು ಶ್ರೀಕಂಠಶಾಸ್ತ್ರಿಗಳು ಚನ್ನಾಗಿ ಸಾಧಿಸಿದ್ದರು. ಇವರ ಅಂತರಂಗ, ಬಹಿರಂಗಗಳೆರಡೂ ಶುದ್ಧವಾಗಿದ್ದವು. ಇಲ್ಲದಿದ್ದರೆ ಅವರು ಮುಂದೆ ಶ್ರೇಷ್ಠಪುರುಷರ ಮಾಲಿಕೆಯಲ್ಲಿ ಸೇರುತ್ತಿರಲಿಲ್ಲ.

**ಜ್ಞಾನದ ಬಗ್ಗೆ ಜಗದ್ಗುರು ಪ್ರಭುದೇವರು :-**

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ,
ಕಾಮಿನಿ ನಿನ್ನವಳಲ್ಲ ಅದು ಜಗಕಿಕ್ಕಿದ ವಿಧಿ
ನಿನ್ನದೆಂಬುವುದು ಜ್ಞಾನ ರತ್ನನೋಡಾ,
ಅಂತಪ್ಪ ಜ್ಞಾನ ರತ್ನವ ನೀನು
ಅಳವಡಿಸಿಕೊಂಡದ್ದೇ ಆದರೆ
ನಿನಗಿಂತ ಸಿರಿವಂತರಿಲ್ಲಾ ಕಾಣಾ ಗುಹೇಶ್ವರಾ, ।।

ಎಂದು ಜ್ಞಾನದ ಬಗ್ಗೆ ಪ್ರಶಂಸೆ ಮಾಡಿದ್ದಾರೆ.

ವೇದಾಂತವನೋದಿ ಜ್ಞಾನ ಸೂರೆಮಾಡುವ
ಜಂಗಮ ಕ್ರಿಯಾ ಹೀನನಾದರೆ
ಆಗದು ಆತನಲ್ಲಿ ಸಮರಸ ಯಾಕೆಂದರೆ
ಆತನು ನುಡಿದಂತೆ ನಡೆಯಲಾರ.

ಅಂದರೆ ಮೇಲಿನ ವಚನಗಳು ನುಡಿ-ನಡೆಯನ್ನು ಸಮರ್ಥಿಸುತ್ತವೆ. ಶ್ರೀಕಂಠಶಾಸ್ತ್ರಿಗಳವರು ತಮ್ಮ ಅಧ್ಯಯನ ಕಾಲದಿಂದಲೇ ಇವೆರಡನ್ನೂ ಸಾಧಿಸುತ್ತ ಬಂದಿದ್ದಾರೆ. ಅಂತರಂಗಶುದ್ಧಿ ಇಲ್ಲದವನ ಹೃದಯ ಅತ್ತಿಹಣ್ಣಿನಂತೆ ಹೊಲಸಾಗಿರುತ್ತದೆ.

**ವಿದ್ವಾಂಸರು :-** ಮನುಷ್ಯನಿಗೆ ವಿದ್ಯೆಯಜೊತೆಗೆ ಗುಣವೂ ಪ್ರಧಾನವಾದುದು. ಎಷ್ಟೋಜನರು, ವಿದ್ಯಾವಂತರಾದಾಗ್ಯೂ ಹೀನ ಗುಣಗಳನ್ನು ಅಳವಡಿಸಿಕೊಂಡು ಜನನಿಂದೆಗೆ ಪಾತ್ರರಾಗುತ್ತಾರೆ. ಪೂಜ್ಯ ಮಹಾಸ್ವಾಮಿಗಳು ಗುಣಾಢ್ಯರಿದ್ದಂತೆ ಘನ ವಿದ್ವಾಂಸರೂ ಆಗಿದ್ದರು. ಪ್ರಾಚೀನ ನ್ಯಾಯಶಾಸ್ತ್ರ (ಲಾಜಿಕ್) ವನ್ನು ಓದಿ ಅದರಲ್ಲಿ ಪಾಂಡಿತ್ಯ ಪಡೆದರು. ಸಾಹಿತ್ಯದಲ್ಲಿಯೂ ಚನ್ನಾಗಿ ಪರಿಣಿತರಾಗಿದ್ದರು. ಆಯುರ್ವೇದದಲ್ಲಿ ಅವರಿಗೆ ತುಂಬಾ ಆಸಕ್ತಿ, ವಿದ್ವತ್ತು ಇತ್ತು. ರಾಜಕೀಯ ವಿಷಯ ಹೆಚ್ಚು ಸೇರುತ್ತಿರಲಿಲ್ಲ.

**ಪರೋಪಕಾರಿಗಳು :-** ಶ್ರೀಕಂಠಶಾಸ್ತ್ರಿಗಳು ಪರೋಪಕಾರ ಮಾಡಬೇಕೆಂಬುವ ಸದ್ಬುದ್ಧಿಯುಳ್ಳವರಾಗಿದ್ದರು. ಆಶ್ರಯವಿಲ್ಲದ ವಿದ್ಯಾರ್ಥಿಗಳಿಗೆ ತಮ್ಮ ಕಡೆಯಿಂದ ಶಕ್ಯವಾದ ಸಹಾಯ ಮಾಡುತ್ತಿದ್ದರು. ಬಡವಿದ್ಯಾರ್ಥಿಗಳ ಮೇಲೆ ತುಂಬಾ ಸಹಾನುಭೂತಿಯುಳ್ಳವರಾಗಿದ್ದರು. ಅದರಂತೆ ತಮ್ಮ ಇಡೀ ಜೀವನದಲ್ಲಿ ಅಳವಡಿಸಿದ್ದರು.

ಶ್ರೀ ಮರಿಶಾಂತವೀರ ಸ್ವಾಮಿಗಳು ವಿದ್ಯಾರ್ಜನೆಯ ಕಾಲದಿಂದಲೂ ಆಶ್ರಮ ಧರ್ಮ ಕಾಪಾಡಿಕೊಂಡು ಪೂಜಾನಿಷ್ಠರಾಗಿದ್ದರು. ನಾನು-ಅವರು ಸುಮಾರು ಎಂಟು ವರ್ಷಗಳವರೆಗೆ ಸಹಾಧ್ಯಾಯಿಗಳಾಗಿದ್ದ ಕಾರಣ ಅವರಲ್ಲಿದ್ದ ಗುಣಗಳನ್ನು ಇಲ್ಲಿ ವಿವರಿಸಿದ್ದೇನೆ.

ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿಗಳ ಅಭಿಪ್ರಾಯದಲ್ಲಿ

✱ ಗುರುವೋ ಬಹವಸ್ಸಂತಿ, ಶಿಷ್ಯ ವಿತ್ತಾಪಹಾರಕಾಃ ।
ದುರ್ಲಭೋ ಸದ್ಗುರುಶ್ಚೈವ ಶಿಷ್ಯ ಹೃತ್ತಾಪಹಾರಕಾಃ ।।

✱ ಸುರತರುವು ಮರನಲ್ಲ, ಸುರಭಿ ವೊಂದಾವಲ್ಲ ।
ಪರುಷ ಪಾಷಾಣದೊಳಗಲ್ಲ ಗುರುರಾಯ ।
ನರರೊಳಗಲ್ಲ ಸರ್ವಜ್ಞ ।।

ಸುಮಾರು ೪೫-೪೬ನೇ ಸಾಲಿನಲ್ಲಿ ನಾನು ಕರ್ನಾಟಕದಲ್ಲಿ ಸಂಚರಿಸುವಾಗ ಇತಿಹಾಸ ಪ್ರಸಿದ್ಧವಾದ ಕೊಪ್ಪಳಕ್ಕೆ ಹೋಗಿದ್ದೆ ಅಲ್ಲಿ ನಾನು ಇರುವದಕ್ಕೆ ಸ್ನಾನ-ಪೂಜೆಗಳಿಗೆ ಶ್ರೀ ಗವಿಮಠವು ಅನುಕೂಲಸ್ಥಳವೆಂದು ಮೊದಲೇ ನಿಶ್ಚಯಿಸಿಕೊಂಡು ಕೊಪ್ಪಳಕ್ಕೆ ಕಾಲಿಟ್ಟೆನು. ಆಗ ಗವಿಮಠದಲ್ಲಿ ಲಿ।। ಜಗದ್ಗುರು ಮರಿಶಾಂತವೀರ ಮಹಾಸ್ವಾಮಿಗಳು ಅಧ್ಯಕ್ಷರಾಗಿದ್ದರು, ಅವರು ಮಹಾವಿದ್ವಾಂಸರೂ, ಉದಾರಿಗಳೂ, ನ್ಯಾಯನಿಷ್ಠರೂ, ವಿದ್ಯಾಭಿಮಾನಿಗಳೂ ಆಗಿರುವರೆಂಬುದನ್ನು ಬಹುಜನಗಳ ಮುಖದಿಂದ ಕೇಳಿದ್ದೆನು. ನಾನು ಕೊಪ್ಪಳಕ್ಕೆ ಬರುವ ವಿಷಯ ಹಾಗೂ ಶ್ರೀ ಮಠದಲ್ಲಿ ತಂಗುವಿಕೆಯ ಬಗ್ಗೆ ಪೂಜ್ಯರಿಗೆ ಪತ್ರ ಮುಖೇನ ಅರಿಕೆಯಾಗಿತ್ತು. ಅವರೂ ಸಹ ನನ್ನ ಹಾದಿ ನೋಡುತ್ತಿದ್ದರಂತೆ. ನನ್ನ ಕೀರ್ತನ ಪರಿವಾರದೊಡನೆ ಶ್ರೀ ಮಠಕ್ಕೆ ಕಾಲಿಟ್ಟಕೂಡಲೇ ಶ್ರೀಗಳು ನಮ್ಮನ್ನು ಮಮತೆಯಿಂದ ಬರಮಾಡಿಕೊಂಡರು ನಾನು ಅವರಿಗೆ ದೀರ್ಘದಂಡ ನಮಸ್ಕಾರಗಳನ್ನು ಸಲ್ಲಿಸಿದೆನು. ಅದಕ್ಕೆ ಅವರು ಏಳಿ ಏಳಿ ಮೊದಲು ಸ್ನಾನ ಪೂಜೆಮಾಡಿ ಆ ಮೇಲೆ ಮಾತಾಡೋಣ ಎಂದು ಅಪ್ಪಣೆ ಕೊಡಿಸಿದರು.

ಪೂಜ್ಯ ಶ್ರೀಗಳ ಅಪಾರ ಕೃಪೆ ಮತ್ತು ದಾಸೋಹಂಭಾವ ಮೃದು ವಚನಗಳು ಇದ್ದುದಕ್ಕಾಗಿ ಪ್ರಥಮಬಾರಿಗೆ ಪೂಜ್ಯ ಮಹಾಸ್ವಾಮಿಗಳವರ ಉದಾರಗುಣಕ್ಕೆ ಮನಸಾರೆ ತಲೆಬಾಗಿದೆನು. ಕೊಪ್ಪಳದಲ್ಲಿ ಒಂದು ವಾರ ನಿಲ್ಲಬೇಕಾಯಿತು. ಅಲ್ಲಿ ಪ್ರತಿ ದಿನವೂ ನನ್ನ ಕೀರ್ತನೆಗಳು ಏರ್ಪಾಡಾಗಿದ್ದು, ನನ್ನೊಂದಿಗೆ ಅನೇಕ ಸಹಪಾಠಿ ವಿದ್ವಾಂಸರು ಇದ್ದುದರಿಂದ ಜನತೆಗೆ ಹಾಗೂ ಮಹಾಸ್ವಾಮಿಗಳಿಗೆ ನನ್ನ ಕೀರ್ತನಗಳು ಮನಸಾರೆ ಹಿಡಿಸಿದ್ದವು. ಗವಿಮಠವಂತೂ ನನ್ನ ಪಾಲಿಗೆ ಮಹಾಮನೆಯಂತೆ ಆಗಿತ್ತು.

ಕೊಪ್ಪಳವು ಕನ್ನಡ ನಾಡಿನ ಚರಿತ್ರೆಯಲ್ಲಿ ಬಹಳ ಪ್ರಸಿದ್ಧವಾಗಿದೆ. ನೃಪತುಂಗನ ಕವಿರಾಜ ಮಾರ್ಗದಲ್ಲಿ "ಮಹಾ ಕೊಪ್ಪಣನಗರ" ಎಂಬ ಉಲ್ಲೇಖವಿದೆ. ಜೈನರು ಕರ್ನಾಟಕದಲ್ಲಿ ಶ್ರವಣಬೆಳಗೊಳ ಮತ್ತು ಕೊಪ್ಪಳ ಕ್ಷೇತ್ರಗಳನ್ನು "ದಕ್ಷಿಣ ಕಾಶಿ" ಎಂದು ನಂಬುತ್ತಾರೆ. ಅಶೋಕಮಹಾರಾಜನ ಕಾಲದಲ್ಲಿ ಕೊಪ್ಪಳವು ಬೌದ್ಧಧರ್ಮಕ್ಕೂ, ಅನಂತರ ಜೈನಧರ್ಮಕ್ಕೂ ಕೇಂದ್ರವಾಗಿತ್ತು.

ಇತ್ತೀಚೆಗೆ ಗವಿಮಠದ ಪ್ರಭಾವದಿಂದ ಕೊಪ್ಪಳವು ವೀರಶೈವ ಧರ್ಮಕ್ಕೂ ಕೇಂದ್ರಸ್ಥಾನವೆನಿಸಿದೆ. ಈ ಗವಿಮಠದ ಪೂರ್ವದ ಗುರುಗಳು ಬಸವಾದಿ ಪ್ರಮಥರಿಗಿಂತ ಪೂರ್ವದವರಾದ ಕಾಶಿ ಚರವರಿಯ ರುದ್ರಮುನಿ ಶಿವಾಚಾರ್ಯರೆಂದು ಶ್ರೀ ಮಠದ ಐತಿಹ್ಯವು ಹೇಳುತ್ತಿದೆ.[೧] ಈ ರುದ್ರಮುನಿ ಶಿವಾಚಾರ್ಯರು ಕಾಶೀ ಜಂಗಮವಾಡಿ ಮಠಕ್ಕೆ ಸೇರಿದವರೆಂದೂ ಅವರು ಅಲ್ಲಿಂದ ಪಂಪಕ್ಷೇತ್ರಕ್ಕೆ ಬಂದು, ಅಲ್ಲಿಂದ ಕೊಪ್ಪಳಕ್ಕೆ ದಯಾಮಾಡಿಸಿದರೆಂದೂ ಆ ಕ್ಷೇತ್ರ ಸಂದರ್ಶನವಾದ ಕೂಡಲೇ ಅವರೇ ಈ ಗವಿಮಠದ ಮೂಲ ಪುರುಷರೆಂದು, ಅನಂತರ ಕೊಪ್ಪಳದ ಪೂರ್ವಕ್ಕೆ ಕಂಗೊಳಿಸುವ ಗವಿಗೆ ಬಂದು ವಾಸಮಾಡಿದರೆಂದೂ, ಆಮೇಲೆ ಮಸ್ಕಿಯ ಶರಣ ಹೋಳಿಯ ಹಂಪಯ್ಯನು ಕೊಪ್ಪಳಕ್ಕೆ ಬಂದಾಗ ಶ್ರೀ ಸ್ವಾಮಿಗಳ ದರ್ಶನಮಾಡಿಕೊಂಡು ಈ ಗವಿಯ ಮುಂಭಾಗದ ಕಟ್ಟಡವನ್ನು ಕ್ರಿ.ಶ. ೧೦೮೬ರಲ್ಲಿ ಅಂದರೆ ಶಾ.ಶ. ೧೦೦೮ ರಲ್ಲಿ ಕಟ್ಟಿಸಿಕೊಟ್ಟರೆಂದು ಈ ಮಠದಲ್ಲಿರುವ ಶಿಲಾಶಾಸನದಿಂದ ತಿಳಿದುಬರುತ್ತದೆ.

ಈಗ ೧೬ನೇ ಪೀಠಾಧ್ಯಕ್ಷರಾದ ಪೂಜ್ಯ ಮರಿಶಾಂತವೀರ ಮಹಾಸ್ವಾಮಿಗಳಿಗೆ ೧೯೨೨ ರಲ್ಲಿ ಅಧಿಕಾರವಾಯಿತು ಎಂದು, ಪೂಜ್ಯರು ಸುಮಾರು ೭೯ ವರ್ಷ ಕಾಲ ಜೀವಿಸಿ, ಲೋಕೋಪಕಾರಗಳನ್ನು ಮಾಡಿ, ಶ್ರೀಮಠದಲ್ಲಿ ಶಿಕ್ಷಣ, ಶಾಸ್ತ್ರ, ಧರ್ಮಗಳ ಕೇಂದ್ರಗಳನ್ನು ಸ್ಥಾಪಿಸಿ ಮಠದ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

---

೧) "ಗವಿದೀಪ್ತಿ" ಪದ್ಮಶ್ರೀ ಡಾ|| ಬಿ.ಶಿವಮೂರ್ತಿಶಾಸ್ತ್ರೀ ಪುಟ-೩೯-೧೯೭೬

೧೭ನೇ ಪೀಠಾಧಿಪತಿಗಳಿಗೆ ಅಧಿಕಾರವನ್ನು ವಹಿಸಿಕೊಟ್ಟು ೧-೭-೧೯೬೭ ರಂದು ಲಿಂಗೈಕ್ಯರಾದ ಬಗ್ಗೆ ವಿಷಯವನ್ನು ತಿಳಿದುಕೊಂಡೆವು. (ಶ್ರೀ ಮಠದ ಚರಿತ್ರೆಯನ್ನು ಗವಿಸಿದ್ದೇಶ್ವರ ಪುರಾಣದಲ್ಲಿ ಓದಬಹುದು) ಸುಮಾರು ೬೩ ಶಾಖಾ ಮಠಗಳನ್ನು ಹೊಂದಿದ ಈ ಕೊಪ್ಪಳ ಮಠವು ಒಂದು ಸಂಸ್ಥಾನ ಪೀಠವೆನಿಸಿಕೊಳ್ಳಲು ಅರ್ಹವಾಗಿದೆ.

ನಾನು ಮಠದಲ್ಲಿದ್ದಾಗ ಪೂಜ್ಯ ಮರಿಶಾಂತವೀರ ಜಗದ್ಗುರುಗಳಲ್ಲಿ ಜಿಜ್ಞಾಸುವಾಗಿ ಮಾತುಕತೆ ನಡೆಸುತ್ತಿದ್ದೆನು. ಅವರಲ್ಲಿ ನಾನು ಮನಗಂಡ ಒಂದು ಮಹಾತ್ ಗುಣ ಏನೆಂದರೆ – ಅವರು ವೀರಶೈವ ಸಮಾಜದಲ್ಲಿ ಉಂಟಾಗಿರುವ ಗುರುವಿರಕ್ತರ ಕಲಹದ ಬಗ್ಗೆ ಬಹಳವಾಗಿ ಮನ ನೊಂದಿದ್ದರು. ಅವರ ಈ ಅನುಕಂಪವನ್ನು ನೋಡಿ, ಅವರ ಬಗ್ಗೆ ಹೆಚ್ಚಿನ ಗೌರವವುಂಟಾಯಿತು. ಅಷ್ಟಾವರ್ಣದ ಅಂಗವಾಗಿ ಗುರು ಮತ್ತು ಜಂಗಮ ತತ್ವದಲ್ಲಿ ಹೆಚ್ಚು ಕಡಿಮೆ ಮಾಡುವರು ವೀರಶೈವ ಸಿದ್ಧಾಂತಕ್ಕೆ ವಿರೋಧವಾದುದು ಎಂಬುದು ಶ್ರೀ ಜಗದ್ಗುರು ಮರಿಶಾಂತವೀರ ಮಹಾಸ್ವಾಮಿಗಳವರ ಅಭಿಪ್ರಾಯವಾಗಿತ್ತು. "ಏಕಮೂರ್ತಿಃ ತ್ರಯೋಭಗಂ ಗುರುಲಿಂಗಂತು ಜಂಗಮಃ" ಎಂಬ ಶಾಸ್ತ್ರಿವಾಕ್ಯವನ್ನು ಇಲ್ಲಿ ನಾವು ಸ್ಮರಿಸಬಹುದು. ಹಾಗೂ "ಪಟ್ಟವ ಕಟ್ಟಿದ ಬಳಿಕ ಗುಣವನರೆಸುವರೆ" ಎಂಬ ಬಸವಣ್ಣವರ ವಾಕ್ಯದಂತೆ ಲಿಂಗಧಾರಿಗಳ ಪೂರ್ವಾಶ್ರಮದ ಗುಣ ಕರ್ಮಗಳನ್ನು ನೆನೆಸಿ ಮಾತಾಡುವರು ಶರಣ ಧರ್ಮಕ್ಕೆ ವಿರೋಧವಾದುದು. ಶ್ರೀ ಬಸವಣ್ಣನವರು, ಅಲ್ಲಮಪ್ರಭುದೇವರು, ಶಿವಯೋಗಿ ಸಿದ್ಧರಾಮ, ಮಡಿವಾಳ ಮಾಚದೇವರು, ನಿಜ ಶರಣ ಅಂಬಿಗರ ಚೌಡಯ್ಯ ಇವರೆಲ್ಲರೂ ಲಿಂಗಧಾರಿಗಳಾಗುವದಕ್ಕೆ ಮೊದಲು ಬೇರೆಬೇರೆ ಜಾತಿಗಳಿಗೆ ಸೇರಿದ್ದರು. ಅವರು ದೀಕ್ಷಾವಂತರಾಗಿ ಲಿಂಗಧಾರಿಗಳಾದ ಮೇಲೆ ಮಹಾಶರಣರೂ ಮಹಾಶಿವಯೋಗಿಗಳೂ ಎನಿಸಿಕೊಂಡರು. ಆದ್ದರಿಂದ ವೀರಶೈವರೆಲ್ಲರೂ ಸಮಾನಸ್ಕಂದರು, ತಾರತಮ್ಯಸಲ್ಲದು ಎಂದು ಶ್ರೀ ಜಗದ್ಗುರು ಮರಿಶಾಂತವೀರ ಮಹಾಸ್ವಾಮಿಗಳು ನನಗೆ ಬೋಧಿಸಿದರು.

ಮತ್ತೊಂದು ಮಹತ್ವದ ವಿಷಯವಾಗಿ ಮಹಾ ಸ್ವಾಮಿಗಳ ಅಭಿಪ್ರಾಯವು ಬಹಳೇ ಉದಾತ್ತವಾಗಿತ್ತು. ಅನೇಕ ಮಂದಿ ವೀರಶೈವ ವಿದ್ವಾಂಸರು ಕೆಲವರು ಸಂಸ್ಕೃತ ಗ್ರಂಥಗಳನ್ನು, ಕೆಲವರು ವಚನ ಶಾಸ್ತ್ರಾದಿ ಕನ್ನಡ ಗ್ರಂಥಗಳನ್ನು ಬೆಂಬಲವಿತ್ತು ಮಾತಾಡುವದನ್ನು ಶ್ರೀಗಳು ನೊಂದುಕೊಂಡರು. ಭಾಷೆಗಳಿಗೆ, ಸಾಹಿತ್ಯಕ್ಕೆ ಜಾತಿ ಎಲ್ಲಿದೆ? ಸರಸ್ವತಿಗೆ ಭಾಷೆಭೇದ ಇಲ್ಲ, ತಾರತಮ್ಯ ಸಲ್ಲದು ಎಂದು ಜಗದ್ಗುರುಗಳ ಉದಾತ್ತ ಭಾವಗಳನ್ನು ಕೇಳಿ ನನಗೆ ತುಂಬಾ ಸಂತೋಷವಾಯಿತು. ಅವರ ಈ ಉದಾತ್ತ ಭಾವನೆಗಳನ್ನು ಅರಿತು ಅರ್ಥ, ಮಾಡಿಕೊಂಡು ಆಚರಿಸಿದಾಗ ವೀರಶೈವ ಸಮಾಜಕ್ಕೆ ಮುಕ್ತಿಯೆಂದು ನಾನು ತಿಳಿದುಕೊಂಡೆನು. ಶ್ರೀ ಮಹಾಸ್ವಾಮಿಗಳ ಇನ್ನೊಂದು ಅಭಿಪ್ರಾಯ – ಈಶ್ವರ ಸೃಷ್ಠಿಯಲ್ಲಿ ನರಜನ್ಮ ಬಹಳ ದೊಡ್ಡದು. "ನರಜನ್ಮದಿಂದ ಇಹದೊಳು ಮಿಗಿಲುಂಟೆ" ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದನ್ನು, "ಮಾನವ ಜನ್ಮವು ಬಹಳದೊಡ್ಡದು ಇದನ್ನು ಹಾನಿಮಾಡಲುಬೇಡಿ ಹುಚ್ಚಪ್ಪಗಳಿರಾ" ಎಂದು ಶ್ರೀ ಪುರಂದರ ದಾಸರು ಹೇಳಿದ್ದನ್ನು, ಸ್ಮರಿಸಿಕೊಂಡು ಪ್ರತಿಯೊಬ್ಬ ಮಾನವನೂ ಈ ಧರ್ಮ ನೀತಿಗಳನ್ನು ಅರಿತು ಬಾಳುವದು ಅಗತ್ಯವಿದೆ ಎಂದರು. ಸತ್ಯ, ನೀತಿ, ಕ್ಷಮಾ, ದಯೆ, ದಾಕ್ಷಿಣ್ಯ, ಪರೋಪಕಾರ, ದೈವಭಕ್ತಿ ಮೊದಲಾದ ಸದ್ಗುಣಗಳನ್ನು ನಮ್ಮ ಜನರು ಅಳವಡಿಸಿಕೊಂಡು ನಡೆಯುವದು ಅಗತ್ಯ ಅಂತೆಯೇ ಬಸವಾದಿ ಶಿವಶರಣರು ನಡೆನುಡಿ ಒಂದಾದರೆ ಈ ಜನ್ಮವೇ ಕಡೆ, ಎಂಬ ನಾಡುನುಡಿಯನ್ನೇ ಹೇಳುತ್ತ, ಉದಾತ್ತವಾದ ಮಾರ್ಗಗಳನ್ನು ಆಚರಿಸಿ ತೋರಿಸಿದ್ದಾರೆ, ಎಂದು ಹೇಳುತ್ತ ನಾವು ಅಹಂಕಾರ, ಮಮಕಾರಗಳಿಗೆ ಈಡಾಗದೆ ಶರಣ ಜೀವನವನ್ನು ನಡೆಸಿ ಕೃತಾರ್ಥರಾಗಬೇಕಾಗಿದೆ ಎಂದು ಪೂಜ್ಯ ಜಗದ್ಗುರುಗಳು, ಅಡಿಗಡಿಗೆ ಹೇಳುತ್ತಿದ್ದರು, ಎಂದು ಲೇಖಕರು ಸ್ಮರಿಸಿಕೊಳ್ಳುತ್ತಾರೆ.

**ಪಂಡಿತ ಅಮರನಾಥಶಾಸ್ತ್ರಿಗಳು ಹಿರೇಮಠ, ಅವರ ಅಭಿಪ್ರಾಯ :-**

ಕೊಪ್ಪಳ ಶ್ರೀ ಗವಿಮಠವು ಅನ್ನ-ಜ್ಞಾನ ದಾಸೋಹಗಳಿಗೆ ಹೆಸರಾಂತ ಪುಣ್ಯಕ್ಷೇತ್ರ. ಅಮೃತ ಸಮಾನವಾದ ಶ್ರೀಗುರು ಪ್ರಸಾದವನ್ನು ಸ್ವೀಕರಿಸಿ ಶಿಕ್ಷಣ ಪಡೆದು ಅನೇಕರು ನಾನಾ ಕ್ಷೇತ್ರಗಳಲ್ಲಿ ತಮ್ಮ ಫಲಪ್ರದ ಸೇವೆ ಸಲ್ಲಿಸುತ್ತಿದ್ದಾರೆ, ಶ್ರೀ ಗವಿಮಠದ ಪರ್ವತ ಶಿಲೆಯು ಶಿವಯೋಗಿ ಪುಂಗವರ ವಾಸ್ತವ್ಯದ ಪುಣ್ಯಸ್ಪರ್ಶದಿಂದ ಪುನೀತವಾಗಿದೆ. ಅಲ್ಲಿ ಹೋದ ಭಕ್ತರ ಹೃತ್ತಾಪವನ್ನು ನಿವಾರಿಸಿ ಆತ್ಮಶಾಂತಿಯನ್ನು

ನೀಡುವ ನಿರ್ಮಲ ವಾತಾವರಣ ಕಲ್ಪಿತವಾಗಿದೆ. ಆಗಾಗ್ಗೆ ಕೊಪ್ಪಳಕ್ಕೆ ಹೋದಾಗಲೆಲ್ಲ ಶ್ರೀ ಗವಿಮಠಕ್ಕೆ ದರ್ಶನಕ್ಕೆ ಹೋಗುತ್ತಿದ್ದೆ. ಒಮ್ಮೆ ಸಹಜವಾಗಿ ಮಠಕ್ಕೆ ಹೋದಾಗ್ಗೆ ಶಾಂತ ಮುಖ ಮುದ್ರೆ, ಯೋಗಸಾಧನೆಯ ದಿವ್ಯ ತೇಜಸ್ಸು, ವೀರ ವೈರಾಗ್ಯ ಸೂಸುವ ಜ್ಞಾನನೇತ್ರಗಳು, ಸದಾ ಸಂತೃಪ್ತಿಯ ಮುಗುಳು ನಗೆಯ ಶ್ರೀ ಮರಿಶಾಂತವೀರ ಮಹಾಸ್ವಾಮಿಗಳ ದರ್ಶನವಾಯಿತು. ಅವರ ಅಮೃತ ವಾಣಿಯಿಂದ ಶಾಸ್ತ್ರಶ್ರವಣ ಮಾಡಿಕೊಂಡೆವು. ಮುಂದೆ ಪದೇ ಪದೇ ಅವರ ದರ್ಶನ ಪಡೆದದ್ದರಿಂದ ಆ ದರ್ಶನ "ಆತ್ಮೀಯತೆಯಲ್ಲಿ" ಪರಿವರ್ತಿತವಾಯಿತು.

ಮತ್ತೊಮ್ಮೆ ಶ್ರೀಗಳ ದರ್ಶನವಾದದ್ದು ಕೊಪ್ಪಳ ಸಮೀಪ ಇರುವ ಮುದ್ದಾಬಳ್ಳಿ ಗ್ರಾಮದಲ್ಲಿ ಆ ಊರಲ್ಲಿ ಶ್ರೀ ಚಂದ್ರಮೌಳೇಶ್ವರ ದೇವಸ್ಥಾನವಿದೆ, ಹಾಗೂ ಮುದ್ದಾಂಬಾ ದೇವಸ್ಥಾನವಿದೆ. ಆದೇವಿಯ ಹೆಸರು ಮುದ್ದಾಂಬಾ ಇರುವದರಿಂದಲೇ ಆ ಊರಿಗೆ ಮುದ್ದಾಬಳ್ಳಿ ಎಂದು ಹೆಸರು ಬಂದಿರಬೇಕು. ಶ್ರೀಗಳು ಆಗ್ಗೆ ಸಕಲ ವೀರಶೈವರಿಗೆ ಲಿಂಗಧಾರಣೆ ಮಾಡಿಸಿ, ಶ್ರೀ ಚಂದ್ರಮೌಳೇಶ್ವರ ದೇವಸ್ಥಾನದಲ್ಲಿ ಪ್ರವಚನವನ್ನು ಏರ್ಪಡಿಸಿದ್ದರು. ನಾನೂ ಸಹ ಅಷ್ಟಾವರ್ಣಗಳ ಬಗ್ಗೆ ಮಾತಾಡಿದೆನು. ಉಳಿದ ವಿದ್ವಾಂಸರು ಮಾತನಾಡಿದರು, ನಂತರ ಶ್ರೀಗಳು ಚಂದ್ರಮೌಳೇಶ್ವರ ಲಿಂಗದ ವಿಷಯವಾಗಿ ಆಶೀರ್ವಚನ ನೀಡಿದರು. ಹಿಂದೆ ಶ್ರೀ ಜಗದ್ಗುರು ರೇಣುಕಾಚಾರ್ಯರು ಅದ್ವೈತಮತ ಪ್ರತಿಪಾದಕರಾದ ಶ್ರೀ ಶಂಕರಾಚಾರ್ಯರಿಗೆ ವೀರಶೈವ ಷಟಸ್ಥಲೋಪದೇಶ ಮಾಡಿ ಚಂದ್ರಮೌಳೇಶ್ವರ ಲಿಂಗ ಪ್ರಧಾನ ಮಾಡಿದ ಶುಭ ಪ್ರಸಂಗವನ್ನು ಶ್ರೀಗಳ ವಿದ್ವತ್‌ಪೂರ್ಣ ಭಾಷಣದಲ್ಲಿ ಕೇಳಿ ಪುನೀತನಾದೆನು. ನಂತರ ವೀರಶೈವ ಭಕ್ತ ಸಮೂದಾಯವನ್ನು ಉದ್ದೇಶಿಸಿ ವೀರಶೈವನು ಚರಮಶರೀರಿ ಎಂದೂ ಅಪ್ರತಿಹತ ಶಿವದ್ರತಿಎಂದೂ ಬಾಃಯ ಲಿಂಗ ಪೂಜೆಯಿಲ್ಲದೆ ಅಂತರ್ಲಿಂಗಾನು ಸಂಧಾನ್ವೊ ಅಳವಡದೆಂದೂ ನಿಗಮಾಗವು ಪ್ರಮಾಣಗಳಿಂದ ಪಂಡಿತ ಪಾವನರಿಗೂ ಸುವೇದ್ಯವಾಗುವಂತೆ ಲಿಂಗಧಾರಣೆಯ ಮಹತ್ವವನ್ನು ತಿಳಿಸಿದರು.

ಒಮ್ಮೆ ಗೊಂಡಬಾಳ ಗ್ರಾಮದಲ್ಲಿ ಭಕ್ತರೊಬ್ಬರ ಲಗ್ನಕ್ಕೆ ಶ್ರೀಗಳು ದಯಮಾಡಿಸಿದ್ದರು. ಆಗ್ಗೆ ನಾನೂ ಹೋಗಿದ್ದೆ, ಶ್ರೀಗಳ ದರ್ಶನವಾಯಿತು. ಮದುವೆಯಾದ ನಂತರ ರಾತ್ರಿ ಕೀರ್ತನಕಾರರಾದ ಹಿರೇಹಾಳ ವೀರಯ್ಯನವರು ಶ್ರೀಗಳ ಸನ್ನಿಧಿಯಲ್ಲಿ ಅನಸೂಯಾ ದೇವಿಯ ಕೀರ್ತನ ಮಾಡಿದರು. ಶ್ರೀಗಳ ಅಪ್ಪಣೆಯಂತೆ ನಾನೂ ಸಹ ಸತಿಧರ್ಮದ ವಿಷಯವಾಗಿ ಪ್ರವಚನ ಮಾಡಿದೆನು. ಅಂದು ಶ್ರೀಗಳು ಅನಸೂಯೆ, ಎಂಬ ನಾಮದ ಅರ್ಥವನ್ನು ಸುಲಲಿತವಾಗಿ ವಿವರಿಸಿ, ಆಕೆಯಲ್ಲಿದ್ದ ಅಸೂಯೆ ಪಡದ ಗುಣ ಮತ್ತು ಪತಿವ್ರತಗಳಿಂದ ತ್ರಿಮೂರ್ತಿಗಳೂ ಸಹ ಶಾಪಗ್ರಸ್ತ ಶಿಶುಗಳಾಗಿ ಪರಿವರ್ತಿತರಾದರು. ಆಕೆಯ ಆದರ್ಶವನ್ನು ಎಲ್ಲ ಸ್ತ್ರೀಯರೂ ಅನುಸರಿಸಬೇಕೆಂದು ಬೋಧಿಸಿದರು.

ಅಲ್ಲದೆ ನಾನು ರಚಿಸಿದ ದಾರುಕಾಚಾರ್ಯ ಶತಕ, ಘಂಟಾಕರ್ಣ ಶತಕಗಳನ್ನು ಸನ್ನಿದಿಯವರಿಗೆ ಮುಟ್ಟಿಸಿದೆನು. ಆ ಗ್ರಂಥಗಳನ್ನು ಓದಿ ಶ್ರೀಗಳು ಸಂತೋಷಪಟ್ಟದ್ದಲ್ಲದೆ, "ನಾವು ನಿಜಲಿಂಗಶತಕ, ಸೋಮೇಶ್ವರ ಶತಕ ಓದಿದ್ದೆವು, ಮಹಾಕವಿ ಷಡಕ್ಷರ ದೇವನ ಶೈಲಿಯ ವೃತ್ತಗಳು ಶಬ್ದಗಾಂಭೀರ್ಯದಿಂದ ಕೂಡಿವೆ" ಎಂದು ಬೆನ್ನುತಟ್ಟಿ ಆಶೀರ್ವದಿಸಿದ್ದರು.

ಒಮ್ಮೆ ನಮ್ಮ ಶಿಷ್ಯರಾದ ಬಸವಂತರಾವ ನಾಡಗೌಡರ ನನಗೊಂದು ಪತ್ರಬರೆದು "ಘನಲಿಂಗ ಚಕ್ರವರ್ತಿಗಳಾದ ಅಮರನಾಥ ಶಾಸ್ತ್ರಿಗಳಿಗೆ " ಅಂತಾ ಒಕ್ಕಣಿಕೆ ಇತ್ತು. ಅದು ಅಡ್ರೆಸ್ ತಪ್ಪಿ ಗವಿಮಠಕ್ಕೆ ಹೋಗಿತ್ತು, ಅಲ್ಲಿ ಇದರ ಬಗ್ಗೆ ಚರ್ಚೆನಡೆದು ಈ ರೀತಿ ಬರೆದುದು ತಪ್ಪು ಅಂತಾ ಜಿಜ್ಞಾಸೆ ಎದ್ದಿತು ಶ್ರೀಗಳ ಹತ್ತಿರ ಈ ವಿಷಯ ಚರ್ಚಿತವಾದಾಗ ಶ್ರೀಗಳು ಇದರಲ್ಲಿ ತಪ್ಪೇನಿದೆ? ಶಾಸ್ತ್ರಿಗಳು ಗುರುಸ್ಥಲ ಮಠಾಧೀಶರೂ ಶಿವದೀಕ್ಷಾ ಸಂಪನ್ನರೂ, ಲಿಂಗಪೂಜಾಲೋಲರೂ ಇರುವರು. ಯಾರು ಈ ದೇಹದಲ್ಲಿಯ ನವಚಕ್ರಗಳಲ್ಲಿ ನವಲಿಂಗ ಸಕೀಲ ಸಿದ್ಧಾಂತವನ್ನು ತಿಳಿದು ವರ್ತಿಸುವರೋ ಅವರು ಘನಲಿಂಗ ಚಕ್ರವರ್ತಿ. ಆ ಪದಸಮುಚ್ಚಯಕ್ಕೆ ಶಾಸ್ತ್ರಿಗಳು ಅರ್ಹರು" ಎಂದು ತಮ್ಮ ನಿರ್ಣಯಕೊಟ್ಟು ಎಲ್ಲರನ್ನು ವಿಸ್ಮಿತರನ್ನಾಗಿ ಮಾಡಿದರು.

ಶ್ರೀಗಳಲ್ಲಿ ಗುರು ವಿರಕ್ತರೆಂಬ ಭೇದಭಾವದ ಸೋಂಕೇ ಇರಲಿಲ್ಲ. ಇಬ್ಬರಲ್ಲಿಯೂ ಸಮಾನವಾದ ಗೌರವವು ಅವರಿಂದ ಸಲ್ಲುತ್ತಿತ್ತು. ಯಾರಾದರೂ ಅವರ ಸನ್ನಿಧಿಯಲ್ಲಿ ಈ ವಾದವನ್ನು ಎತ್ತಿದರೆ ಮೂಲದಲ್ಲಿಯೇ ಅದಕ್ಕೆ ಸಮಾಧಾನ ಕೊಡುತ್ತಿದ್ದರು. ವೀರಶೈವಸ್ಥಾಪಕರು ಜಗದ್ಗುರು ಪಂಚಾಚಾರ್ಯರೆಂದೂ ವಿರಕ್ತ ಜಗದ್ಗುರುಗಳು ಪ್ರಚಾರಕರೆಂದೂ ಹೇಳುತ್ತಿದ್ದರು. ವಿರಕ್ತಸ್ವಾಮಿಗಳು ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಗಳಂತೆ ಸಂಚರಿಸಿ ಭಕ್ತರಲ್ಲಿಯ ಕುಂದು ಕೊರತೆಗಳನ್ನು ನಿವಾರಿಸಿ ಧರ್ಮ ಜಾಗೃತಿ ಮಾಡಬೇಕೆಂದೂ ಅವರ ವಿಚಾರವಾಗಿತ್ತು. ಗುರುವರ್ಗವು ಭಕ್ತರ ಸಂಸ್ಕಾರಗಳನ್ನು ನೆರವೇರಿಸಿ ಸದಾ ಭಕ್ತರೊಂದಿಗೆ ನೆಲಸಿ ಅವರನ್ನು ಉದ್ಧರಿಸುವದುಕರ್ತವ್ಯಎಂದು ಬೋಧಿಸುತ್ತಿದ್ದರು. ಶ್ರೀ ಗವಿಮಠದ ಮಹಾ ರಥೋತ್ಸವಕಾಲಕ್ಕೆ ವಿದ್ವಜ್ಜನರ ಭಾಷಣಗಳನ್ನು ಏರ್ಪಡಿಸಿ ಶಿವಾನುಭವ ಗೋಷ್ಠಿಯನ್ನು ಏರ್ಪಡಿಸುತ್ತಿದ್ದರು. ಅನೇಕ ವಿದ್ವಜ್ಜನರು, ಶಾಸ್ತ್ರಿಗಳೂ, ಸ್ವಾಮಿಗಳೂ ಭಾಗವಹಿಸುತ್ತಿದ್ದರು, ಎಲ್ಲರಿಗೂ ಸಮಾನ ರೀತಿಯ ಸನ್ಮಾನವನ್ನು ಮಾಡುತ್ತಿದ್ದರು, ಒಮ್ಮೆ ಇಂಥ ಗೋಷ್ಠಿಯಕಾಲಕ್ಕೆ ದ್ಯಾಂಪುರದ ಶ್ರೀ ಚನ್ನಕವಿಗಳು ಒಂದು ಕಿರು ಹೊತ್ತಿಗೆಯನ್ನು ಪ್ರಕಟಿಸಿದರು. ಅದು ತಾಯಿ–ಮಗಳ ಸಂವಾದ ರೂಪದಲ್ಲಿತ್ತು. ಅದರಲ್ಲಿ ಒಂದು ಚರಣ ಹೀಗಿತ್ತು,

ನಿರಧಿಕರಣ ದೀಕ್ಷೆಯನ್ನು ಗುರುಗಳಿಲ್ಲದೆ
ಹರನೆ ಮಾಡುತಿಹನು ಮಗಳೆವೇತಮತವಿದು,

ಇದರ ಬಗ್ಗೆ ಚರ್ಚೆ ನಡೆಯಿತು. ಶ್ರೀಗಳು ಇದಕ್ಕೆ ಶಾಸ್ತ್ರ ಆಧಾರವೇನಿದೆ ಎಂದು ಪ್ರಶ್ನೆಮಾಡಿದರು. ಶ್ರೀ ಚನ್ನ ಕವಿಗಳು ಅನೇಕ ಪುರಾಣಗಳನ್ನು ರಚಿಸಿದ ಗಣ್ಯಕವಿಗಳಾದರೂ ಕವಿತ್ವದ ಓಘದಲ್ಲಿ ರಚಿಸಿದ ಮೇಲಿನ ವಿಷಯಕ್ಕೆ ಆಧಾರ ಕೊಡಲಾಗಲಿಲ್ಲ. ವಿಶ್ವದ ಎಲ್ಲ ಮತಗಳಿಗಿಂತ ವೀರಶೈವವು ಕೆಲವೊಂದು ರೀತಿಯಿಂದ ವೈಶಿಷ್ಟ್ಯಪೂರ್ಣವಾಗಿದೆ. ಈ ಮತದಲ್ಲಿ ಗುರುಗಳಿಗೆ ಅಧಿಕ ಪ್ರಾಧಾನ್ಯ ಕೊಡಲಾಗಿದೆ, ಜೀವಿಯ ಹುಟ್ಟಿನಿಂದ ಸಾವಿನವರೆಗೆ ಶ್ರೀಗುರುವಿನ ಮಾರ್ಗದರ್ಶನದಲ್ಲಿಯೇ ಆಧ್ಯಾತ್ಮಿಕ ಪ್ರಗತಿ ಹೊಂದುತ್ತ ಸಾಗಬೇಕು. ಕಲಬುರುಗಿ ಶ್ರೀ ಶರಣ ಬಸವೇಶ್ವರರಂಥ ಮಹಾತ್ಮರೂ ಸಹ ನಿರಂತರವಾಗಿ ಗುರುವಿನ ಆಶ್ರಯದಲ್ಲಿಯೇ ಮುಂದುವರೆದರು.

"ನ ಗುರೋರಧಿಕಂ" ಎಂದು ಶೃತಿ ಸಾರುತ್ತಿರಲು, ಗುರುವಿಲ್ಲದೆ ಶಿವನೇ ಅದು ಹೇಗೆ ದೀಕ್ಷೆಗೈಯುವನು? ಎಂದು ಆ ಸಮಯದಲ್ಲಿ ಚರ್ಚಿಸಲಾಯಿತು. ಈ ರೀತಿ ವಿಕ್ಷಿಪ್ತ ವಿಚಾರಗಳನ್ನು ಮಹಾಕವಿಗಳು ತಮ್ಮ ಕೃತಿಗಳಲ್ಲಿ ಬರೆಯುವದರಿಂದ ಮುಂದಿನ ಪೀಳಿಗೆಯು ಸಂಶಯದ ಸುಳಿಯಲ್ಲಿ ಸಿಲುಕುವದು. ಸಾಮಾನ್ಯ ಜನತೆಗೆ ಮಾರ್ಗದರ್ಶಕನೊಬ್ಬನು ಬೇಕೇಬೇಕು. ಅವನೇ ಗುರುವು, ಎಂದು ಶ್ರೀಗಳು ಅಪ್ಪಣೆ ಕೊಡಿಸಿದರು. [೧]

ಮತ್ತೊಮ್ಮೆ ಮುದ್ದಾಬಳ್ಳಿಯಲ್ಲಿಯೇ ಶ್ರೀ ಬಸನಗೌಡರ ಮನೆಯಲ್ಲಿ ಮಾವನೂರ ಚನ್ನಬಸವ ಕವಿ ಕೃತ ಶ್ರೀಶರಣ ಬಸವೇಶ್ವರ ಪುರಾಣದ ಮಹಾಮಂಗಳಕ್ಕೆ ಶ್ರೀಗಳು ದಯಾಮಾಡಿಸಿದ್ದರು. ಪುರಾಣ ಮಂಗಲದ ಕಾಲಕ್ಕೆ ನಾನೂ ಹೋಗಿದ್ದೆ. ಮುದ್ದಾಬಳ್ಳಿಯ ಸೊಪ್ಪಿಮಠದ ಸಿದ್ಧಯ್ಯನವರು ಸುಶ್ರಾವ್ಯವಾಗಿ ಓದುತ್ತಿದ್ದರು. ಶ್ರೀಗಳ ಸನ್ನಿಧಿಯಲ್ಲಿ ಪುರಾಣದ ಮಹಾಮಂಗಲವಿದ್ದುದರಿಂದ ವಿಶೇಷತೆ ಪ್ರಾಪ್ತವಾಗಿತ್ತು. ಶ್ರೀಗಳ ಅಪ್ಪಣೆಯಂತೆ ನಾನೂ ಪ್ರವಚನ ಮಾಡಿದೆ. ಶ್ರೀ ಬಸನಗೌಡರ ಭಕ್ತಿಯನ್ನು ವಿಸ್ತಾರವಾಗಿ ಕೊಂಡಾಡಿದೆನು. ಶ್ರೀ ಬಸನಗೌಡರ ಮನೆಯಲ್ಲಿಯ ಶ್ರೀ ರೇವಣಸಿದ್ಧೇಶ್ವರ ಮೂರ್ತಿಯನ್ನು ಶ್ರೀ ಗವಿಮಠದ ರಥೋತ್ಸವಕಾಲಕ್ಕೆ ಉತ್ಸವ ಮೂರ್ತಿಯನ್ನಾಗಿ ಒಯ್ಯುವದರಿಂದ, ಶ್ರೀ ಗವಿಸಿದ್ಧೇಶ್ವರ ಹಾಗೂ ಶ್ರೀ ರೇವಣಸಿದ್ಧೇಶ್ವರರಲ್ಲಿ ಭೇದವಿಲ್ಲವೆಂದು ವ್ಯಕ್ತವಾಗುವದೆಂದು ಹೇಳಿದೆ. ಪ್ರತಿ ಶ್ರಾವಣದಲ್ಲಿ ಶಿವಭಕ್ತ ಕಥಾಶ್ರವಣ ಮಾಡಿಸುವ ಪವಿತ್ರಕಾರ್ಯವನ್ನು ಶ್ರೀಗೌಡರು ಮಾಡುತ್ತ ಬಂದಿರುವರು. ಹಾಗೆಯೇ ಶ್ರೀಗಳಲ್ಲಿ ಅನನ್ಯಭಕ್ತಿಭಾವ ಹೊಂದಿರುವರು. ಇದರಿಂದ ಅವರಮನೆತನಕ್ಕೆ ಶ್ರೇಯಸ್ಸು ಪ್ರೇಯಸ್ಸುಗಳುದೊರೆಯುವವು ಎಂದು ಪ್ರತಿಪಾದಿಸಿದೆ. ಅದೇ ಕಾಲಕ್ಕೆ ಶ್ರೀ ಮರಿಶಾಂತವೀರ ಮಹಾಸ್ವಾಮಿಗಳ ಬಗ್ಗೆ ಒಂದು ಕವನ ಹಾಡಿದೆನು.

ಆಲದ ಬೀಜಂ ಸಿಡಿದು ವಿ ।
ಶಾಲ ಭೂಜಮಾಗಿ ನೆರಳನೀವುದು ನಿಜದಿಂ ।
ದಾಲೋಕಿಸಲೆಳೆಗರು ತಾಂ ।
ಮೇಲಾದೆತ್ತಹುದು 'ಮರಿ'ಯ ನಾಮಂ ಧಾಮಂ ॥೧॥

---

೧. 'ಗವಿದಿಪ್ತಿ'- ಲೇ॥ ಅಮರನಾಥಶಾಸ್ತ್ರಿಗಳು ಹಿರೇಮಠ ಪು ೪೯-೧೯೭೬

ತನುವಿಗುದಧಿ ಸಮ ಶಾಂತಂ ।

ಮನಕೆ ಮಲಯ ಮಂದ ಪವನದಂದದಿ ಶಾಂತಂ ॥

ಜನಿಸುವದುವೀರ ರಸಮದು ।

ತಣಿಪುದು ಮರಿಶಾಂತವೀರಯೋಗಿಯ ವಚನಂ ॥೨॥

ಶ್ರೀಗಳು ತಮ್ಮ ಆಶೀರ್ವಚನದಲ್ಲಿ ನನ್ನನ್ನು ಆಶುಕವಿ ಎಂದು ಕರೆದು ಉತ್ಪ್ರೇಕ್ಷೆ ಮಾಡಿದರು.

ಜ.ಶ್ರೀ ಮರಿಶಾಂತವೀರ ಮಹಾಸ್ವಾಮಿಗಳು ತಮ್ಮಲ್ಲಿಯ ಆಯುರ್ವೇದ ವಿದ್ಯೆಯನ್ನು ಲೋಕ ಕಲ್ಯಾಣಕ್ಕೆ, ಭಕ್ತರ ಉದ್ಧಾರಕ್ಕಾಗಿ ಮೀಸಲಿರಿಸಿದರು. ಆಯುರ್ವೇದ ಶಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಶ್ರೀ ತಿಮ್ಮಪ್ಪ ಮಾಳೆಕೊಪ್ಪ ಎನ್ನುವವರಿಗೆ ಪುಪ್ಪುಸಕ್ಕೆ ಕ್ಷಯರೋಗ ಬಂದಿತ್ತು. ಯಾವ ವೈದ್ಯರಿಂದಲೂ ಗುಣವಾಗದೇ ಮರಣೋನ್ಮುಖನಾಗಿದ್ದನು. ಆ ರೋಗಿಯ ದುರ್ವಾಸನೆ ವಿಪರೀತವಾಗಿದ್ದರಿಂದ ಬಂಧುಬಾಂಧವರಿಗೂ ಬೇಸರವಾಗಿದ್ದನು. ಕೊನೆಗಳಿಗೆಯಲ್ಲಿ ಆತನನ್ನು ಶ್ರೀಗಳ ಸನ್ನಿಧಿಯಲ್ಲಿ ತಂದು ಹಾಕಿದರು. ಶ್ರೀಗಳು ಕೊಟ್ಟ ಔಷಧ ಮತ್ತು ಮಠದ ಪ್ರಸಾದ(ಅಂಬಲಿ) ಇವುಗಳಿಂದ ಮೂರು ತಿಂಗಳಲ್ಲಿ ಆತನ ರೋಗವು ಕ್ರಮೇಣ ವಾಸಿಯಾಗಿ, ನಿರೋಗಿಯಾದನು. ಜೀವಿತದ ತನಕ ಆತನು ತಪ್ಪದೇ ಶ್ರೀಗವಿಮಠಕ್ಕೆ ನಡೆದುಕೊಂಡನು. ಹೀಗೆ ಅನೇಕ ರೋಗಿಗಳು ಶ್ರೀಗಳಿಂದ ಗುಣಮುಖರಾಗಿ ಮಠದ ಸದ್ಭಕ್ತರಾದ ಅನೇಕ ಉದಾಹರಣೆಗಳಿವೆ, ಶ್ರೀಗಳ ಪವಾಡವೆಂದೇ ಭಕ್ತರು ಭಾವಿಸಿದ್ದಾರೆ.

ಶ್ರೀಗಳು ಶಿವಯೋಗ ಸಮರ್ಥರಿದ್ದರೆಂದು ಅವರನ್ನು ಕಂಡ ಸರ್ವರಿಗೂ ಸುಪರಿಚಿತವಿದ್ದ ಸಂಗತಿ, ಯೋಗಸಾಧನೆಯ ನಿಯಮದಂತೆ ಅವರು ಆಹಾರ ವಿಹಾರಗಳನ್ನು ಮಿತಗೊಳಿಸಿಕೊಂಡಿದ್ದರು. ದೇಹವು ತಳ್ಳಗೆ ಹಗುರವಾಗಿತ್ತು. ಶಿವಯೋಗದ ಉತ್ತುಂಗ ಶಿಖರವೇರಿದ ಅವರು ಹೆಸರಿಗೆ ತಕ್ಕಂತೆ ಶಾಂತವಾಗಿ ನಿಜಗುಣರು ಹೇಳುವಂತೆ;

ಸಮತೆಯಿಂದಲಿ ಸರ್ವವಿದ ನೀ ಶಮಯಮೆಂದು ।

ಮಮತೆಯಿಂದಲಿ ಭಾವಿಪಖಿಳರ್ಗೆ ।

ಕಮನೀಯಪ್ಪದು ಕೈವಲ್ಯವಾಗುತ್ತಿಹು ।

ದಮಳೇಂದು ವದನೆ ತಿಳಿಯಿದನಿಂತು ।

ಕೈವಲ್ಯವನ್ನು ಕೈವಶಮಾಡಿಕೊಂಡು ನಿಜಜೀವೈಕ್ಯರಾಗಿದ್ದರು. ಅವರು ತಾವು ಬಯಸಿದ್ದನ್ನು ಪಡೆದಿದ್ದರು. ಬ್ರಹ್ಮ ಚಕ್ರದಲ್ಲಿ ಸೋರುವ ಅಮೃತ ಕುಡಿದು ಬಾಳಿದ ವೀರಯೋಗಿಗಳು.

**ಪಂ. ನಾಗಭೂಷಣ ಶಾಸ್ತ್ರಿಗಳ ಸ್ಮರಣೆಯಲ್ಲಿ ಲಿಂ. ಜ.ಶ್ರೀ ಮರಿಶಾಂತವೀರ ಮಹಾಸ್ವಾಮಿಗಳು.**

ಕೊಪ್ಪಳ ನಗರದ ಅನತಿ ದೂರದಲ್ಲಿರುವ ಬೆಟ್ಟದಲ್ಲಿ ದೊಡ್ಡ ಗವಿಯುಂಟು, ಅದರಲ್ಲಿ ಎಷ್ಟೋಜನ ಶಿವಯೋಗಿಗಳು ಎಷ್ಟು ದಿನಗಳವರಗೆ ಶಿವಯೋಗಸಮಾಧಿಯಲ್ಲಿದ್ದು ಲೋಕ ಕಲ್ಯಾಣವೆಸಗಿದ್ದಾರೆ. ಪ್ರಾಗೈತಿಹಾಸಿಕ ಯುಗದಿಂದಲೂ ಈ ಗವಿಯು ತನ್ನದೇ ಆದ ಪಾವಿತ್ರ್ಯವನ್ನು ಕಾಯ್ದುಕೊಂಡು ಬಂದಿದೆ. ಎಂಬುದನ್ನು ಊಹಿಸಲು ಅವಕಾಶ ಉಂಟು. ಶ್ರೀ ರುದ್ರಮುನಿ ಶಿವಾಚಾರ್ಯರೆಂಬ ಮಹಿಮಾನ್ವಿತ ಮಾಹಾಪುರುಷರ ಪವಿತ್ರ ಪಾದಸ್ಪರ್ಶವನ್ನು ಪಡೆದ ಕಾಲದಿಂದ ಈ ಗವಿಯು ಮಠ ಸ್ವರೂಪವನ್ನು ಪಡೆದುಕೊಂಡಿರುವದು. ಇದಕ್ಕೆ ಆಧಾರವಾಗಿ ಶ್ರೀ ಗವಿಮಠದಲ್ಲಿ ಒಂದು ಶಿಲಾಶಾಸನವಿರುವದು. ಶ್ರೀ ರುದ್ರಮುನಿ ಶಿವಾಚಾರ್ಯರ ಉಜ್ವಲ ಪರಂಪರೆಯಲ್ಲಿ ಅನೇಕ ಜನ ಶಿವಯೋಗ ಸಿದ್ಧರು ಆಗಿ ಹೋಗಿದ್ದಾರೆ. ಅವರಲ್ಲಿ ಸಾಧಕ ಸ್ಥಿತಿಯಿಂದ ಸಿದ್ಧ ಸ್ಥಿತಿಗೇರಿದ ಮಹಾಪುರುಷರು ಆಗಿರುವರಷ್ಟೇಅಲ್ಲ ಸಿದ್ಧಸ್ಥಿತಿಯಿಂದ ಸಾಧಕಸ್ಥಿಗಿಳಿದು ಬಂದ ಮಹಾತ್ಮರೂ ಆಗಿರುವರು. ಅವರೆಲ್ಲರೂ ಆಧ್ಯಾತ್ಮಿಕ ಸಂಸ್ಕೃತಿಯ ರಕ್ಷಕರೇ ಎಂಬುದನ್ನು ಯಾರೂ ಮರೆಯುವಂತಿಲ್ಲ. ಇಂತಹ ಉಜ್ವಲ ಪರಂಪರೆಯಲ್ಲಿ ಬಂದವರು ಲಿ. ಮರಿಶಾಂತವೀರ ಮಹಾಸ್ವಾಮಿಗಳವರು.

ಸೂಡಿಯ ಜುಕ್ತಿ ಮಠದ ಸದ್ಧರ್ಮನಿಷ್ಟ ಮಾಹೇಶ್ವರ ದಂಪತಿಗಳಿಗೆ ಮಗುವಾಗಿ ಜನಿಸಿದ ಇವರ ಮೂಲ ಹೆಸರು "ಗುರುನಂಜಯ್ಯ" ತಮ್ಮ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಮುಗಿಸಿ ಸಂಸ್ಕೃತ ಅಭ್ಯಾಸಕ್ಕೆ ಅಬ್ಬಿಗೇರಿ ಸೊಲ್ಲಾಪೂರಕ್ಕೆ ಹೋಗಿ ಬಂದರು, ನಂತರ ಉನ್ನತ ಶಿಕ್ಷಣಕ್ಕಾಗಿ ಕಾಶೀಕ್ಷೇತ್ರಕ್ಕೆ ಹೋಗಿ, ಪ್ರಸಿದ್ಧ ಪಂಡಿತರ ಅಂತೇ ವಾಸಿಗಳಾಗಿ ಆಳವಾಗಿ ಅಭ್ಯಾಸಮಾಡಿ ಪಂಡಿತರ ಮೆಚ್ಚುಗೆಯನ್ನು ಪಡೆದರು.

ಇವರನ್ನು ಕಾಶೀಕ್ಷೇತ್ರದಲ್ಲಿ ಅಭ್ಯಾಸ ಮಾಡುತ್ತಿರುವಾಗಲೇ ಇವರ ವಿಮರ್ಶಬುದ್ಧಿಯ ಬಗೆಗೆ ಸಹಾಧ್ಯಾಯಿಗಳಾದವರು ಮೆಚ್ಚಿಗೆಯನ್ನು ವ್ಯಕ್ತಮಾಡುತ್ತಿದ್ದುದನ್ನು ನಾನು ಕೇಳಿದ್ದೇನೆ. ಅವರನ್ನು ನಾನು ಪ್ರತ್ಯೆಕ್ಷ ಕಂಡು ಸಂಭಾಷಣೆ ಮಾಡುವ ಪ್ರಸಂಗ ಬಂದುದು ೧೯೨೭ನೇ ಸಾಲಿನಲ್ಲಿ. ಆಗ ನಾನು ಕಾಶಿಯಿಂದ ಬಂದಿದ್ದೆನು. ಶ್ರೀ ಗುರುನಂಜಯ್ಯನವರು, ಶ್ರೀಮರಿಶಾಂತವೀರ ಮಹಾಸ್ವಾಮಿಗಳಾಗಿ ಕೊಪ್ಪಳದ ಗವಿಮಠದಲ್ಲಿ ಲಿಂಗಪೂಜಾನಿಷ್ಠರಾಗಿದ್ದುದು ಮನಸ್ಸಿಗೆ ನೆಮ್ಮದಿಮೂಡಿತ್ತು. ಅದೇ ವರ್ಷ ನಾನು ನ್ಯಾಯ ಶಾಸ್ತ್ರದ ಪ್ರಥಮ ಪರೀಕ್ಷೆಯನ್ನು ಪ್ರಥಮ ವರ್ಗದಲ್ಲಿ ಪಾಸಾಗಿದ್ದೆ. ಕೊಪ್ಪಳದ ಗವಿಮಠದ ಅಧ್ಯಕ್ಷರು ನ್ಯಾಯಶಾಸ್ತ್ರದಲ್ಲಿ ವಿಶೇಷ ಪರಿಶ್ರಮ ಮಾಡಿದವರು ಎಂದು ತಿಳಿದಿದ್ದ ನಾನು, ಅವರ ದರ್ಶನ ಪಡೆಯಲು ಅತೀ ಕಾತುರನಾದೆ. ಆಗ ನನ್ನ ಬಗ್ಗೆ ಶ್ರೀಗಳು ತೋರಿಸಿದ ವಾತ್ಸಲ್ಯಭಾವವು ಎಂದಿಗೂ ಮರೆಯಲಾರದ್ದು.

ಒಮ್ಮೆ ಪೂಜ್ಯ ಸ್ವಾಮಿಗಳ ಸಂಗಡ ಮಾತಾಡುತ್ತ ಕುಳಿತಾಗ ಒಬ್ಬ ವಯೋವೃದ್ಧರು, ಅವರ ಹೆಸರು ಚನ್ನವೀರ ಮರಿದೇವರೆಂದು ತಿಳಿದುಬಂತು. ಅವರು ಕುದರೀಮೋತಿಯಿಂದ ಒಂದು ಕುದುರೆಯನ್ನು ಹತ್ತಿಕೊಂಡು ಬಂದು ಶ್ರೀಗಳಿಗೆ ನಮಸ್ಕರಿಸಿಕೊಂಡರು, ಆಗ ಅವರು ಶ್ರೀಗಳನ್ನು ಕೇಳುತ್ತ ಇವರಾರು ಹೊಸಬರು ಬಂದಿದ್ದರಲ್ಲ? ಎಂದರು. ಆಗ ಶ್ರೀಗಳು– "ದೇವರೇ! ಇವರು ಸಂಗನಾಳದ ಶಾಸ್ತ್ರಿಮಠದ ನಾಗಪ್ಪ ಶಾಸ್ತ್ರಿಗಳ ಮೊಮ್ಮಕ್ಕಳು, ಕಾಶಿಕ್ಷೇತ್ರದಲ್ಲಿ ಅಭ್ಯಾಸ ನಡೆಸಿದ್ದಾರೆ, ಎಂದ ಕೂಡಲೇ ಶ್ರೀ ಚನ್ನವೀರ ದೇವರು ________ಓಹೋ ನಾಗಪ್ಪ ಶಾಸ್ತ್ರಿಗಳ ಮೊಮ್ಮಕ್ಕಳೇ! ಬಹಳ ಒಳ್ಳೇದಾಯಿತು, ಮೈಸೂರು ಮಠಕ್ಕೆ ಯಾರನ್ನು ಮಾಡಬೇಕೆಂದು ಕೇಳಲು ತಮ್ಮ ಹತ್ತಿರ ಬಂದಿದ್ದೇನೆ, ಕಾರಣ ಇವರನ್ನು ನೋಡಿದರೆ ಬೇರೆ ವಿಚಾರವೇ ಹರಿಯುವದಿಲ್ಲ, ಅದಕ್ಕಾಗಿ ಇವರನ್ನೇ ಆ ಮಠಕ್ಕೆ ಸ್ವಾಮಿಗಳನ್ನು ಮಾಡೋಣ" ಎಂದು ಉದ್ಗಾರ ತೆಗೆದರು. ಒಳಒಳಗೆ ನಗು ಬಂತು. ಕೂಡಲೇ ನಾನು ಹೇಳಿದೆ-- ದೇವರೇ ಇಂಥ ಪ್ರಸಂಗ ಬರಬಾರದೆಂದು ನನ್ನ ಹಿರಿಯರು, ನಾನಿನ್ನೂ ಚಿಕ್ಕವನಿರುವಾಗಲೇ ಮದುವೆ ಮಾಡಿಬಿಟ್ಟಿದ್ದಾರೆ ಎಂದೆನು. ಕೂಡಲೇ ದೇವರು ನಿಟ್ಟುಸಿರುಗರೆದು ಹೆಚ್ಚಿಗೇನೂ ಆ ಬಗ್ಗೆ ಮಾತಾಡುವ ಪ್ರಸಂಗವನ್ನೇ ತಂದುಕೊಳ್ಳಲಿಲ್ಲ, ನಾನು ಮಠದಲ್ಲಿ ಶ್ರೀಗಳ ಅಪ್ಪಣೆ ಯಂತೆ ಐದು ದಿನ ಇದ್ದು ಊರಿಗೆ ಹೊರಟೆನು.

ಆಗ ನನಗೆ ಶ್ರೀಗಳು ಫಲ ಆಶೀರ್ವಾದಮಾಡುತ್ತ ಒಂದು ನೂರು ರೂಪಾಯಿ ಅದರಲ್ಲಿಟ್ಟಿದ್ದರು. ಪೂಜ್ಯರ ತ್ಯಾಗಭಾವ ವಿದ್ವದಭಿಮಾನ ನನ್ನ ಕಣ್ಣೆದುರಿಗೆ ಕಟ್ಟಿದಂತಾದವು.

ಒಂದು ತಿಂಗಳ ನಂತರ ನಾನು ಕಾಸಿಗೆ ಹೊರಡುವಾಗ ಶ್ರೀಗಳ ದರ್ಶನ ಪಡೆದು ಹೋಗಬೇಕೆಂದು ಕೊಪ್ಪಳಕ್ಕೆ ಬಂದೆ, ಶ್ರೀಗಳ ದರ್ಶನ ಪಡೆದು ಕಾಶಿಗೆ ಹೋಗಲು ಅಪ್ಪಣೆ ಕೇಳಿದೆ. ಅಲ್ಲಿ ಶ್ರೀಗಳು "ಶಿವಾದ್ವೈತ ಮಂಜರಿ" ಎಂಬ ವೀರಶೈವ ತತ್ವಶಾಸ್ತ್ರ ಗ್ರಂಥವನ್ನು ಹಿಡಿದುಕೊಂಡು ಓದುತ್ತಿದ್ದರು. ನನ್ನನ್ನು ತಮ್ಮ ಸಮೀಪದಲ್ಲಿ ಕೂಡ್ರಿಸಿಕೊಂಡು ಗ್ರಂಥದಲ್ಲಿ ಬರುವ ಅನೇಕ ವಿಷಯಗಳ ಬಗ್ಗೆ ಚರ್ಚೆಯನ್ನು ಪ್ರಾರಂಭಿಸಿದರು ಶ್ರೀಗಳ ತಾರ್ಕಿಕ ಬುದ್ಧಿಯು ಒಮ್ಮೊಮ್ಮೆ ಗ್ರಂಥಕರ್ತನ ವಿಚಾರ ಸರಣಿಯ ಮೇಲೂ ಆಕ್ಷೇಪವನ್ನೆತ್ತುವಷ್ಟು ತೀಕ್ಷ್ಣವಾಗಿತ್ತು. ಇಂಥ ಪೂಜ್ಯರು ಪೀಠಾಧಿಪತಿಗಳಾಗಿ ಬಂದಿದ್ದು ಈ ನಾಡಿನ ಭಾಗ್ಯವೆಂದೇ ಭಾವಿಸಿದೆನು.

ನಂತರ ನಾನು ಶ್ರೀಗಳ ಅಪ್ಪಣೆ ಪಡೆದು ಕಾಶಿಗೆ ಹೋಗಿ ನನ್ನ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ ಮರಳಿ ಬಂದನಂತರವೂ ಆಗಾಗ್ಗೆ ಶ್ರೀಗಳ ದರ್ಶನವನ್ನು ಮಾಡಿಕೊಂಡು, ಸಂತೋಷಪಟ್ಟ ದಿನಗಳು ಸ್ಮೃತಿಪಥದಲ್ಲಿ ಸದಾ ಇದ್ದೇ ಇತ್ತು.

---

ಗ್ರಂಥಋಣ – 'ಗವಿದೀಪ್ತಿ' ಶ್ರೀ. ಗ. ವಿ. ಬಳಗ ಕೊಪ್ಪಳ –೧೯೭೬

## ಅಧ್ಯಾಯ – ೫

## ಕೊಪ್ಪಳ ಗವಿಮಠದ ಶಾಖಾಮಠಗಳು

ಭವ್ಯ ಪರಂಪರೆಯನ್ನು ಹೊಂದಿದ ಕೊಪ್ಪಳ ಗವಿಮಠವೂ ಹಿಂದೆ ೬೩ ಶಾಖಾಮಠಗಳನ್ನು ಹೊಂದಿದ್ದು ಕಾಲಾನುಕ್ರಮೇಣ ಆಯಾ ಮಠಗಳ ಉಸ್ತುವಾರಿ ಹಾಗೂ ಕಾಳಜಿ ಇಲ್ಲದ್ದರಿಂದ ಅವುಗಳಲ್ಲಿ ಅನೇಕ ಮಠಗಳು ಅಸ್ತಿತ್ವದಲ್ಲಿ ಇಲ್ಲದ್ದು ಕ್ಷೇತ್ರ ಕಾರ್ಯದಿಂದ ಕಂಡು ಬಂದಿದೆ. ನಾನು ಸಂದರ್ಶಿಸಿ ವಿವರಣೆ ಪಡೆದ ಕೆಲವು ಸುಸಜ್ಜಿತ – ಶಾಖಾ ಮಠಗಳ ಬಗ್ಗೆ ಇಲ್ಲಿ ಉಲ್ಲೇಖಿಸಲಾಗಿದೆ.

**೧) ಹೂವಿನಹಡಗಲಿ :–** ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿಯಲ್ಲಿರುವ ಶಾಖಾಮಠವು ಭವ್ಯವಾಗಿದೆ. ಸಮಾರು ೨೫ ಎಕರೆ ಜಮೀನು ಇದ್ದು ಮಠದಲ್ಲಿ ನೂರಾರು ಶಾಲಾ ಕಾಲೇಜು ಮಕ್ಕಳಿಗೆ ಉಚಿತ ಪ್ರಸಾದ ವ್ಯವಸ್ಥೆ ಮಾಡಿದ್ದಾರೆ. ದಿ. ಶ್ರೀ ಲಿಂಗೇಶ್ವರ ಸ್ವಾಮಿಗಳು ಈ ಮಠಕ್ಕೆ ಉತ್ತರಾಧಿಕಾರಿಗಳಾಗಿದ್ದರು, ಇವರ ನಂತರ ಬೇರೆ ಸ್ವಾಮಿಗಳನ್ನು ನೇಮಿಸಿಲ್ಲ. ಭಕ್ತರ ಹಾಗೂ ಜನಪ್ರತಿನಿಧಿಗಳ ನೆರವಿನಿಂದ ಮಠಕ್ಕೆ ಹೊಂದಿ ಗವಿಸಿದ್ಧೇಶ್ವರ ಕಲ್ಯಾಣ ಮಂಟಪವನ್ನು ನಿರ್ಮಿಸಿದ್ದಾರೆ. ಇದರ ಒಡೆತನ ಹಾಗೂ ಉಸ್ತುವಾರಿ ಮಠಕ್ಕೆ ಸೇರಿದ್ದು, ಹತ್ತಾರು ಕೊಠಡಿಗಳನ್ನು ನಿರ್ಮಿಸಿ, ವಿದ್ಯಾರ್ಥಿಗಳ ವಾಸಕ್ಕಾಗಿ ಅನುಕೂಲ ಮಾಡಿದ್ದಾರೆ. ಸಂಸ್ಕೃತ ಪಾಠ ಶಾಲೆಯ ವ್ಯವಸ್ಥೆಯನ್ನು ಮಠದಲ್ಲಿಯೇ ಮಾಡಿದ್ದಾರೆ. ಸುಮಾರು ೨೦ ಮಕ್ಕಳು ಕಲಿಯುತ್ತಿದ್ದಾರೆ. ಇಲ್ಲಿಯೂ ಕೂಡಾ ತ್ರಿಕಾಲ ಪೂಜೆ ನಡೆಯುತ್ತಿದ್ದುದು ಕಂಡು ಬಂತು. ಮಠಕ್ಕೆ ಬಂದ ಯಾತ್ರಿಗಳಿಗಾಗಿ ದಾಸೋಹದ ವ್ಯವಸ್ಥೆಯೂ ಇಲ್ಲಿದೆ. ಆಗಾಗ ಕೊಪ್ಪಳದ ಶ್ರೀಗಳವರು ಇಲ್ಲಿಗೆ ಬಂದು ಯೋಗಕ್ಷೇಮ ವಿಚಾರಿಸುತ್ತಿರುವುದು ಇದರ ಏಳಿಗೆಗೆ ಕಾರಣವು. ಪ್ರತಿ ವರ್ಷ ಫೆಬ್ರುವರಿ ಮೊದಲನೇ ವಾರದಲ್ಲಿ ರಥೋತ್ಸವವು ಜರುಗುತ್ತದೆ. ಭವ್ಯವಾದ ರಥವನ್ನು ಭಕ್ತರು ದೇಣಿಗೆ ನೀಡಿದ್ದಾರೆ. ವಿಶೇಷವೆಂದರೆ ಕೊಪ್ಪಳ ಮಠದ ೧೨ ನೇ ಶ್ರೀಗಳಾದ ಹಿರಿಯ ಶಾಂತವೀರ ಸ್ವಾಮಿಗಳ ಕರ್ತು ಗದ್ದುಗೆಯೂ ಇಲ್ಲಿಯೇ ಇರುವುದರಿಂದ ಇದು ಪುರಾತನ ಮಠಗಳಲ್ಲೊಂದು ಎಂಬುದು ಕಂಡುಬರುತ್ತದೆ. ಕಾರ್ತಿಕ ಮಾಸದಲ್ಲಿ ದೊಡ್ಡ ಪ್ರಮಾಣದಲ್ಲಿ ಕಾರ್ತಿಕೋತ್ಸವವನ್ನು ಮಾಡುತ್ತಾರೆಂದು ಸ್ಥಳೀಯ ಹಿರಿಯರಿಂದ ತಿಳಿದು ಬಂತು.

೨) ಹರಪನಹಳ್ಳಿ :- ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಾ ಸ್ಥಳ. ವ್ಯಾಪಾರಕ್ಕೂ ಹೆಸರುವಾಸಿಯಾಗಿದೆ. ಅಲ್ಲಿ ಶೈಕ್ಷಣಿಕ ಹಾಗೂ ಧಾರ್ಮಿಕವಾಗಿ ಮುಂದುವರಿದ ಸ್ಥಳವೆಂಬುದಕ್ಕೆ ಕಾರಣ ಕೊಪ್ಪಳ ಗವಿಮಠದ ಎರಡನೇ ಪೀಠಾಧಿಪತಿಗಳಾದ ಶ್ರೀ ಸಂಗನಬಸವ, ಶಿವಯೋಗಿಗಳು ಆ ಭಾಗದಲ್ಲಿ ಸಂಚಾರ ಕೈಕೊಂಡು, ಶಾಖಾ ಮಠವನ್ನು ಸ್ಥಾಪಿಸಿದ್ದು ಆ ಮಠಕ್ಕೆ ಇಂದಿಗೂ ಕಾಶೀಮಠವೆಂತಲೂ ಹೆಸರು ಇದೆ. ಅಲ್ಲಿಯ ಭಕ್ತರ ಒತ್ತಾಸೆಯಿಂದ ಆ ಮಠದಲ್ಲಿಯೇ ಹೆಚ್ಚು ವಾಸ್ತವ್ಯ ಮಾಡುತ್ತಿದ್ದುದು ಹಾಗೂ ವೀರಶೈವ ಧರ್ಮ ಪ್ರಚಾರವೂ ವ್ಯಾಪಕವಾಗಿ ಆಗಿತ್ತು ಎಂದು ತಿಳಿದು ಬರುತ್ತದೆ. ಜೊತೆಗೆ ವಿದ್ಯಾಪ್ರಸಾರವನ್ನು ಕೈಕೊಂಡು ಉಚಿತ ಪ್ರಸಾದ ನಿಲಯವನ್ನು ಮಾಡಿದ್ದು, ಅಲ್ಲಿ ಸಂಸ್ಕೃತ ಪಾಠ ಶಾಲೆಯನ್ನು ಪ್ರಾರಂಭಿಸಿದ್ದು ಕಂಡು ಬರುತ್ತದೆ. ಸ್ವಾಮಿಗಳು ಅಲ್ಲಿಯೇ ಲಿಂಗದೊಳಗಾಗಿದ್ದರಿಂದ ಅವರ ಗದ್ದುಗೆಯನ್ನು ಆ ಮಠದಲ್ಲಿಯೇ ನಿರ್ಮಿಸಿದ್ದಾರೆ. ಇದರ ನಂತರ ೩ ನೇ ಪೀಠಾಧಿಪತಿಗಳಾದ ಶ್ರೀ ಶಿವಲಿಂಗ ಸ್ವಾಮಿಗಳು ಈ ಮಠವನ್ನು, ಇನ್ನು ಹೆಚ್ಚುಕಾಳಜೀವಹಿಸಿ, ಬೆಳೆಸಹತ್ತಿದ್ದು ಕಂಡು ಬರುತ್ತದೆ. ಅವ್ಯಾಹತವಾಗಿ ಧರ್ಮ ಪ್ರಸಾರ, ಶೈಕ್ಷಣಿಕ ಅಭಿವೃದ್ದಿ ಹಾಗೂ ಅನ್ನ ದಾಸೋಹ ಮುಂದುವರೆಸಿದ ಬಗ್ಗೆ ಆಧಾರಗಳು ಸಿಕ್ಕುತ್ತವೆ. ಕೆಲವು ವರ್ಷಗಳ ನಂತರ ಅನಾರೋಗ್ಯದಿಂದ ಅಲ್ಲಿಯೇ ಕಾಯಂ ವಾಸ್ತವ್ಯ ಮಾಡಿ, ಅಲ್ಲಿಯೇ ಲಿಂಗದೊಳಗಾದಕಾರಣ ಅವರ ಗದ್ದುಗೆಯೂ ಸಹ ಅಲ್ಲಿಯೇ ಇದೆ. ಹಡಗಲಿ ರಸ್ತೆಯಲ್ಲಿರುವ ಶಾಖಾ ಮಠವು ಚನ್ನಾಗಿದೆ ಸಧ್ಯ ಈ ಮಠಕ್ಕೆ ಅರ್ಚಕರನ್ನು ನೇಮಿಸಿ, ಪ್ರತಿ ನಿತ್ಯ ಪೂಜೆಗೊಳ್ಳುವಂತೆ ಹಾಗೂ ಭಕ್ತರಿಗೆ ಅನುಕೂಲ ಮಾಡಿದ್ದಾರೆ. ಶಿಕ್ಷಣ ಪ್ರಸಾರವನ್ನು ಬಿಟ್ಟಿಲ್ಲ. ಸಂಸ್ಕೃತ ಪ್ರಾಧ್ಯಾಪಕರನ್ನು ನೇಮಿಸಿದ್ದಾರೆ. ಈಗ ೧೫ ಮಕ್ಕಳು ಸಂಸ್ಕೃತ ಭಾಷಾಭ್ಯಾಸ ಮಾಡುತ್ತಿದ್ದಾರೆ. ಇತರ ಶಾಲಾ-ಕಾಲೇಜಿನ ೨೦ ಮಕ್ಕಳಿಗೆ ಅಲ್ಲಿಯೇ ಇದ್ದು, ಉಚಿತ ಪ್ರಸಾದ ಸ್ವೀಕರಿಸಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಯುವಂತೆ ವ್ಯವಸ್ಥೆ ಮಾಡಿರುವದು ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ. ಇದು ಭಕ್ತರ ದೇಣಿಗೆಯಿಂದ ನಡೆಯುತ್ತದೆ. ಯಾವದೇ ಜಮೀನು ಮತ್ತು ಆಸ್ತಿ ಇಲ್ಲವೆಂಬುದು ಕಂಡು ಬಂದಿತು.

**೩) ಭಾವಿಹಳ್ಳಿ :-** ಬಳ್ಳಾರಿ ಜಿಲ್ಲಾ ಹೂವಿನ ಹಡಗಲಿ ತಾಲೂಕಿನ ಭಾವಿಹಳ್ಳಿಯಲ್ಲಿಯೂ ಕೊಪ್ಪಳದ ಗವಿಮಠದ ಶಾಖಾ ಮಠವಿದೆ. ಮಠವು ಊರ್ಜಿತಾವಸ್ಥೆಯಲ್ಲಿಲ್ಲ. ಸ್ವಾಮೀಜಿಯವರೂ ಇಲ್ಲಿ ಯಾರೂ ಇಲ್ಲ, ಮಠವು ಬಿದ್ದಿದೆ. ಈ ಹಿಂದೆ ಇದೇ ಮಠದಲ್ಲಿ ಶಾಲೆ ನಡೀತಿತ್ತು, ಅಲ್ಲಿಯೇ ನಾವು ಓದಿದ್ದೇವೆ ಎಂದು ಸ್ಥಳೀಯ ಶತಾಯುಷಿ ಯಜಮಾನರಾದ ಎಚ್. ಎಂ. ಕರಿಬಸವ ಸ್ವಾಮಿಗಳು ಹಾಗೂ ಎಚ್. ಎಂ. ಶಿವರುದ್ರಯ್ಯನವರನ್ನು ವಿಚಾರಿಸಿದಾಗ ತಿಳಿದುಬಂದ ಸಂಗತಿ. ಮಠದ ಆಸ್ತಿ ಏನೂ ಇಲ್ಲವೆಂಬುದೂ ಸಹ ತಿಳಿದು ಬರುತ್ತದೆ.

**೪) ಮಕರಬ್ಬಿ :-** ಹೂವಿನ ಹಡಗಲಿ ತಾಲೂಕಿನ ಮಕರಬ್ಬಿಯಲ್ಲಿಯೂ ಶಾಖಾ ಮಠವಿತ್ತೆಂದು ಪುರಾಣದಲ್ಲಿ ಉಲ್ಲೇಖವಿದೆ. ಕ್ಷೇತ್ರಕಾರ್ಯ ಕೈಕೊಂಡಾಗ ತಿಳಿದು ಬಂದ ಅಂಶಗಳೆಂದರೆ ಈಗ ಅಲ್ಲಿ ಮಠವಾಗಲಿ, ಗದ್ದುಗೆಯಾಗಲಿ ಏನೂ ಉಳಿದಿಲ್ಲ. ಗದ್ದುಗೆಯನ್ನು ನಾಶಮಾಡಿ ಅಲ್ಲಿ ಈಗಿನ ಶಾಲಾ ಕಂಪೌಂಡನ್ನು ನಿರ್ಮಿಸಿದ್ದಾರೆ. ನಾವು ಗದ್ದುಗೆಯನ್ನು ನೋಡಿದ್ದೇವೆ ಎಂದು ಅದೇ ಊರಿನ ಶತಾಯುಷಿ ಯಜಮಾನರಾದ ಲಿಂಗನಗೌಡ್ರು ಅಭಿಪ್ರಾಯವಿತ್ತರು. ೯ ನೇ ಪೀಠಾಧ್ಯಕ್ಷರಾದ ಶ್ರೀ ಸಂಗನಬಸವ ಸ್ವಾಮಿಗಳು ಮಕರಬ್ಬಿಯಲ್ಲಿಯೇ ಲಿಂಗಕ್ಯರಾಗಿದ್ದರಿಂದ ಆ ಗದ್ದುಗೆ ಅವರದೇ ಎಂದು ಪುರಾಣ ಹಾಗೂ ಗವಿದೀಪ್ತಿಯಲ್ಲಿ ಉಲ್ಲೇಖ ಸಿಗುತ್ತದೆ.

**೫) ಕಾಂತೇಬೆನ್ನೂರು :-** ಹೂವಿನ ಹಡಗಲಿ ತಾಲೂಕಿನ ಕತ್ತೇಬೆನ್ನೂರು ಗ್ರಾಮದಲ್ಲಿಯೂ ಗವಿಮಠದ ಶಾಖಾ ಮಠವಿದೆ. ಈಗ ಮಠವು ಸುಸ್ಥಿತಿಯಲ್ಲಿಲ್ಲ, ಮಠದ ಹಿಂದಿನ ಭಾಗ ಬಿದ್ದಿದೆ. ಕಾಳಜೀ ಇಲ್ಲದ್ದಕ್ಕೆ ಅಲ್ಲಿಗೆ ಭಕ್ತಜನರು ಹೋಗುವದಿಲ್ಲ. ಮಠವನ್ನು ಕಟ್ಟಿಸಿ ಸುಮಾರು ೮೦ ವರ್ಷಗಳಾಗಿರಬೇಕು. ನಂತರ ಸ್ವಾಮಿಗಳು ಆಕಡೆ ಆಸಕ್ತಿವಹಿಸದೇ ಇದ್ದುದು ಈಗಿನ ನಾದುರಸ್ತಿಗೆ ಕಾರಣ ಎಂದು ಊರಿನ ಹಿರಿಯರನ್ನು ಸಂಪರ್ಕಿಸಿದಾಗ ತಿಳಿದುಬಂತು. ೧೬ ಕಲ್ಲುಗಂಬದ ಸುಂದರ ನಿರ್ಮಾಣ ಮಠದ ಒಳ ಭಾಗದಲ್ಲಿದೆ. ಒಂದು ಭಾಗ ಸಂಪೂರ್ಣ ಬಿದ್ದು ಹಾಳಗಿದೆ. ಆ ಊರಿನ ಶತಾಯುಷಿಗಳಾದ ದೊಡ್ಡ ಕೊಟ್ರಪ್ಪನವರನ್ನು ಕ್ಷೇತ್ರ ಕಾರ್ಯದಲ್ಲಿ ಸಂಪರ್ಕಿಸಿದಾಗ, ಅವರು ಚಿಕ್ಕವರಿದ್ದಾಗಲೂ ಈ ಮಠದಲ್ಲಿ ಕಾಳಜೀ ಕಡಿಮೆ ಇದ್ದು,

ಪೂಜಾ ಕಾರ್ಯಕ್ರಮಗಳು ಕೂಡಾ ಅಷ್ಟಕಷ್ಟೇ ಇತ್ತು, ಶಿಕ್ಷಣ ಹಾಗೂ ದಾಸೋಹದ ವ್ಯವಸ್ಥೆ ಕೂಡಾ ಇದ್ದಿಲ್ಲವೆಂದು ಹೇಳಿದರು. ಮಠಕ್ಕೆ ಬೇರೆ ಆಸ್ತಿಯೇನೂ ಇಲ್ಲವಂತೆ. ಮಠವು ಸ್ಥಾಪನೆಗೊಂಡ ನಂತರದ ಸ್ವಾಮಿಜಿಯವರು ಆ ಭಾಗಕ್ಕೆ ಸಂಚಾರ ಕೈಕೊಳ್ಳಲಾರದ್ದು ಧರ್ಮ ಪ್ರಚಾರ ನಿಂತುಹೋಗಲು ಕಾರಣವಾಯಿತು. ಅಲ್ಲದೇ ಈ ಮಠದ ಅಭಿವೃದ್ಧಿಯೂ ಸಹ ಆಗಲಿಲ್ಲವೆಂಬ ಅಂಶವು ತಿಳಿದು ಬರುತ್ತದೆ.

**೬) ಕಡ್ಲಬಾಳು :-** ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಹಳ್ಳಿ ತಾಲೂಕಿನ ಕಡ್ಲಬಾಳು ಗ್ರಾಮದಲ್ಲಿ ಗವಿಮಠದ ಶಾಖಾ ಮಠವಿದೆ. ಈ ಮಠವು ಭವ್ಯ ಕಟ್ಟಡವನ್ನು ಹೊಂದಿದೆ. ಸುಮಾರು ೨೫ ಎಕರೆ ಜಮೀನು ಇದೆ (ಮೊದಲು ನೂರಾರು ಎಕರೆ ಜಮೀನು ಇತ್ತೆಂದು ಕ್ಷೇತ್ರಕಾರ್ಯದಲ್ಲಿ ಜನರಿಂದ ತಿಳಿದು ಬಂತು). ೧೫ ನೇ ಪೀಠಾಧಿಪತಿಗಳಾಗಿದ್ದ ಜ. ಶಿವಶಾಂತವೀರ ಸ್ವಾಮಿಗಳು (ಗಡ್ಡದ ಅಜ್ಜನವರು) ಈ ಮಠವನ್ನು ಕಟ್ಟಿಸಿ ಈ ಭಾಗದ ಭಕ್ತಜನರಿಗೆ ವೀರಶೈವ ಧರ್ಮಪ್ರಚಾರ ಮಾಡಿದ್ದು ಗಮನಾರ್ಹ. ಇವರ ಕಾಲಕ್ಕೆ ಕೊಪ್ಪಳದ ಮಠದಷ್ಟೇ ಕಾಳಜೀ ಈ ಮಠದಲ್ಲಿತ್ತು. ಅಂತಲೇ ಕೃಷಿಗೆ ಪ್ರಾಧಾನ್ಯತೆ ನೀಡಿ ಜೊತೆಗೆ ಶಿಕ್ಷಣ ಪ್ರಸಾರವನ್ನು ಮಾಡಿದ್ದು ಕಂಡು ಬರುತ್ತದೆ. ಇವರ ಕಾಲಕ್ಕೆ ನೂರಾರು ಎಕರೆ ಜಮೀನು ಇದ್ದು ಹಣ್ಣಿನ ಬೆಳೆ, ರೊಕ್ಕದ ಬೆಳೆಗಳನ್ನು ಬೆಳೆದು ಬಡ ಜನರಿಗೂ ಧಾನ್ಯ, ಹಣ, ಹಂಚುವ ಕಾರ್ಯ ಮಾಡಿದ್ದಾಗಿ ತಿಳಿದು ಬಂತು. ಆ ಹೊಲದಲ್ಲಿ ಇಂದಿಗೂ ಮಾವಿನ ಗಿಡ, ಪೇರಲ, ದಾಳಿಂಬೆ, ನೀರಲಗಿಡ, ಲಿಂಬು ಇತ್ಯಾದಿ ಗಿಡಗಳಿವೆ. ಇವರ ನಂತರದ ಸ್ವಾಮೀಜಿಯವರು ಈ ಗ್ರಾಮಕ್ಕೆ ಹೆಚ್ಚು ಬಾರದ್ದರಿಂದ ಹೊಲಗಳು ಮಠದ ತಂಬಾದಿಂದ ರೈತರ ಕೈ ಸೇರಿದವು ಎಂಬ ಮಾತು ಭಕ್ತರಿಂದ ತಿಳಿಯುತ್ತದೆ. ಆದರೆ ಶಿಕ್ಷಣ ಪ್ರಚಾರ ಸತತವಾಗಿ ಅಭಿವೃದ್ಧಿ ಹೊಂದುತ್ತಲಿದೆ. ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ಮಠದ ಹೆಸರಿನಿಂದಿವೆ.

ಆ ಹೊಲದಲ್ಲಿ ಬೆಳೆದ ಮಾವಿನ ಹಣ್ಣುಗಳನ್ನು ಸ್ವಾಮೀಜಿಯವರು ಕಪನಿಯಲ್ಲಿ ತುಂಬಿಕೊಂಡು ಆ ಹೊಲಕ್ಕೆ ಹೊಂದಿರುವ ಕೊಟ್ಟೂರು-ಹೊಸಪೇಟೆ ರೈಲು ಮಾರ್ಗದಲ್ಲಿ ಓಡಾಡುವ ರೈಲು ಬಂತೆಂದರೆ ಕೆಲ ನಿಮಿಷ ನಿಲ್ಲಿಸಿ ಭಕ್ತರಿಗೆ ಹಣ್ಣುಗಳನ್ನು ಕೊಡುತ್ತಿದ್ದರು ಎಂದು ಆ ಊರ ಹಿರಿಯರು ಹೇಳಿದ್ದು ಕ್ಷೇತ್ರ ಕಾರ್ಯದಿಂದ ತಿಳಿದು ಬರುತ್ತದೆ. ಇಡೀ ಕಡ್ಲಬಾಳು ಊರಿನ ಜನರು, ಹೋದ ಆಳು, ಹಣ್ಣಿನ

ಸುಗ್ಗಿಯಲ್ಲಿ ಮಾವಿನ ಹಣ್ಣನ್ನು ಉಚಿತವಾಗಿ ತಿನ್ನುತ್ತಿದ್ದರಂತೆ. ಕಾಯಕದಲ್ಲಿಯೇ ಎಲ್ಲಾ ಜನರು ನಿರತರಾಗಿರಬೇಕು, ಆಲಸಿಗಳಾಗದಂತೆ ಅಜ್ಜನವರು ಕಟ್ಟಪ್ಪಣೆ ಮಾಡಿದ್ದನ್ನು ಅನೇಕ ಹಿರಿಯರು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ.

ಪ್ರತಿವರ್ಷ ಸೀಗಿ ಹುಣ್ಣಿಮೆಯಂದು ಭವ್ಯ ರಥೋತ್ಸವವು ಜರುಗುತ್ತದೆ. ಸುತ್ತಲಿನ ಹತ್ತಾರು ಗ್ರಾಮಗಳ ಜನರಿಂದ ಜಾತ್ರೆ ನಡೆಯುತ್ತದೆ. ಕೊಪ್ಪಳದ ಶ್ರೀಗಳ ಸಮ್ಮುಖದಲ್ಲಿ ಅನೇಕ ಹರ-ಗುರು ಶ್ರೀಗಳ ನೇತೃತ್ವದಲ್ಲಿ ಜಾತ್ರೆಯ ದಿನ ರಾತ್ರಿ ಸಾಂಸ್ಕೃತಿಕ ಕಾರ್ಯಕ್ರಮಗಳು, ಪ್ರವಚನ, ಕೀರ್ತನಗಳು ನಡೆಯುತ್ತವೆ. ಅಲ್ಲದೇ ಜನಪ್ರತಿನಿಧಿಗಳ ನೆರವಿನಿಂದ ಪ್ರತಿವರ್ಷ ಸಾಮೂಹಿಕ ವಿವಾಹಗಳನ್ನು ಕೈಕೊಳ್ಳುತ್ತಾರೆ. ಅದೂ ಕೂಡಾ ಸ್ವಾಮಿಗಳ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದುದು ಕಂಡುಬಂತು.

ಮಠದಲ್ಲಿಯೇ ಸಂಸ್ಕೃತ ಪಾಠಶಾಲೆ, ಶಿಶುವಿಹಾರ ಹಾಗೂ ಹೈಸ್ಕೂಲು ನಡೆಯುತ್ತದೆ ಮತ್ತು ಸುಮಾರು ನೂರಾರು ಮಕ್ಕಳಿಗೆ ಉಚಿತ ಪ್ರಸಾದ ನಿಲಯವನ್ನು ವ್ಯವಸ್ಥೆ ಮಾಡಿದ್ದಾರೆ. ಗಡ್ಡದ ಅಜ್ಜನವರ ಸಮಾಧಿಯೂ ಅಲ್ಲೇ ಆಗಿದ್ದು, ಗದ್ದುಗೆ ಪ್ರತಿನಿತ್ಯ ಪೂಜೆಗೊಳ್ಳುತ್ತಿದ್ದು, ಅಪಾರ ಸಂಖ್ಯೆಯಲ್ಲಿ ಭಕ್ತರು ಮಠಕ್ಕೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಿದ್ದುದು ಕಂಡುಬಂದಿದೆ.

ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಆಗಾಗ್ಗೆ ಕಾರ್ಯಕ್ರಮಗಳನ್ನು ಏರ್ಪಡಿಸುತ್ತ, ಧರ್ಮ ಪ್ರಚಾರವನ್ನು ಸಹ ಸಧ್ಯದ ಸ್ವಾಮಿಗಳ ಅಪ್ಪಣೆಯಂತೆ ನಡೆಸುತ್ತಿದ್ದಾರೆ.

**೭) ಗಜೇಂದ್ರಗಡ :-** ಗದಗ ಜಿಲ್ಲೆಯ ಗಜೇಂದ್ರಗಡದಲ್ಲಿ ಕೊಪ್ಪಳ ಗವಿಮಠದ ಶಾಖಾ ಮಠವು ಇದೆ. ಭವ್ಯ ಕಟ್ಟಡವಿದ್ದು, ಸಂಗೀತ ಪಾಠಶಾಲೆ, ಉಚಿತ ಪ್ರಸಾದ ನಿಲಯವು ಇದೆ. ಭಕ್ತರ ದೇಣಿಗೆಯಿಂದ ಉಚಿತ ಪ್ರಸಾದ ನಿಲಯದಲ್ಲಿ ೨೦ ಮಕ್ಕಳು ಇದ್ದು ಶಾಲೆ ಮತ್ತು ಕಾಲೇಜಿಗೆ ಹೋಗುತ್ತಿದ್ದಾರೆ. ಮಠದ ಹಳೇ ಕಟ್ಟಡವನ್ನು ತೆಗೆಯಿಸಿ ಹೊಸ ಕಟ್ಟಡವನ್ನು ಹಿಂದಿನ ಸ್ವಾಮಿಗಳು ಊರಿನ ಭಕ್ತರಿಂದ ಊರ್ಜಿತ ಗೊಳಿಸಿದ್ದಾರೆ. ೧೧/೦೭/೧೯೯೮ ಕ್ಕೆ ಹೊಸ ಕಟ್ಟಡದ ಮುಖ್ಯ ದ್ವಾರದ ಉದ್ಘಾಟನೆಯನ್ನು ನೆರವೇರಿಸಿದ್ದು ಅಲ್ಲಿ ಅರ್ಚಕರಾದ ಶ್ರೀ ಅಂದಾನಪ್ಪ ಹೊಂಬಳ ಅವರಿಂದ ತಿಳಿದುಬಂತು. ಸುಮಾರು ೪೦ ವರ್ಷದಿಂದ ಹೊಂಬಳ ಅವರು ಆ ಮಠದ ಉಸ್ತುವಾರಿ, ಪೂಜೆಯ ಕಾರ್ಯ ನಿರ್ವಹಿಸುತ್ತಿದ್ದಾರೆ. ವರ್ಷಕ್ಕೊಮ್ಮೆ

ಗವಿಸಿದ್ಧೇಶ್ವರರ ಜಯಂತಿಯನ್ನು ಆಚರಿಸುತ್ತಾರೆಂದು ತಿಳಿದು ಬಂತು. ಇನ್ನೂ ಹೆಚ್ಚಿನ ಧಾರ್ಮಿಕ ಕಾರ್ಯಗಳು, ಸಾಂಸ್ಕೃತಿಕ ಕಾರ್ಯಗಳು ಮಠದಲ್ಲಿ ನಡೆಯಬೇಕಾಗಿದೆ. ಇಲ್ಲಿ ಗದ್ದುಗೆ ಇಲ್ಲ, ಗವಿಸಿದ್ಧೇಶ್ವರ ಮೂರ್ತಿಯನ್ನು ಇಟ್ಟು ಪೂಜಿಸುತ್ತಾರೆ.

**೮) ಬಗನಾಳ :-** ಕೊಪ್ಪಳ ತಾಲೂಕಿನ ಬಗನಾಳದಲ್ಲಿ ಶಾಖಾ ಮಠವುದ್ದು, ಚೆನ್ನಾದ ಕಟ್ಟಡವನ್ನು ಹೊಂದಿದೆ ಹಿಂದೆ ಹೈದ್ರಾಬಾದ ನಿಜಾಮನು ಈ ಗ್ರಾಮವನ್ನು ಗವಿಮಠಕ್ಕೆ ಉಂಬಳಿಯಾಗಿ ಕೊಟ್ಟಿದ್ದನು. ೧೬ ನೇ ಪೀಠಾಧ್ಯಕ್ಷರಾಗಿದ್ದ ಪೂಜ್ಯ ಮರಿಶಾಂತವೀರ ಸ್ವಾಮಿಗಳ ಕಾಲಕ್ಕೆ ಇಲ್ಲಿಯ ಮಠವನ್ನು ಭಕ್ತರ ನೆರವಿನಿಂದ ಕಟ್ಟಿಸಲಾಗಿದೆ ಎಂದು ತಿಳಿದುಬರುತ್ತದೆ. ಗದ್ದುಗೆ ಇದ್ದು, ನಿತ್ಯ ಪೂಜೆಗೊಳ್ಳುತ್ತಿದೆ. ಆಗಾಗ ಕೊಪ್ಪಳದ ಶ್ರೀಗಳು ಆಗಮಿಸಿ ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದಾರೆ ಎಂದು ಊರಿನ ಜನ ಹೇಳುತ್ತಾರೆ.

**೯) ಮಂಗಳಾಪುರ :-** ಕೊಪ್ಪಳದ ಸಮೀಪ ಗುಡ್ಡಕ್ಕೆ ಹೊಂದಿದ ಗ್ರಾಮವು ಇಲ್ಲಿ ಹನ್ನೊಂದನೆಯ ಪೀಠಾಧ್ಯಕ್ಷರಾಗಿದ್ದ ಪೂಜ್ಯ ಗವಿಶಿದ್ಧೇಶ್ವರರು ಜನ್ಮತಾಳಿದ ಊರು. ಇಲ್ಲಿಯೂ ಮಠವಿದ್ದು, ಪ್ರತಿನಿತ್ಯ ಪೂಜೆಕಾರ್ಯಕ್ರಮಗಳು ನಡೆಯುತ್ತಿವೆ. ಇದೂ ಕೂಡಾ ಜಾಗೃತ ಸ್ಥಳವೆಂದರೆ ಸ್ಥಳೀಯಜನರು ನಂಬಿದ್ದಾರೆ. ಗ್ರಾಮೀಣ ಪ್ರದೇಶವಾದ್ದರಿಂದ ಇಲ್ಲಿ ಉಚಿತ ಪ್ರಸಾದ ನಿಲಯವನ್ನು ಮಾಡಿರುವದಿಲ್ಲ ಶಿಕ್ಷಣದ ವ್ಯವಸ್ಥೆಯನ್ನು ಮಾಡಿರುವದಿಲ್ಲ.

**೧೦) ಇಟಗಿ :-** ರೋಣ ತಾಲೂಕಿನ ಇಟಗಿ (ಶಾಂತಗೇರಿ ಹತ್ತಿರ) ಯಲ್ಲಿಯೂ ಶಾಖಾ ಮಠವಿದೆ ೧೬ನೇ ಪೀಠಾಧ್ಯಕ್ಷರು ಸೂಡಿ ಗ್ರಾಮದವರಾಗಿದ್ದರಿಂದ ಸೂಡಿಯ ಸುತ್ತ ಮುತ್ತಲೂ ಆಗಾಗ್ಗೆ ಸಂಚರಿಸುತ್ತಿದ್ದರಿಂದ ಇಟಗಿ ಗ್ರಾಮದಲ್ಲಿ ಶಾಖಾಮಠವನ್ನು ಸ್ಥಾಪಿಸಿದ್ದರಂತೆ. ಇಲ್ಲಿ ಗದ್ದುಗೆ ಇಲ್ಲ, ಗವಿಸಿದ್ಧೇಶ್ವರರ ಮೂರ್ತಿಯನ್ನು ಇಟ್ಟು ನಿತ್ಯ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ. ೧೭ ನೇ ಪೀಠಾಧಿಪತಿಗಳೂ ಸಹ ಆಗಾಗ ಈ ಮಠಕ್ಕೆ ಆಗಮಿಸಿ ಭಕ್ತರನ್ನು ಕೂಡಿಸಿ ವಿಶೇಷ ಕಾರ್ಯಕ್ರಮಗಳನ್ನು ಮಾಡುತ್ತಿದ್ದರೆಂಬುದು ತಿಳಿದುಬಂತು. ಇನ್ನೂ ಹೆಚ್ಚಿನ ಕಾಳಜೀ ಅವಶ್ಯವಿದೆ.

**೧೧) ಹುಲಗಿ (ಮುನಿರಾಬಾದ) :-** ಕೊಪ್ಪಳ ತಾಲೂಕಿನ ಹುಲಗಿ ಗ್ರಾಮದಲ್ಲಿ ಗವಿಮಠದ ಶಾಖಾಮಠವನ್ನು ೨೦೦೬ ಫೆಬ್ರುವರಿ ತಿಂಗಳಿನಲ್ಲಿ ಈಗಿನ ಪೂಜ್ಯರಾದ ಜ. ಅಭಿನವ ಗವಿಸೀದ್ದೆಶ್ವರರು ಉದ್ಘಾಟಿಸಿದರು. ಈ ಭಾಗದ ಭಕ್ತರ ನೆರವಿನಿಂದ ಭವ್ಯವಾದ ಸುಂದರವಾದ ಕಲ್ಲಿನ ಕಟ್ಟಡ ಹೊಂದಿದ ಮಠದಲ್ಲಿ ಪೂಜ್ಯ ಗವಿಸಿದ್ಧೇಶ್ವರರ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಪ್ರತಿನಿತ್ಯ ಅಭಿಷೇಕ ಪೂಜೆ ಗೊಳ್ಳುವಂತೆ ವ್ಯವಸ್ಥೆ ಮಾಡಿದ್ದಾರೆ. ಬಹು ದಿನಗಳ ಭಕ್ತರ ಈ ಬೇಡಿಕೆ ಈಡೇರಿದಂತಾಗಿದೆ. ಗವಿಮಠದ ಪರಂಪರೆಯನ್ನು ಕಾಯ್ದುಕೊಂಡು ನಿತ್ಯ ಅನ್ನ ದಾಸೋಹವನ್ನು ಕೈಗೊಳಲು ಸ್ಥಳಿಯ ಭಕ್ತರು ಹಾಗೂ ಕಮೀಟಿಯವರು ಇಚ್ಛಿಸಿದ್ದಾರೆ. ಬಹಳ ವಿಜ್ರಂಭಣೆಯಿಂದ ಅಂದು ನಡೆದ ಕಾರ್ಯಕ್ರಮಕ್ಕೆ ಹುಲಗಿ ಗ್ರಾಮದ ಸುತ್ತಲಿನ ಭಕ್ತರು ಅಪಾರ ಸಂಖ್ಯೆಯಲ್ಲಿ ಸೇರಿದ್ದರು. ಆ ದೃಶ್ಯವು ಗವಿ ಮಠದ ಲಘು ಜಾತ್ರೋತ್ಸವ ಜರುಗಿದ್ದಂತಿತ್ತು. ಪೂಜ್ಯರ ಸನ್ನಿದಾನದಲ್ಲಿ ನಡೆದ ಆ ಕಾರ್ಯಕ್ರಮದಲ್ಲಿ ಜನರ ಬೇಡಿಕೆಗೆ ಸ್ಪಂದಿಸಿದ ಪೂಜ್ಯರು ಇಷ್ಟರಲ್ಲಿಯೇ ಬಡ ಮಕ್ಕಳಿಗೆ ಉಚಿತ ಪ್ರಸಾದ ನಿಲಯ ಹಾಗೂ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಲಾಗುತ್ತದೆ ಎಂದು ಆಶೀರ್ವಚನ ನುಡಿದರು..

ಅದಿಶಕ್ತಿ ಶ್ರೀ ಹುಲಿಗೆಮ್ಮ ದೇವಿಯ ಈ ಸೂಕ್ಷೇತ್ರದಲ್ಲಿ ಪೂಜ್ಯ ಗವಿಮಠದವೊಂದು ಸ್ಥಾಪನೆ. ಆಗಿ ಆ ಕ್ಷೇತ್ರ ಇನ್ನೂ ಹೆಚ್ಚು ಜಾಗೃತ ಸ್ಥಳವಾಯಿತೆಂದು ಭಕ್ತ ಜನರು ಸಂತೋಷಪಟ್ಟಿದ್ದಾರೆ.

## ಅಧ್ಯಾಯ – ೬

# ಕೊಪ್ಪಳ ಗವಿಮಠ ಕ್ಷೇತ್ರದ ಧಾರ್ಮಿಕ, ಆಧ್ಯಾತ್ಮಕ ಮತ್ತು ಸಾಮಾಜಿಕ ವೈಶಿಷ್ಟ್ಯಗಳು (ಚಟುವಟಿಕೆಗಳು)

ಧರ್ಮಾವಲಂಬಿಯಾದ ಸತ್ಕ್ರಿಯೆಗಳು ಧಾರ್ಮಿಕ ಆಚರಣೆಗಳಾಗುತ್ತವೆ. ಆಯಾ ಪ್ರದೇಶಗಳಿಗೆ, ನಂಬಿಕೆಗಳಿಗೆ, ಸಿದ್ಧಾಂತಗಳಿಗೆ ಅನುಸಾರವಾಗಿ ಆಚರಣೆಯಲ್ಲಿ ವೈಶಿಷ್ಟ್ಯತೆಗಳನ್ನು ಗುರುತಿಸಬಹುದಾಗಿದೆ. ಎಲ್ಲಾ ಧಾರ್ಮಿಕ ಆಚರಣೆಗಳ ಹಿಂದೆ ಶ್ರದ್ಧಾಭಕ್ತಿಗಳ ಅನುಸಂಧಾನದ ಮೂಲಕ ಸಮಾಜವನ್ನು ಸನ್ಮಾರ್ಗದತ್ತ ಕೊಂಡೊಯ್ಯುವ ಅಂಶ ನಿಚ್ಚಳವಾಗಿರುತ್ತದೆ.

ಜೀವನಾನುಭವ ದಟ್ಟವಾದಂತೆಲ್ಲಾ ಶ್ರದ್ಧೆ, ಶ್ರದ್ಧೆ, ಹೆಚ್ಚಾದಾಗ ದೈವ, ಧರ್ಮಗಳ ಬಗ್ಗೆ ಅಚಲ ನಂಬಿಕೆ, ನಂಬಿಕೆಯ ಬೆನ್ನಲ್ಲೇ ಆಚಾರ ವಿಚಾರಗಳು ರೂಢಿಗತವಾಗಿರುವದು ಸಹಜ. ಒಳ್ಳೆಯ ಕೆಲಸ, ಒಳ್ಳೆಯ ಮಾತು, ಒಳ್ಳೆಯ ನಡತೆಗಳ ಗುಣ, ಇವುಗಳ ಸಮುಚ್ಚಯವೇ ಧರ್ಮ ಇವುಗಳನ್ನು ನಿರಂತರ ರೂಢಿಸಿಕೊಳ್ಳುವದೇ ಧಾರ್ಮಿಕ ಪ್ರವೃತ್ತಿಯನ್ನು ಜಾಗೃತಗೊಳಿಸುವದೇ ಧರ್ಮಾಚರಣೆಗಳ ಉದ್ದೇಶವಾಗಿರುತ್ತದೆ. ಹಾಗಾಗಿ ಯಾವುದೇ ಸಂದರ್ಭದಲ್ಲಿ ವ್ಯತಿರಿಕ್ತ ಪರಿಣಾಮಗಳನ್ನು ಉಂಟು ಮಾಡುವ ಕಂದಾಚಾರ ಹಾಗೂ ಮೂಢ ನಂಬಿಕೆಗಳನ್ನು ಯಾರೂ ಧರ್ಮ ಎಂದು ಒಪ್ಪುವದಿಲ್ಲ.

ಸದಾಶಯದಿಂದ ಸರ್ವರ ಒಳಿತಿನ ಅಭೀಪ್ಸೆಯಿಂದ ಪ್ರೇರಕವಾದ ಧಾರ್ಮಿಕ ವಿಧಿ ವಿಧಾನಗಳು ಆಧ್ಯಾತ್ಮಕ ಚಿಂತನೆಗಳ ಮಾನವತೆಯ ಪುನರುದ್ಧಾರವನ್ನೇ ಉಸಿರಾಗಿಸಿಕೊಂಡಿರುತ್ತವೆ. ಧರ್ಮ ಪ್ರಾಣರಾದ ಸಜ್ಜನರು, ಅಂತಹ ಸಜ್ಜನರಿಗೆ ಅಧ್ವೈರ್ಯಗಳಾದ ಧರ್ಮಪೀಠಾಧಿಪತಿಗಳು ಒಂದಲ್ಲ ಒಂದು ವಿಧದಲ್ಲಿ ಸರ್ವದಾ ಧರ್ಮಬದ್ಧ ಕಲಾಪಗಳಲ್ಲಿ ತೊಡಗಿಸಿಕೊಂಡಿರುತ್ತಾರೆ.

ಗವಿಮಠಕ್ಕೆ ಎಲ್ಲಾ ಸಮುದಾಯದ ಜನ ಭಕ್ತಿ ಭಾವದಿಂದ ನಡೆದುಕೊಂಡು ಬಂದಿರುವದರಿಂದಲೂ ಅದರಲ್ಲೂ ಮುಸ್ಲಿಂ ಧರ್ಮದವರೂ ಸಹ ಅವರ ಭಕ್ತಿ ನಂಬಿಕೆಯಿಂದ ನಡೆದುಕೊಳ್ಳುತ್ತಿದ್ದಾರೆ. ಅನೇಕ ವೀರಶೈವ ಧರ್ಮದವರಲ್ಲದ ಜನರು ಸಹ ಭಕ್ತಿ ಭಾವ ತೋರಿಸಿದ್ದರಿಂದ ಪ್ರಾಕೃತಿಕ ಮೂಲದ ದೇಶೀ ಸೊಗಡಿನ ಜಾನಪದ ಸಂಸ್ಕೃತಿಯನ್ನು ಕಾಣುತ್ತೇವೆ. ವೈದಿಕ ಸಂಸ್ಕೃತಿಕರಣದ ಪರಿಣಾಮವಾಗಿ ಶೈವಾಗಮಗಳ ರೀತಿಯ ಶಿಷ್ಟ ಸಂಸ್ಕೃತಿಯ ಆಚರಣೆಗಳ ಅನುಷ್ಠಾನದಲ್ಲಿರುವದನ್ನು ಗುರುತಿಸುತ್ತೇವೆ. ಇವೆರಡರ ವಿಶಿಷ್ಟ ಸಮಾಗಮ ಈ ಶ್ರೀ ಕ್ಷೇತ್ರದ ಧಾರ್ಮಿಕ ಮತ್ತು ಅಧ್ಯಾತ್ಮಕ ಚಟುವಟಿಕೆಗಳಲ್ಲಿ ಕಾಣಬರುತ್ತವೆ. ಗವಿಮಠದಲ್ಲಿ ನಡೆಯುವ ಪ್ರತಿಯೊಂದು ಗುರು ದೇವತಾ ಉತ್ಸವಗಳಲ್ಲಿ ಭಕ್ತ ಸಮೂದಾಯ ಸಂಭ್ರಮ ಭಕ್ತಿಯಿಂದ ನಡೆದುಕೊಳ್ಳುವದು ಕಣ್ತುಂಬುವಂತಿರುತ್ತದೆ.

ಅಮವಾಸ್ಯೆಯು ಪೂಜೆಯ ವಿಶೇಷವಾಗಿರುತ್ತದೆ ಅಂದು ಮಠದ ತುಂಬೆಲ್ಲ ಎಲ್ಲಾ ಗದ್ದುಗೆಗಳಿಗೆ ಹಾಗೂ ಕರ್ತೃ ಗದ್ದುಗೆಗೆ ವಿಶೇಷ ಅಲಂಕಾರದೊಂದಿಗೆ ವಿಶೇಷ ಮಂತ್ರ, ಆರಾಧನೆ, ಪಠಣ ನಡೆಯುತ್ತದೆ. ಅಮವಾಸ್ಯೆಯ ದಿನವೇ ಗವಿಸಿದ್ಧನ ಆರಾಧನೆ ಶ್ರೇಷ್ಠ ಎನ್ನುವ ನಂಬಿಕೆಯೇ ಇದಕ್ಕೆ ಕಾರಣ ಅಂದು ರುದ್ರಾಭಿಷೇಕವನ್ನು ಮಾಡುತ್ತಾರೆ. ಪಂಚಾಮೃತದಿಂದ ಗವಿಸಿದ್ದೇಶ್ವರರನ್ನು ಅಭಿಷೇಕ ಮಾಡುತ್ತಾರೆ. ಮಹಾ ಮಂಗಳಾರತಿಯ ನಂತರ ಶ್ರೀಗಳೇ ಭಕ್ತವೃಂದಕ್ಕೆ ಪ್ರಸಾದ, ಆಶೀರ್ವಾದ ನೀಡುತ್ತಾರೆ. ಅಂದು ಹರಕೆ ತೇರನ್ನು ಕೂಡ ಎಳೆಯುವ ಸಂಪ್ರದಾಯವು ಬೆಳೆದು ಬಂದಿದೆ, ಈ ದಿನಗಳಲ್ಲಿ ಭಕ್ತ ಜನರು ಹೆಚ್ಚಾಗಿದ್ದರಿಂದ ಅಂದು ಜಾತ್ರೆಯೋಪಾದಿಯಲ್ಲಿ ಶ್ರೀ ಮಠವು ಕಂಗೊಳಿಸುತ್ತಿದೆ.

## ಮಠಗಳು ಸಾಮಾಜಿಕವಾಗಿ :

'ಸಾಮಾಜವೆಂದರೆ ವ್ಯಕ್ತಿಗಳ ಸಮೂಹವೆಂದರ್ಥ. ಸಮಾಜ ಪದದ ವ್ಯಾಪಕತೆಯನ್ನು ನೋಡಿದಾಗ ಒಂದು ಜನಾಂಗ ಇಲ್ಲವೆ ದೇಶ ಅಷ್ಟೇ ಅಲ್ಲ ಸಮಸ್ತ ಜಗತ್ತೇ ಸಮಾಜವೆನಿಸುತ್ತಿದೆ. ಮಾನವ ಎಷ್ಟೇ ಪ್ರತಿಭಾಶಾಲಿ ಯಾದರೂ ಸಮಾಜವು ಅವನಿಗೆ ಕಾಲಕಾಲಕ್ಕೆ ಅಗತ್ಯವಾದ ಸೂಕ್ತ ಸೌಲಭ್ಯಗಳನ್ನು ಕಲ್ಪಿಸದೇ ಹೋದರೆ ಬದುಕು ಸಾರ್ಥಕವಾಗಲಾರದು. ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಸಾಮಾಜಿಕ ಸ್ಪಂದನೆಗಳು ಬಹು ಮುಖ್ಯ ಪಾತ್ರವಹಿಸುತ್ತವೆ.

"ಸಮಾಜ ಸೇವೆಯು ಯಾವುದೇ ಲಾಭದ ಉದ್ದೇಶದಿಂದ ಸಮುದಾಯದ ಪ್ರಯೋಜನಾರ್ಥವಾಗಿ ರೂಪಿತ ಆದದ್ದಲ್ಲ. ಪ್ರತಿಕೂಲ ಪರಿಸ್ಥಿತಿಗೆ ಒಳಗಾದ ವ್ಯಕಿಗಳು ಮತ್ತು ಗುಂಪುಗಳು ಸಮುದಾಯಿಕ ಸಂಪನ್ಮೂಲಗಳನ್ನುಯಾವುದರ ಮೂಲಕ ದೊರಕಿಸಿಕೊಳ್ಳಬಹುದೋ ಅಂತಹ ಮಾಧ್ಯಮಿಕ ಚಟುವಟಿಕೆಯೇ ಸಮಾಜ ಸೇವೆ ಇದೊಂದು ಪವಿತ್ರ ವೃತ್ತಿ ಒಂದು ವ್ಯವಸ್ಥಿತ ಕ್ರಮ ಜನರ ಅಂತರಂಗದ ಸುಪ್ತವಾಗಿರುವ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಗೊಳಿಸುವದು, ಎಚ್ಚರಗೊಳಿಸಿದ್ದನ್ನು ಕ್ರಿಯಾತ್ಮಕಗೊಳಿಸುವದು. ಈ ರೀತಿಯಾಗಿ ಸಮಾಜದ ಒಳಿತಿಗಾಗಿ ನಡೆಯುವ ವ್ಯಕ್ತಿಗತ ಹಾಗೂ ಸಾಮಾಜಿಕ ಚಟುವಟಿಕೆಗಳು ಸಮಾಜ ಸೇವೆಗಳೆನಿಸುತ್ತವೆ. ಎಂದು ಸಮಾಜಶಾಸ್ತ್ರಜ್ಞ – ಎ.ಈ. ಪಿಂಕ್ ಅವರು ಹೇಳಿದ್ದನ್ನು ನೆನಪಿಸಬಹುದು.

ವೀರಶೈವ ಮಠಗಳು ಸಾಮನ್ಯವಾಗಿ ಸಾಕಷ್ಟುಆಸ್ತಿ ಪಾಸ್ತಿಯುಳ್ಳವಾಗಿದ್ದು ಭಕ್ತರಿಂದ ರಾಜ ಮಹಾರಾಜರಿಂದ ಬಹಳಷ್ಟು ದಾನ ದತ್ತಿ ಧರ್ಮಗಳನ್ನು ಪಡೆದಿದ್ದವು. ಅವು ಮೂಲತ: ಧಾರ್ಮಿಕ ಸಂಸ್ಥೆಗಳೇ ಆಗಿದ್ದರೂ ಸಾಮಾಜಿಕವಾಗಿ ಹಲವು ನಿಟ್ಟಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವದನ್ನು ಕಾಣಬಹುದು. ಇವುಗಳ ಕಾರ್ಯ ಕಾರಣದ ಮೂಲ ಮಾಧ್ಯಮವು ಧರ್ಮದ ತಳಹದಿಯುಳ್ಳದ್ದಾಗಿದ್ದರೂ ಅದು ಸಾಮಾಜಿಕ ಚಟುವಟಿಕೆಗಳ ಬಗ್ಗೆ ಪರಿಷ್ಕಾರ ಕ್ರಮವುಳ್ಳದ್ದಾಗಿದೆ. ಈ ಹಿನ್ನೆಲೆಯಲ್ಲಿ ಮಠಗಳ ಬಹಳಷ್ಟು ಸೇವಾ ಕಾರ್ಯಗಳನ್ನು ಜನ ಪರವಾದ ಮೌಲ್ಯಗಳನ್ನು

ಹೊಂದಿರುತ್ತವೆ. ಈ ಕಾರಣಕ್ಕಾಗಿ ಇವತ್ತಿಗೂ ಕೂಡಾ ಮಠಗಳ ಬಗ್ಗೆ ಜನ ಸಾಮಾನ್ಯರಲ್ಲಿ ವಿಶೇಷವಾದ ಭಕ್ತಿ ಗೌರವಗಳು ಉಳಿದುಕೊಂಡಿವೆ.

ಸಾಮಾನ್ಯವಾಗಿ ಮಠಗಳಲ್ಲಿ ಪೂಜಾದಿ ಕ್ರಿಯಾವಿಧಿಗಳೇ ವಿಶೇಷವಾಗಿ ಕಾಣಬರುವದಾದರೂ ಬಂದು ಹೋಗುವ ಭಕ್ತರಿಗೆ ಪೂಜೆ ಪ್ರಸಾದ, ಪ್ರವಚನಗಳ ಮೂಲಕ ಜನಮನಗಳನ್ನು ತಣಿಸುತ್ತಿದ್ದುದು ಉಂಟು. ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶರಣರು ಬಿತ್ತಿ ಬೆಳೆದ ಸಾಮಾಜಿಕ ಕ್ರಾಂತಿಯ ಬೇರುಗಳು ವೀರಶೈವ ಮಠಗಳಲ್ಲಿಯೂ ಇಂದಿಗೂ ಹೊಸತನವನ್ನು ಮೂಡಿಸುತ್ತಲಿವೆ. ಹಿಂದೆ ಶಿವಶರಣರ ಬದುಕನ್ನು ಹಸನ ಮಾಡಿಕೊಂಡು ಇಲ್ಲಿಸಲ್ಲುವವರು ಮುಂದೆ ಅಲ್ಲಿಯೂ (ಪರಲೋಕ)ಸಲ್ಲುತ್ತಾರೆಂಬ ಸರ್ವಕಾಲಿಕ ಸತ್ಯವನ್ನು ಸಾರಿದ್ದರು.[೧]

ಇದೇ ಸತ್ಪರಂಪರೆಯನ್ನು ಮುಂದುವರೆಸಿದ ವೀರಶೈವ ಮಠಗಳು, ಮುಂದೆ ಅನೇಕ ಬಗೆಯ ಕಾರ್ಯ ಯೋಜನೆಗಳನ್ನು ರೂಪಿಸಿದ್ದರು. ತತ್ಫಲವಾಗಿ ಮಠಗಳು ದಾಸೋಹ, ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ವ್ಯವಹಾರಿಕ ಕಲ್ಯಾಣ ಹಾಗೂ ಅಂತ್ಯಸಂಸ್ಕಾರದ ಕೇಂದ್ರಗಳಾಗಿ ಕಾರ್ಯ ನಿರ್ವಹಿಸತೊಡಗಿದವು. ಹೀಗೆ ಕೊಪ್ಪಳ ಗವಿಮಠವು ಸಾಮಾಜಿಕವಾಗಿ ನಾನಾವಿಧವಾದ ಜನ ಸೇವಾ ಕೇಂದ್ರವಾಗಿ ಸೇವೆ ಸಲ್ಲಿಸಿದ ಬಗ್ಗೆ ಮುಂದೆ ಪರಿಶೀಲಿಸಲಾಗಿದೆ.

---

೧.ಭಕ್ತಿ ಪಂಥದಲ್ಲಿ ಸಮಾಜ ಕಾರ್ಯದ ಬೇರುಗಳು ಸಂ.ಡಾ: ಎಚ್.ಎಂ.ಮರುಳಸಿದ್ಧಯ್ಯ .ಪು. ೧೮-೧೯೯೪ ಬೆಂಗಳೂರು ಸರ್ಪಭೂಷಣಮಠ

## ೧) ದಾಸೋಹ ಕೇಂದ್ರವಾಗಿ:

ಸಂಸ್ಕೃತದ "ದಾಸ:+ಅಹಂ' ಎಂಬ ಪದ ಸೇರಿ ಕನ್ನಡದಲ್ಲಿ "ದಾಸೋಹಂ" ಎಂಬ ಪದವಾಗಿ ರೂಪಗೊಂಡಿದೆ. "ದಾಸೋಹವೆಂದರೆ "ನಾನು ಸೇವಕ" ಎಂಬ ಭಾವನೆಉಳ್ಳದ್ದು ಅಂದರೆ ತಾನು ಸೇವಕನಂತೆ ಶುಶ್ರೂಷೆ ಮಾಡುವದು ತನ್ನ ಕರ್ತವ್ಯವೆಂದು ಭಾವಿಸುವದು ಎಂದರ್ಥ.[೧] ವೀರಶೈವದಲ್ಲಿ ದಾಸೋಹದ ಪರಿಕಲ್ಪನೆಯು ಬಹಳ ಪವಿತ್ರ ಭಾವನೆಯುಳ್ಳದ್ದಾಗಿದೆ. ಹನ್ನೆರಡನೆಯ ಶತಮಾನದ ವಚನಕಾರರು ಗುರು-ಲಿಂಗ-ಜಂಗಮರಿಗೆ ಮಾಡಬೇಕಾಗಿದ್ದ ಸೇವೆಯನ್ನು ತ್ರಿವಿಧದಾಸೋಹವೆಂದೇ ಪರಿಭಾವಿಸಿದ್ದರು.[೨] (ಆಡಿದಡೇನು ಹಾಡಿದಡೇನು ಓದಿದಡೇನು ತ್ರಿವಿಧದಾಸೋಹವಿಲ್ಲದನ್ನಕ್ಕಾ? ಆಡದೆ ನವಿಲು? ಹಾಡದೆತಂತಿ? ಓದದೆ ಗಿಳಿ? ಎಷ್ಟೇ ವಿಧವಾದ ಪೂಜೆ ದಾಸೋಹವಿಲ್ಲದೆ ನಿಷ್ಪ್ರಯೋಜನ ಎಂಬುದು ವಚನಕಾರರ ನಿಲುವಾಗಿತ್ತು. ಇಲ್ಲೂ ಕೂಡ ಕಿಂಕರ ಭಾವದಿಂದ ಮಾಡುವ ಗುರು-ಲಿಂಗ-ಜಂಗಮ ಸೇವೆ ಎಂದೇ ಅರ್ಥೈಸಲಾಗಿತ್ತು. ದಾಸೋಹವು ದಾನವಲ್ಲ ದಾನಕ್ಕೂ ದಾಸೋಹಕ್ಕೂ ವ್ಯತ್ಯಾಸವಿದೆ. ವ್ಯಕ್ತಿ ತಾನು ಗಳಿಸಿದ್ದನ್ನು ಅನ್ಯರಿಗೆ ನೀಡುವದು ದಾನ, ದಾಸೋಹವೆಂಬುದು ವ್ಯಕ್ತಿ ತಾನು ಗಳಿಸಿದ್ದನ್ನು ಎಲ್ಲರೊಡನೆ ಸಮಭಾವದಿಂದ ಹಂಚಿಕೊಳ್ಳುವದು ಎಂದರ್ಥ. ದಾನವು ಯಜಮಾನ ಸಂಸ್ಕೃತಿಯ ಪ್ರತೀಕವಾದರೆ.ದಾಸೋಹವು ಸಮಾನತೆಯ ಸಂಸ್ಕೃತಿಯ ಪ್ರತೀಕವಾಗಿದೆ-[೩] ದಾಸೋಹವೆಂಬುದು ಯಾವುದೇ ಬಗೆಯ ಹಂಗಿಗೆ ಒಳಪಡದ ಒಂದು ಪ್ರಕ್ರಿಯೆ.

---

೧) ಕನ್ನಡ ನಿಘಂಟು ಸಂ.೪ ಕನ್ನಡ ಸಾಹಿತ್ಯ ಪರಿಷತ್ತು ಪು. ೩೮೮೩-೧೯೭೬

೨) ಸಮಗ್ರ ವಚನ ಸಂಪುಟ _೧ ವ. ೨೦೭ ಪು.೫೨-ಕನ್ನಡ ಸಂಸ್ಕೃತಿ ನಿರ್ದೇಶನಾಲಯ-೧೯೯೩

೩) ಡಾ: ಎಚ್.ಎಂ.ಮರುಳಸಿದ್ದಯ್ಯ ಹಾಗೂ ಷಣ್ಮುಖಯ್ಯ ಅಕ್ಕೂರಮಠ ಪು/ ೧೦೫. "ನಿಜಗುಣ"-ಬೆಂಗಳೂರು-೧೯೯೬

ಮಠಗಳಿಗೂ ದಾಸೋಹಕ್ಕೂ ಇರುವ ನಂಟು ಬಹಳ ಹಳೆಯದು ಬಹುಶ:ಮಠಗಳು ಹುಟ್ಟಿಕೊಂಡಾಗಲೇ ಅವರ ಒಂದು ಪ್ರಮುಖ ಅಂಗವಾಗಿ ದಾಸೋಹ ಪ್ರಾರಂಭವಾಗಿದೆ. ಹಿಂದೆ ಮಠಗಳು ಸಾಧು ಸಂತರಿಗೆ ಯಾತ್ರಾರ್ಥಿಗಳಿಗೆ ನಿರಂತರವಾಗಿ ಅನ್ನದಾನ ಮಾಡುವ ಕೇಂದ್ರಗಳಾಗಿದ್ದುದರಿಂದ ಅಲ್ಲಿ ಭೋಜನ ಶಾಲೆ ಅಥವಾ ಅನ್ನ ಛತ್ರಗಳು ಮಠದ ಅವಿಭಾಜ್ಯ ಅಂಗಗಳಾಗಿದ್ದವು. ಎಷ್ಟೋ ವೇಳೆ ಅಯ್ಯನವರ ಮಠಗಳ ಅನ್ನ ಛತ್ರಗಳೆಂದೇ ಪರಿಭಾವಿಸಲ್ಪಟ್ಟಿದ್ದವು. ಇಲ್ಲಿ ಮಠಗಳಿಂದಾಗಿ ಅನ್ನಛತ್ರಗಳಾಗಿವೆಯೇ ಹೊರತು, ಅನ್ನ ಛತ್ರಗಳಿಂದಾಗಿಮಠಗಳು ಆಗಿರಲಾರವು ಎಂಬುದನ್ನು ಗಮನಿಸಬೇಕು.

ಕೊಪ್ಪಳದ ಗವಿಮಠ ಸಹ ದಾಸೋಹ ಮಠವೆಂದು ಖ್ಯಾತಿ ಪಡೆದಿದೆ ದಾಸೋಹಕ್ಕೆಂದೇ ಗವಿಸಿದ್ದೇಶ್ವರರ ಕಾಲಕ್ಕೆ ಹೈದ್ರಾಬಾದ ನವಾಬರು ತಮ್ಮ ಆಡಳಿತದ ೪-೫ ಹಳ್ಳಿಗಳ ಆದಾಯವನ್ನು ಮಠಕ್ಕೆ ಉಂಬಳಿಯಾಗಿ ಕೊಟ್ಟ ಬಗ್ಗೆ ದಾನ ಪತ್ರ ಇದೆ. ನಂತರದ ದಿನಗಳಲ್ಲೂ ಆಗಾಗ್ಗೆ ಆಗಿ ಹೋದ ಶ್ರೀಗಳು ಈ ದಾಸೋಹವನ್ನು ಮುಂದುವರಿಸುತ್ತ ಬಂದಿರುವದನ್ನು ಈಗಲೂ ನೋಡಬಹುದು.

೧೫ನೇ ಪೀಠಾಧಿಪತಿಗಳಾದ ಗಡ್ಡದ ಅಜ್ಜಾವರೆಂದೇ ಖ್ಯಾತಿ ಪಡೆದ ಪೂಜ್ಯ ಶಿವಶಾಂತವೀರ ಮಹಾಸ್ವಾಮಿಗಳ ಕಾಲದಿಂದ ದಾಸೋಹಕ್ಕೆ ಹೆಚ್ಚಿನ ಮಹತ್ವ ಬಂದಿತೆಂಬುದು ತಿಳಿದು ಬರುತ್ತದೆ. ೧೬ ಹಾಗೂ ೧೭ನೇ ಪೀಠಾಧಿಪತಿಗಳೂ ಸಹ ದಾಸೋಹಕ್ಕೆ ಮಹತ್ವ ನೀಡಿ ಮಠದಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಮಠಕ್ಕೆ ಬಂದ ಭಕ್ತರಿಗೆಪ್ರಸಾದ ವ್ಯವಸ್ಥೆಯನ್ನು ದ್ವಿಗುಣಗೊಳಿಸಿದ್ದಾರೆ. ಈಗಿನ ೧೮ನೇ ಪೂಜ್ಯರು ಮೊನ್ನೆ ಜೂನ-೨೦೦೫ ರಲ್ಲಿ ೧೦೦೦ ( ಒಂದು ಸಾವಿರ) ವಿದ್ಯಾರ್ಥಿಗಳಿಗೆ ಆಗುವಷ್ಟು ವಸತಿ ಸಹಿತ ದಾಸೋಹ ನಿಲಯ ಹಾಗೂ ಭಕ್ತರಿಗೆ ಬೃಹತ್ ದಾಸೋಹ ಕಟ್ಟಡಕ್ಕೆ ಶಿಲಾನ್ಯಾಸವನ್ನು ಡಾ: ಶ್ರೀ ಶಿವಕುಮಾರ್ ಮಹಾಸ್ವಾಮಿಗಳು,ಶ್ರೀ ಸಿದ್ಧಗಂಗಾ ಕ್ಷೇತ್ರ ಅವರ ಅಮೃತ ಹಸ್ತದಿಂದ ನೆರವೇರಿಸಿದ್ದು ಶ್ಲಾಘನೀಯ. ಈ ಕಟ್ಟಡವು ಪ್ರಗತಿ ಹಂತದಲ್ಲಿದೆ.

**೨) ಸಾಂಸ್ಕೃತಿಕ ಕೇಂದ್ರವಾಗಿ:**

ಯಾವುದೇ ಒಂದು ಸಮಾಜದ ಉತ್ತಮ ನಡುವಳಿಕೆಗಳ ಪ್ರತೀಕವೇ ಸಂಸ್ಕೃತಿ ಮಾನವ ಸಮುದಾಯ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕವಾದ ಆಚರಣೆಗಳವರೆಗೂ ಇದರ ವ್ಯಾಪ್ತಿ ಹರಡಿಕೊಂಡಿದೆ. ಇದು ವ್ಯಕ್ತಿಯ ಬುದ್ಧಿ ವಿಕಾಸ ಹಾಗೂ ಮಾನಸಿಕ ಪಕ್ವತೆಗಳನ್ನು ಆಧರಿಸಿದ್ದಾಗಿದೆ. ಈ ಅಂಶಗಳಿಂದಾಗಿಯೇ ಮಾನವನು ಪ್ರಾಣಿಗಳಿಗಿಂತ ಭಿನ್ನ ಎಂಬುದನ್ನು ಗುರುತಿಸಬಹುದು.

ಮೂಲತ: ಸಂಸ್ಕೃತಿ ಎಂಬ ಪದವು ಆಂಗ್ಲ ಭಾಷೆಯ culture ಎಂಬ ಪದಕ್ಕೆ ಸಂವಾದಿಯಾಗಿ ಹುಟ್ಟಿಕೊಂಡಿದೆ ಇದರ ಮೂಲ ಪದವಾದ cult ಅಥವಾ cultus ಎಂದರೆ ಗೌರವಿಸು ಆರಾಧಿಸು; ಸೇವೆ ಮಾಡು,ಮೊದಲಾದ ಅರ್ಥಗಳಿವೆ[2] ಮ್ಯಾಥ್ಯೂ ಅರ್ನಾಲ್ಡ ಎಂಬ ಆಂಗ್ಲ ವಿದ್ವಾಂಸನ ಪ್ರಕಾರ ನಾವು ಅರಿತ ಆಲೋಚನೆಗಳು ಉಕ್ತಿಗಳು ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನು ನಾವು ತಿದ್ದಿಕೊಳ್ಳಲು ಸಹಾಯ ಮಾಡಬೇಕು ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ ಎನ್ನಿಸಿಕೊಳ್ಳುತ್ತದೆ.[3]

ಇಲ್ಲಿ ಸಂಸ್ಕೃತಿ ಎಂಬುದು ವ್ಯಕ್ತಿಯ ಸ್ವಭಾವಕ್ಕೆ ಸಂಸ್ಕಾರವನ್ನು ಕೊಡುವ ಒಂದು ಶಕ್ತಿ ಇದ್ದಂತೆ ಇದು ವ್ಯಕ್ತಿಯ ಮನಸ್ಸಿನ ಮೇಲೆ ವಿಶಿಷ್ಟವಾದ ಸಂಸ್ಕಾರವನ್ನು ಉಂಟು ಮಾಡಿ ಆತನನ್ನು ಪರಿಪೂರ್ಣತೆಯ ಕಡೆಗೆ ನಡೆಯುವಂತೆ ಮಾಡುತ್ತದೆ. ಸಂಸ್ಕೃತಿಯ ಪರಮ ಉದ್ದೇಶವೇ ಇದು.

ಭಾರತೀಯ ಸಂದರ್ಭದಲ್ಲಿ ಕ್ರಿ.ಶ. ೧೦ ನೇ ಶತಮಾನದಿಂದಲೂ ಶೈವ ದೇವಾಲಯ ಹಾಗೂ ಮಠಗಳು ಉತ್ತಮ ಸಂಸ್ಕೃತಿಯನ್ನು ಬೋಧಿಸಬಲ್ಲ ಸಾಂಸ್ಕೃತಿಕ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಾ ಬಂದಿವೆ. ಮುಂದೆ ೧೨ನೇ ಶತಮಾನದ ವೇಳೆಗೆ ಬಸವಾದಿ ಪ್ರಮಥರಿಂದ

---

೧) ಡಾ: ಎಂ: ಚಿದಾನಂದ ಮೂರ್ತಿ :ಕ.ಶಾ.ಸಾ:ಅಧ್ಯಯನ (೧೯೬೬ ಮೈವಿವಿ) ಪು.೪.

೨) ಇಂಗ್ಲೀಷ ಕನ್ನಡ ನಿಘಂಟು ಪ್ರ.ಮೈಸೂರು ವಿವಿ ೧೯೭೭ ಪು ೨೫೬

೩) ಉಧೃತ ಡಾ: ಎಂ ಚಿದಾನಂದಮೂರ್ತಿ ಪೂರ್ವೋಕ್ತ ಪು.೫

ಪ್ರಾರಂಭವಾಗಿದ್ದ ಕಲ್ಯಾಣದ ಅನುಭವಮಂಟಪ ವು ಒಂದು ಐತಿಹಾಸಿಕ ದಾಖಲೆಯಾಗಿ ಉಳಿದಿರುವದು ಕಂಡು ಬರುತ್ತದೆ. ಅನಂತರ ೧೬ನೇ ಶತಮಾನದ ಮಧ್ಯ ಭಾಗದಲ್ಲಿ ನೂರಾರು ವೀರಶೈವ ಮಠಗಳು ಉದಯವಾಗಿ ಹಿಂದೆ ಬಸವಾದಿ ಪ್ರಮಥರು ಹಾಕಿಕೊಟ್ಟ ಸುಸಂಸ್ಕೃತ ಪರಂಪರೆಯನ್ನು ಮುನ್ನಡೆಸುವಲ್ಲಿ ಯಶಸ್ವಿಯಾದದ್ದು ತಿಳಿದು ಬರುತ್ತದೆ. ಅದೇ ಪರಂಪರೆಯನ್ನು ಅನುಸರಿಸಿ ಕೊಪ್ಪಳದ ಗವಿಮಠ (ವೀರಶೈವ) ವೂ ಕೂಡ ೧೭-೧೮ ನೇ ಶತಮಾನದ ಸುಮಾರಿನಿಂದ ಇಲ್ಲಿಯವರೆಗೂ ಉತ್ತಮ ಸಾಂಸ್ಕೃತಿಕ ಕೇಂದ್ರವಾಗಿ ಸೇವೆ ಸಲ್ಲಿಸುತ್ತ ಬಂದಿದೆ.

೧೯-೨೦ ನೇ ಶತಮಾನದಿಂದ ಆಗಿನ ಶ್ರೀಗಳು ಮಠದಲ್ಲಿ ಸಂಗೀತ, ಕಾವ್ಯ ರಚನೆ ಹಾಗೂ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದುದು ತಿಳಿದು ಬರುತ್ತದೆ. ಸ್ವಲ್ಪೇ ಜನರಿದ್ದರೂ ಆಗಾಗ್ಗೆ ಶಿವಾನುಭವ ಗೋಷ್ಠಿಗಳನ್ನು ನಡೆಸುತ್ತಿದ್ದುದಾಗಿ ಆಸ್ಥಾನ ವಿದ್ವಾನರಾಗಿದ್ದ ಪಂ.ವೈ ನಾಗೇಶ ಶಾಸ್ತ್ರಿಗಳು ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಇತ್ತೀಚೆಗೆ ೧೭ನೇ ಪೀಠಾಧಿಪತಿಗಳ ಕಾಲಕ್ಕೆ ಶಿವಾನುಭವ ಕಾರ್ಯಕ್ರಮವನ್ನು ನಿಯತವಾಗಿ ನಡೆಸುತ್ತಾ ಬಂದಿದ್ದು ಈಗಿನ ಸ್ವಾಮಿಯವರೂ ಅದನ್ನು ಮುಂದುವರಿಸುತ್ತಾ ನಡೆದಿದ್ದಾರೆ. ಪ್ರತಿ ಸೋಮವಾರ ಮಠದಲ್ಲಿ ಶಿವಾನುಭವ ಕಾರ್ಯಕ್ರಮವು ಜರುಗುತ್ತದೆ. ಹೊಸದಾಗಿ ಈಗಿನ ಶ್ರೀಗಳು "ಅರಿವು-ಆಚಾರ" ಎಂಬ ವಿನೂತನ ಕಾರ್ಯಕ್ರಮವನ್ನು ಪ್ರತಿ ಹುಣ್ಣಿಮೆ ಹಾಗೂ ಅಮವಾಸ್ಯೆ ದಿನ ಬೇರೆ ಬೇರೆ ವಿಷಯ ಪರಿಣಿತರನ್ನು ವಿದ್ವಾಂಸರನ್ನು, ಸಂಗೀತಗಾರರನ್ನು, ಕರೆಯಿಸಿ ಕಾರ್ಯಕ್ರಮವನ್ನು ಮಾಡುತ್ತಿರುವದನ್ನು ಖುದ್ದಾಗಿ ವೀಕ್ಷಿಸಲಾಗಿದೆ.

## ೩) ಕಲ್ಯಾಣ ಕೇಂದ್ರವಾಗಿ:

ಮಠಗಳ ಜನ ಪರವಾದ ಅನೇಕ ಸಮಾಜ ಸೇವಾ ಕಾರ್ಯಗಳಲ್ಲಿ ಕಲ್ಯಾಣ (ವಿವಾಹ) ಕಾರ್ಯವೂ ಒಂದು. ಹಿಂದೆ ರಾಜಪ್ರಭುತ್ವದ ವ್ಯವಸ್ಥೆಯಲ್ಲೂ ಮಠ ಮಂದಿರಗಳೇ ನಿಜವಾದ ಸಮಾಜ ಕಲ್ಯಾಣ ಕೇಂದ್ರಗಳಾಗಿದ್ದುದನ್ನು ಸಾಬೀತುಪಡಿಸಲು ಅವರು ನೀಡಿದ್ದ ಉದಾರ ದಾನ ಧರ್ಮಗಳೇ ಸಾಕ್ಷಿಯಾಗಿವೆ. ಮದುವೆ ಎಂಬುದು ವಾಸ್ತವವಾಗಿ ಮದುವೆಯಾಗುವ ಗಂಡು ಹೆಣ್ಣಿನ ವೈಯಕ್ತಿಕವಾದ ವಿಷಯವೇ ಸರಿ. ಆದರೆ ಈ ಗಂಡು ಹೆಣ್ಣುಗಳೂ ಕೂಡ ಸಮಾಜದ ಒಂದು ಅವಿಭಾಜ್ಯ ಅಂಗವೇ ಆದ್ದರಿಂದ ಮದುವೆಯೂ ಒಂದು ಸಾಮಾಜಿಕ ವ್ಯವಸ್ಥೆಯೇ ಆಗಿದೆ. ಇಂತಹ ಸಾಮಾಜಿಕ ಹಿನ್ನೆಲೆಯುಳ್ಳ ವಿವಾಹ (ಕಲ್ಯಾಣ) ಕಾರ್ಯಗಳಿಗೂ ಮಠಗಳು ಸೂಕ್ತ ರೀತಿಯಲ್ಲಿ ನೆರವಾಗುತ್ತಾ ಬಂದಿರುವದು ಬಹಳ ಹಿಂದಿನಿಂದಲೂ ನಡೆದು ಬಂದಿರುವ ಪರಿಪಾಠವಾಗಿದೆ. ಹೀಗೆ ವೀರಶೈವ ಮಠಗಳಲ್ಲಿ ಕೂಡಾ ಭಕ್ತರ ಮನೆಯ ಮಂಗಳ ಕಾರ್ಯಗಳಿಗೆ ಕೇಂದ್ರ ಸ್ಥಳಗಳಾಗಿದ್ದುದಕ್ಕೆ ಸಾಕಷ್ಟು ಮಾಹಿತಿಗಳು ಇವೆ.

ಕೊಪ್ಪಳದಲ್ಲೂ ಗವಿಮಠದಲ್ಲಿ ಭಕ್ತರ ಕಲ್ಯಾಣ ಕಾರ್ಯವು ಬಹಳ ಹಿಂದಿನಿಂದಲೂ ನಡೆದು ಬಂದಿರುವ ವಿಚಾರ ತಿಳಿದು ಬರುತ್ತದೆ. ಸಿಕ್ಕಿರುವ ಮಾಹಿತಿ ಪ್ರಕಾರ ೧೫ನೇ ಪೀಠಾಧ್ಯಕ್ಷರಾಗಿದ್ದ ಜ. ಶಿವಶಾಂತವೀರ ಮಹಾಸ್ವಾಮಿಗಳ (ಗಡ್ಡದ ಅಜ್ಜನವರು) ಕಾಲಕ್ಕೇನೇ ಮಠದ ಮುಂದೆ ಚಪ್ಪರ (ಹಂದಿರ) ಹಾಕಿ ಭಕ್ತರ ಮದುವೆಯನ್ನು ಮಾಡಿಸಿ ಆಶೀರ್ವದಿಸಿದ್ದು ತಿಳಿದು ಬರುತ್ತದೆ. ಮುಂದೆ ೧೬ ನೇ ೧೭ನೇ ಸ್ವಾಮಿಗಳ ಕಾಲಕ್ಕೆ ಇದು ದೊಡ್ಡ ಪ್ರಮಾಣದಲ್ಲಿ ಬೆಳೆದು ಭಕ್ತರ ನೆರವಿನಿಂದ ಪ್ರತ್ಯೇಕ ಬೃಹತ್ ಕಲ್ಯಾಣ ಮಂಟಪವೊಂದನ್ನು ನಿರ್ಮಾಣ ಮಾಡಿದ್ದಾರೆ. ಸುಸಜ್ಜಿತವಾದ ಈ ಕಲ್ಯಾಣ ಮಂಟಪವು ದಾಸೋಹ ಮಹಾಮನೆಯ ಪಕ್ಕಕ್ಕೆ ಇದ್ದು ಪ್ರತ್ಯೇಕ ಅಡುಗೆ ಮನೆ, ನಳದ ನೀರಿನ ವ್ಯವಸ್ಥೆ ಹಾಗೂ ಬೀಗರು (ಗಂಡು, ಹೆಣ್ಣಿನವರು) ಉಳಿದುಕೊಳ್ಳಲಿಕ್ಕೆ ಹತ್ತು ಕೊಠಡಿಗಳು ಮೇಲು ಅಂತಸ್ತಿನಲ್ಲಿವೆ. ಐದು ಸಾವಿರ ಜನರು ಕುಳಿತು ಕೊಳ್ಳಲು ದೊಡ್ಡ ಹಾಲ್ ವ್ಯವಸ್ಥೆ ಎದುರಿಗೆ ಎತ್ತರದ ಮೇಲೆ ಮದುಮಕ್ಕಳು ಕೂಡ್ರಲು, ಮದುವೆ ವಿಧಿ ವಿಧಾನಗಳನ್ನು ನೆರವೇರಿಸಲು ವ್ಯವಸ್ಥೆ ಹಾಗೂ ಮಠದ ವತಿಯಿಂದ ಕಾಯಂ ಪುರೋಹಿತರನ್ನು ನೇಮಿಸಿ ಬಡವರಿಗೂ ಲಭ್ಯವಾಗುವಂತೆ ಸ್ವಲ್ಪೇ ಶುಲ್ಕವನ್ನು ನಿಗದಿ ಮಾಡಿರುತ್ತಾರೆ. ಆಧ್ಯತೆಯ ಮೇರೆಗೆ ೪–೫ ಲಗ್ನ ಮಾಡುವ ವ್ಯವಸ್ಥೆಯಿರುತ್ತದೆ.

ಮೊದಲು ಬೆಟ್ಟದ ಮೇಲೆ ಶಿವ-ಪಾರ್ವತಿ ಮಂಟಪದಲ್ಲಿ ಲಗ್ನಗಳು ಆಗುತ್ತಿದ್ದವೆಂದು ಹೇಳುತ್ತಾರೆ. ಬರು ಬರುತ್ತಾ ಜನಸಂದಣಿ ಹೆಚ್ಚಾಗಿದ್ದನ್ನು ಗಮನಿಸಿ ಪೂಜ್ಯರುಈ ವ್ಯವಸ್ಥೆಯನ್ನು ಮಠದ ಕೆಳಗೆ ಎಲ್ಲಾ ಜನರಿಗೂ ಅನುಕೂಲವಾದ ನವೀನ ಮಾದರಿಯಲ್ಲಿಯೇ ಮಾಡಿದ್ದಾರೆ. ಮದುವೆ ಮಾಸದಲ್ಲಿ ಪ್ರತಿ ವರ್ಷ ಪ್ರತಿ ದಿನವೂ ಒಂದಿಲ್ಲೊಂದು ಮದುವೆ, ಮುಂಜಿವೆ ಕಾರ್ಯಕ್ರಮಗಳು ಇದ್ದೇ ಇರುತ್ತವೆ.

ಮದುವೆ ಕಾರ್ಯಕ್ಕೆ ಬೇಕಾದ ಎಲ್ಲಾ ವಸ್ತುಗಳು ಮಠದ ಟ್ರಸ್ಟಿನವರಲ್ಲಿ ಸಿಕ್ಕುತ್ತವೆ. ಹೊರಗಿನಿಂದ ಏನೊಂದೂ ಸಾಮಾಗ್ರಿಗೆ ತಿರುಗಬೇಕಿಲ್ಲ. ಕಲ್ಯಾಣ ಮಂಟಪದ ಶುಲ್ಕವನ್ನು ಮಠದ ಬೆಳವಣಿಗೆ ಹಾಗೂ ಕಟ್ಟಡಗಳಿಗೆ ಉಪಯೋಗಿಸುತ್ತಾರೆ. ಇದಕ್ಕೆ ಪ್ರತ್ಯೇಕವಿಭಾಗವಿದ್ದು ಇಡೀ ಉಸ್ತುವಾರಿಯನ್ನು ಸ್ವಾಮಿಗಳೇ ಆಗಾಗ್ಗೆ ಪರಿಶೀಲಿಸುತ್ತಾರೆ. ಒಂದು ವರ್ಷದಲ್ಲಿ ಸರಿ ಸುಮಾರು ಐವತ್ತಕ್ಕೂ ಹೆಚ್ಚು ಮದುವೆಗಳು ಆಗಿರುವ ಉದಾಹರಣೆ ಸಿಕ್ಕಿದೆ. ಎಲ್ಲಾ ಜಾತಿ ಮತದ ಜನರು ಇದರ ಬಳಕೆಯನ್ನು ಮಾಡುತ್ತಿರುವದು ಶ್ಲಾಘನೀಯ.

## ಮಠಗಳು ಧಾರ್ಮಿಕವಾಗಿ:

ಮಾನವ ಸಂಸ್ಕೃತಿಯಲ್ಲಿ ಧರ್ಮಕ್ಕೆ ಮಹತ್ವದ ಸ್ಥಾನವಿದೆ. ಧರ್ಮವು ಯಾವುದೇ ಒಂದು ಜನಾಂಗದ ಆತ್ಮ ಸ್ವರೂಪವಿದ್ದಂತೆ ಸಾಮಾನ್ಯವಾಗಿ ಧರ್ಮ ಎಂದರೆ ನೀತಿ ನಿಯಮಗಳಿಂದ ಒಡಗೂಡಿದ ಸತ್ಕಾರ್ಯಎಂಬ ಅರ್ಥವಿದ್ದರೂ ವಿಶೇಷವಾಗಿ ಆಧ್ಯಾತ್ಮ ಸಂಬಂಧವುಳ್ಳದ್ದು ಎಂದೇ ಅರ್ಥೈಸುವದುಂಟು. ಇಲ್ಲಿ ಆಧ್ಯಾತ್ಮ ದೃಷ್ಟಿಯಿಂದ ಜೀವನವನ್ನು ನಡೆಸುವದು ಧರ್ಮ ಎನಿಸಿಕೊಳ್ಳುತ್ತದೆ. ಧರ್ಮವು ವ್ಯಷ್ಟಿಯಿಂದ ಸಮಷ್ಟಿಯವರೆಗೆ ಪ್ರತಿಯೊಂದು ಹಂತದಲ್ಲಿ ಪ್ರಭಾವ ಬೀರುವಂತಹುದು. ಆದರಲ್ಲೂ ವ್ಯಕ್ತಿಯ ಆಂತರಿಕ ಹಾಗೂ ಬಾಹ್ಯ ಜೀವನದ ಮೇಲೆ ವಿಶೇಷವಾಗಿ ಬೆಳಕು ಚೆಲ್ಲುವಂತಹದ್ದು.

ಕೊಪ್ಪಳ ಗವಿಮಠವೂ ಕೂಡ ಧಾರ್ಮಿಕವಾಗಿ ವೀರಶೈವ ಪರಂಪರೆಯನ್ನು ಕಟ್ಟು ನಿಟ್ಟಾಗಿ ಪಾಲಿಸಲು ಭಕ್ತರಿಗೆ ವಿವರಿಸುತ್ತಾ ವಿಧಿ ವಿಧಾನಗಳನ್ನು ಮುನ್ನಡೆಸುತ್ತ ಬಂದಿದೆ. ಎಲ್ಲಾ ಧರ್ಮಗಳವರೂ ಸಹ ತಮ್ಮ ಧಾರ್ಮಿಕ ಪ್ರತಿಪಾದನೆಗೆ ಹಾಗೂ ಪ್ರಚಾರಾರ್ಥವಾಗಿ ತಮ್ಮದೇ ಆದ

ಮಠ ಮಂದಿರಗಳೆಂಬ ಧಾರ್ಮಿಕ ಕೇಂದ್ರಗಳ ನಿರ್ಮಾಣಕ್ಕೂ ಕಾರಣವಾಗಿದ್ದರು. ಈ ಹಿನ್ನೆಲೆಯಲ್ಲಿ ಹನ್ನೆರಡನೇ ಶತಮಾನದಿಂದ ಈಚೆಗೆ ಕಾರ್ಯ ಪ್ರವೃತ್ತವಾದ ವೀರಶೈವ ಮಠಗಳು ೧೫-೧೬ ನೇ ಶತಮಾನದ ವೇಳೆಗೆ ನಾಡಿನಾದ್ಯಂತ ವ್ಯಾಪಕವಾದ ಮಟ್ಟದಲ್ಲಿ ತಮ್ಮ ಕಾರ್ಯ ಕ್ಷೇತ್ರಗಳನ್ನು ವಿಸ್ತರಿಸಿಕೊಂಡವು. ಇಪ್ಪತ್ತನೇ ಶತಮಾನದಲ್ಲಿ ಕೂಡ ನಾಡಿನ ಪ್ರಭಾವಿ ಧರ್ಮಗಳಲ್ಲಿ ಒಂದಾಗಿ ವೀರ ಶೈವ ಧರ್ಮವು ಉಳಿದಿದ್ದಲ್ಲಿ, ಈ ಧರ್ಮದ ಮಠ - ಮಂದಿರಗಳೇ ಮುಖ್ಯ ಕಾರಣವೆಂಬುದು ಸ್ತುತ್ಯರ್ಹ. ಹೀಗೆ ಕೊಪ್ಪಳ ಗವಿಮಠವೂ ಕೂಡಾ ಅಂತಹುದೇ ಹಿನ್ನೆಲೆ ಉಳ್ಳದ್ದು ಎಂಬುದನ್ನು ಇಲ್ಲಿ ಕಾಣಬಹುದು.

ವೀರಶೈವ ಸಮಾಜ ಬಾಂಧವರಲ್ಲಿ ಎಲ್ಲಾ ಧಾರ್ಮಿಕ ಆಚರಣೆಗಳೂ ಅಯ್ಯನವರ(ಗುರುಗಳ) ನೇತೃತ್ವದಲ್ಲಿ ನಡೆಯುವದೇ ಸಂಪ್ರದಾಯ. ಇವರಲ್ಲಿ ಜನನ, ಮದುವೆ, ಮರಣ ಆದಿಯಾಗಿ ಪ್ರತಿಯೊಂದು ಸಂಸ್ಕಾರವೂ ಅನೇಕ ವಿಧಿ-ವಿಧಾನಗಳನ್ನು ಒಳಗೊಂಡಿದ್ದು, ವೈದಿಕ ಸಂಪ್ರದಾಯಗಳಿಗೆ ಪರ್ಯಾಯ ಸೂತ್ರವುಳ್ಳದ್ದಾಗಿವೆ. ವೀರಶೈವರ ಧಾರ್ಮಿಕ ಸಂಸ್ಕಾರಗಳಾದ ಲಿಂಗ ಧಾರಣೆ, ನಾಮಕರಣ, ಜವಳ, ದೀಕ್ಷಾಬೋಧೆ, ಮದುವೆ, ಮರಣ ಮುಂತಾದ ವಿಧಿಗಳನ್ನು ಪೂರೈಸಬೇಕಾದಾಗ ಗುರುಗಳು ಮುಖ್ಯ ಪಾತ್ರವಹಿಸುತ್ತಾರೆ.[೧]

---

೧) ಶಿವಾನಂದ ಗುಬ್ಬಣ್ಣವರ-ಲಿಂಗಾಯತ ಸಂಸ್ಕಾರಗಳು,ಧಾರವಾಡ,೧೯೮೪ಪುಟ-೨೦-೨೩.

## ೧) ಸಾಮೂಹಿಕ ದೀಕ್ಷೆ :-

ದೀಕ್ಷೆಯು ಪವಿತ್ರ ಕಾರ್ಯಗಳಿಗಾಗಿ ಆರಂಭದಲ್ಲಿ ನಡೆಸುವ ಒಂದು(ಪವಿತ್ರ) ವಿಶೇಷ ಸಂಸ್ಕಾರ ಇದೊಂದು ವ್ರತ ಅಥವಾ ನಿಯಮ ಉಪದೇಶವನ್ನು ನೀಡುವಂತಹುದು.

ವೀರಶೈವ ಪರಿಭಾಷೆಯಲ್ಲಿ ಹೇಳುವದಾದರೆ "ಗುರುವುಶಿಷ್ಯನಿಗೆ ಅನುಗ್ರಹಿಸುವ ಮತ ಸಂಸ್ಕಾರ ವಿಶೇಷ"[೧]. 'ಸಿದ್ಧಾಂತ ಶಿಖಾಮಣಿ'ಯಲ್ಲಿ "ದೀಯತೆ ಚ ಶಿವಜ್ಞಾನಂ ಕ್ಷಿಯತೇ ಪಾಶಬಂಧನಂ। ಯಸ್ಮಾದತ:ಸುಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈ:॥ ಎಂದಿದೆ. ಅಂದರೆ ಮಹಾಲಿಂಗ ಸ್ವರೂಪದ ಶಿವಜ್ಞಾನವನ್ನಿತ್ತುದೇಹಿಯಲ್ಲಿರುವ ಮಲಪಾಶಬಂಧನಗಳನ್ನು ಬಿಡುಸುವದೇ ದೀಕ್ಷೆ ಎನಿಸುತ್ತದೆ.

ವಿಶೇಷಾರ್ಥದಲ್ಲಿ ದೀಕ್ಷೆ ಎಂದರೆ ಒಂದು ಆಗಮಿಕ ವಿಧಿ ಧಾರ್ಮಿಕ ಸಂಸ್ಕಾರ, ಅನುಗ್ರಹ, ಗುರುಕಾರುಣ್ಯ ಎಂಬ ಅರ್ಥಗಳಿವೆ.[೨]

ಕೊಪ್ಪಳ ಗವಿಮಠದಲ್ಲೂ ದೀಕ್ಷಾ ವ್ಯವಸ್ಥೆ ಇರುತ್ತದೆ. ಆಗಾಗ್ಗೆ ಇಂಥ ಸಂದರ್ಭಗಳಲ್ಲಿ ಶಿಷ್ಯರಿಗೆ ಲಿಂಗದೀಕ್ಷೆಯನ್ನು ಮಾಡಿಸಿರುವ ಉದಾಹರಣೆಗಳಿವೆ. ಮಠದ ವತಿಯಿಂದಲೇ ಗ್ರಾಮೀಣ ಪ್ರದೇಶದಲ್ಲಿ ಕೆಲವು ಸಲ ಲಿಂಗದೀಕ್ಷಾ ಕಾರ್ಯಕ್ರಮವನ್ನು ಇಟ್ಟುಕೊಂಡ ಬಗ್ಗೆ ಮಾಹಿತಿಯನ್ನು ಮಠದ ಹಿರಿಯರು ವಿವರಿಸಿದರು. ಮಠದಲ್ಲಿಯೇ ಲಿಂಗಕ್ಕೆ ಕಂತಿಯನ್ನು ಮಾಡಿಕೊಡುವ ವ್ಯವಸ್ಥೆಯನ್ನು ಮಾಡಿದ್ದಾರೆ.

---

೧) ಕನ್ನಡ ನಿಘಂಟು : ಸ. ೪ ಕ.ಸಾ.ಪ. ೧೯೭೯ ಪುಟ ಸಂ: ೩೯೩೮

೨) "ಸಿದ್ಧಗಂಗಾ ಶ್ರೀ" ಸಂ: ಪಂ.ಚನ್ನಪ್ಪ ಎರೇಸೀಮಿ, ಟಿ.ಆರ್. ಮಹಾದೇವಯ್ಯ ೧೯೮೧ ಪು. ೬೦೬ ಡಾ:ಜ.ಚ.ನಿ. "ದೀಕ್ಷೆ"

## ಹಬ್ಬಗಳ ಆಚರಣೆ:

ಗದ್ದುಗೆ ಎಂದರೆ ಕುಳಿತುಕೊಳ್ಳುವ ಪೀಠ, ಭದ್ರಾಸನ ಎಂಬ ಬೇರೆ ಬೇರೆ ಅರ್ಥಗಳುಂಟು. ಆದರೆ ವೀರಶೈವ ಪರಿಭಾಷೆಯಲ್ಲಿ ಹೇಳುವುದಾದರೆ ಜಂಗಮರ, ಮಠಾಧೀಶರ ಸಮಾಧಿ ಎಂದರ್ಥ.[೧] ಎಲ್ಲಮಠಗಳಲ್ಲೂ ಮೂಲ ಕರ್ತೃಗಳ ಗದ್ದುಗೆಗಳಿರುವದನ್ನು ನೋಡಬಹುದು. ಈ ಗದ್ದುಗೆಗಳ ಸಲುವಾಗಿಯೇ ಅವುಗಳ ಆರಾಧನೆಗಳಿಗೆ ಅನುಕೂಲವಾಗುವಂತೆ ಅನೇಕ ಭಕ್ತರು ವಿಶೇಷವಾದ ದಾನಗಳನ್ನು ನೀಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಮಠಗಳಲ್ಲಿರುವ ಗದ್ದುಗೆಗಳು ಭಕ್ತರ ಆರಾಧನಾ ಕೇಂದ್ರಗಳಾಗಿದ್ದು ವಿಶೇಷ ಸಮಾರಾಧನೆಗಳಿಗೆ, ಉತ್ಸವಾದಿ ಆಚರಣೆಗಳಿಗೆ ಮುಖ್ಯಕಾರಣಗಳಾಗಿವೆ.

ಕಾರ್ತಿಕ ಶ್ರಾವಣ ಮತ್ತು ಧನುರ್ಮಾಸಗಳಲ್ಲಿ ಇಲ್ಲಿಯ ಗದ್ದುಗೆಗಳಿಗೆ ಪ್ರತಿನಿತ್ಯ ಬೆಳಿಗ್ಗೆ ಹಾಗೂ ಸಾಯಂಕಾಲ 'ರುದ್ರಾಭಿಷೇಕ' ಹಾಗೂ ಸಹಸ್ರ ಬಿಲ್ವಾರ್ಚನೆ'ಗಳನ್ನು ಏರ್ಪಡಿಸುತ್ತಾರೆ.
ರುದ್ರಾಭಿಷೇಕದ ಸಂಧರ್ಭದಲ್ಲಿ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಎಳನೀರು, ನಿಂಬೆ, ಬಾಳೆ, ಕಬ್ಬು, ಬೇಲ, ದ್ರಾಕ್ಷಿ, ಕರ್ಜೂರ, ಸೌತೆ, ಪರಮಾನ್ನ, ಗಂಧ, ಅಕ್ಷತೆ, ಪಚ್ಚಕರ್ಪೂರ, ಕುಂಕುಮ ಕೇಸರಿ ಇತ್ಯಾದಿ ಹದಿನೆಂಟು ಬಗೆಯ ಪದಾರ್ಥಗಳಿಂದ ವಿಶೇಷ ಅಭಿಷೇಕ ಮಾಡುತ್ತಾರೆ. ಜೊತೆಗೆ ರುದ್ರಮಂತ್ರವನ್ನು ಪಠಿಸುತ್ತಾ ಶಿವಲಿಂಗಕ್ಕೆ(ಗದ್ದುಗೆಗೆ) ಅಭಿಷೇಕವನ್ನು ಮಾಡುತ್ತಾರೆ. ಇನ್ನು ಸಹಸ್ರ ಬಿಲ್ವಾರ್ಚನೆ ಎಂದರೆ ಸಾವಿರ ಬಾರಿ ಶಿವಮಂತ್ರವನ್ನು ಜಪಿಸುತ್ತ ,ಪ್ರತಿ ಮಂತ್ರವನ್ನು ಹೇಳುವಾಗಲೂ ಶಿವಲಿಂಗಕ್ಕೆ ಬಿಲ್ವಪತ್ರಿಯನ್ನು ಸಮರ್ಪಿಸುತ್ತಾರೆ.

---

೧) ಕನ್ನಡ ನಿಘಂಟು - ಸಂ.೨ ಕ.ಸಾ.ಪ. ಬೆಂಗಳೂರು-೧೯೭೬,ಪು-೨೪೩೯

ಪ್ರತಿ ದಿನಸಂಜೆ ಮಠದಲ್ಲಿ 'ಶಿವಾನುಭವ,ಶಿವಕಥೆ, ಧಾರ್ಮಿಕ ಶ್ರವಣ ಹಾಗೂ ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ. ಧನುರ್ಮಾಸದಲ್ಲಿ ಮಠದಲ್ಲಿ ಭಕ್ತರಿಗೆ ವಿಶೇಷ ಪೂಜಾ ಸ್ಥಳವಾಗಿ ಪರಿವರ್ತನೆಯಾಗುತ್ತದೆ. ಎಷ್ಟೋಜನ ಭಕ್ತರು ಈ ಮಾಸದಲ್ಲಿ ಪ್ರತಿ ದಿನ ಬೆಳಗಿನ ಜಾವ ಮಠದಲ್ಲಿ ಹಾಜರಿದ್ದು, ಅಲ್ಲಿಯೇ ಸ್ನಾನ ಮಾಡಿ ಮಠದ ಸ್ವಾಮಿಗಳೊಂದಿಗೆ ಹಾಗೂ ಹಿರಿಯ ಗುರುಗಳ ಗದ್ದುಗೆಯ ಬಳಿ ಶಿವಪೂಜೆ ಮಾಡುವ ಪ್ರತೀತಿ ರೂಢಿಯಲ್ಲಿರುತ್ತದೆ.

ಗವಿಮಠದಲ್ಲೂ ಈ ರೀತಿ ವಿಶೇಷ ಪೂಜಾ ವ್ಯವಸ್ಥೆಯನ್ನು ಏರ್ಪಡಿಸಿರುತ್ತಾರೆ. ಸಂಕ್ರಾಂತಿ, ಶಿವರಾತ್ರಿ, ಯುಗಾದಿ, ದೀಪಾವಳಿ ಮೊದಲಾದ ಹಬ್ಬಗಳನ್ನು ಆಚರಿಸಲಾಗುತ್ತಿದೆ. ನವರಾತ್ರಿ ಉತ್ಸವವನ್ನು ಈ ಮಠದಲ್ಲಿ ಬಹಳೇ ಉತ್ಸಾಹದಿಂದ ಆಚರಿಸುತ್ತಾರೆ. ಆ ದಿನ ಪ್ರತಿ ಸಂಜೆ ವಿದ್ವತ್ ಸಭೆ, ಸಂಗೀತ–ಗೋಷ್ಠಿಗಳನ್ನು ನಡೆಸುತ್ತಾರೆ. ಇದರಲ್ಲಿ ಅನ್ಯಮತೀಯ ಜನರೂ ಸಹ ಭಾಗವಹಿಸುತ್ತಿದ್ದುದು ವಿಶೇಷವಾಗಿದೆ.

ಸಂಸ್ಕೃತದ ಪರ್ವ ಪದಕ್ಕೆ ತದ್ಭವ ಕನ್ನಡದಲ್ಲಿ 'ಹಬ್ಬ' ಎಂಬ ಪದವಿದೆ. ಸಂಕ್ರಮಣ ಹುಣ್ಣಿಮೆ ಹಾಗೂ ಅಮವಾಸ್ಯೆ ಮುಂತಾದ ಪರ್ವಕಾಲಗಳನ್ನು ಹಬ್ಬಗಳೆಂದು ಆಚರಣೆ ಮಾಡುತ್ತಾರೆ.

ಸಾಮಾನ್ಯ ಭಕ್ತರ ಮನೆಯಲ್ಲಿ ವಿಶೇಷವಾದ ಹಬ್ಬ ಹರಿದಿನಗಳ ಆಚರಣೆ ನಡೆಯುವದು ಸಹಜ ಆದರೆ ವೀರಶೈವ ಮಠಗಳಲ್ಲೂ ಕೂಡ ಕೆಲವು ವಿಶಿಷ್ಟವಾದ ಹಬ್ಬ ಉತ್ಸವಾದಿಗಳ ಆಚರಣೆ ನಡೆಯುವದುಂಟು ಬಹಳಷ್ಟು ವೀರಶೈವ ಮಠಗಳಲ್ಲಿ ನಡೆಯುವ ಹಬ್ಬ ಉತ್ಸವಾದಿಗಳಿಗೆ ಮೂಲ ಕಾರಣ ಆಯಾ ಮಠಗಳಲ್ಲಿರುವ ಗದ್ದುಗೆಗಳ (ಹಿರಿಯ ಗುರುಗಳ ಸಮಾಧಿ) ಮುಖ್ಯ ಪಾತ್ರವಹಿಸುತ್ತವೆ. ಸಾಮಾನ್ಯವಾಗಿ ಗದ್ದುಗೆಗಳಿಲ್ಲದ ವೀರಶೈವ ಮಠಗಳೇ ಇಲ್ಲವೆನ್ನಬಹುದು.

ಕೊಪ್ಪಳ ಗವಿಮಠದಲ್ಲಿಯೇ ಹಿಂದಿನ ಏಳು ಸ್ವಾಮಿಗಳ ಗದ್ದುಗೆ ಇದ್ದು ಇದರಲ್ಲಿ ಗವಿಶಿದ್ದೇಶ್ವರ ಗದ್ದುಗೆಯನ್ನೇ ಕರ್ತೃ ಗದ್ದುಗೆ ಎಂದು ಇಂದಿಗೂ ಪೂಜೆಗೊಳ್ಳುತ್ತದೆ. ಇದಕ್ಕಾಗಿ ಭಕ್ತರು ತಲಾ ರೂ: ೧೦೦೦–೦೦ ಬ್ಯಾಂಕಿನಲ್ಲಿಟ್ಟು ಪೂಜಾಕಾರ್ಯ ನಿರಂತರ ಸಾಗಲು ವ್ಯವಸ್ಥೆ ಮಾಡಿದ್ದಾರೆ. ಪ್ರತಿ ನಿತ್ಯವೂ ಈ ಗದ್ದುಗೆಗೆ ರುದ್ರಾಭಿಷೇಕವು ನಡೆಯುತ್ತಿದೆ. ಅದಕ್ಕಾಗಿ ಸರದಿಯ ಪ್ರಕಾರ ನಾಲ್ಕು

ಜನರು ಪೂಜಾರಿಗಳು ಇದ್ದು ಬೆಳಿಗ್ಗೆ ಐದು ಗಂಟೆಗೆ ಪೂಜೆ ಪ್ರಾರಂಭಗೊಳ್ಳುತ್ತದೆ ಹಾಗೂ ಶ್ರಾವಣ ಮಾಸದಲ್ಲಿ ವಿಶೇಷ ಪೂಜೆಯೊಂದಿಗೆ ರುದ್ರಾಭಿಷೇಕವು ಜರುಗುತ್ತದೆ. ಈ ಮಾಸದಲ್ಲಿ ಭಕ್ತ ಜನರು ವಿಶೇಷವಾಗಿ ಮಠಕ್ಕೆ ನಡೆದುಕೊಳ್ಳುತ್ತಾರೆ. ಹಾಗೂ ಅನ್ನ ಮಹಾದಾಸೋಹವು ವಿಶೇಷವಾಗಿ ಇರುತ್ತದೆ. ಇದರೊಂದಿಗೆ ಉಳಿದ ಗದ್ದುಗೆಗಳಿಗೂ ಪೂಜೆ ಸಲ್ಲುತ್ತದೆ. ಈ ಕರ್ತೃಗದ್ದುಗೆ ನೆಲಮಾಳಿಗೆಯಲ್ಲಿದೆ. ಯಾಕೆಂದರೆ ಶ್ರೀ ಗವಿಸಿದ್ದೇಶ್ವರರು ಜೀವಂತ ಸಮಾಧಿ ಹೊಂದಿದ್ದರಿಂದ ಗದ್ದುಗೆಯ ಮೇಲೆ ಛತ್ತನ್ನು ಕಟ್ಟಿ ಗದ್ದುಗೆಗೆ ಬರಲು ಪಾವಟಿಗೆ ಮಾಡಿದ್ದಾರೆ. ಪ್ರತಿ ವರ್ಷ ಜುಲೈ ೧೦ ರಂದು ಜ. ಮರಿಶಾಂತವೀರ ಸ್ವಾಮಿಗಳ ಪೂಣ್ಯಾರಾಧನೆ ನಡೆಯುತ್ತದೆ. ಅಂದು ಬಳಗದ ವತಿಯಿಂದ ಬೆಳಗಿನಿಂದಲೂ ಸಾಯಂಕಾಲದ ವರೆಗೆ ಅನೇಕ ಕಾರ್ಯಕ್ರಮಗಳು ಜರುಗುತ್ತವೆ. ಬೆಳಿಗ್ಗೆ ಪೂಜಾ ವಿಧಿಗಳು ಮಧ್ಯಾನ್ಹ ವಿಶೇಷ ಉಪನ್ಯಾಸಕರನ್ನು ಅವ್ಹಾನಿಸಿ ಉಪನ್ಯಾಸ ಹಾಗೂ ಪುಣ್ಯ ಸ್ಮರಣೆ ಕಾರ್ಯಕ್ರಮವು ಜರುಗುತ್ತದೆ. ಇದನ್ನು ಗುರುವಂದನಾ ಕಾರ್ಯಕ್ರಮವೆಂದು ಸಹ ಕರೆಯುಬಹುದು.

ಸಾಯಂಕಾಲ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸಂಗೀತ ವಿದ್ವಾಂಸರಿಂದ ಸಂಗೀತಾರಾಧನೆಯು ಇಡೀ ರಾತ್ರಿ ಜರುಗುತ್ತದೆ. ನಾಡಿನ ವಿವಿಧ ಭಾಗಗಳಿಂದ ಸಂಗೀತಗಾರರು ಆಗಮಿಸಿ ಪೂಜ್ಯರಿಗೆ ನಮನಸಲ್ಲಿಸುತ್ತಾರೆ.

ಏಪ್ರೀಲ್–೩ ರಂದು ಜ: ಶಿವಶಾಂತವೀರ ಮಹಾಸ್ವಾಮಿಗಳ ಪುಣ್ಯಾರಾಧನೆ ಜರುಗುತ್ತದೆ. ( ೧೭ ನೇ ಅವರು)ಅಂದೂ ಕೂಡಾ ಗುರುವಂದನ ಕಾರ್ಯಕ್ರಮವು ವಿಶೇಷ ಪೂಜೆ ಉಪನ್ಯಾಸ ಭಕ್ತಿಸಂಗೀತದ ಕಾರ್ಯಕ್ರಮವು ಜರುಗುತ್ತದೆ.ಆ ದಿನ ಕೊಪ್ಪಳದ ಸುತ್ತಲಿನ ಹರ–ಗುರು ಚರ ಮೂರ್ತಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಆಶೀರ್ವಚನ ನೀಡುತ್ತಾರೆ. ಈ ಶ್ರೀಗಳ ಸಂಕಲ್ಪದಂತೆ ಬೃಹತ ಗ್ರಂಥಾಲಯವೊಂದನ್ನು ಸ್ಥಾಪಿಸಲು ಪ್ರಯತ್ನ ನಡೆದಿದೆ. ಸಧ್ಯದ ಶ್ರೀಗಳು ಇದನ್ನು ಆದಷ್ಟು ತೀವ್ರ ನೆರವೇರುವಂತೆ ಮಾಡುವಲ್ಲಿ ಆಶಾಭಾವನೆ ಇದೆ. ಹಾಗೂ ಕೆರೆಯ ದಂಡೆಯ ಸುತ್ತಲೂ ಕಲ್ಲು ಮಂಟಪ ನಿರ್ಮಿಸಿ ಪುರಾತನ ಶಿಲ್ಪಕಲೆಯ ಮೆರಗು ನೀಡಿ ಜಲ ವಿಹಾರ ವೀಕ್ಷಣೆಯ ತಾಣವನ್ನಾಗಿಸಬೇಕೆಂದು ಪೂಜ್ಯರ ಇಚ್ಛೆಯಾಗಿತ್ತು. ಅದನ್ನು ಕೂಡಾ ಅದ್ಯತೆಯಮೇರೆಗೆ ಮಾಡುವ ಸಂಕಲ್ಪ ಹೊಂದಿದ್ದಾರೆ. ಈ ಕೆಲಸವು ಈಗ ಪ್ರಾರಂಭವಾಗಿದೆ.

## ಶಿವಾನುಭವ ಕಾರ್ಯಕ್ರಮ :

ಸುಮಾರು ೨೫ ವರ್ಷಗಳಿಂದ ಗವಿಮಠದಲ್ಲಿ ಪ್ರತಿ ಸೋಮವಾರ ಸಾಯಂಕಾಲ ಶಿವಾನುಭವ ಕಾರ್ಯಕ್ರಮವು ನಡೆಯುತ್ತಿದೆ. ಹಿಂದಿನ ಪೂಜ್ಯರು ಈ ಕಾರ್ಯಕ್ರಮಗಳನ್ನು ಪ್ರಾರಂಭಿಸಿದ್ದು ಇಂದಿಗೂ ಅವ್ಯಾಹತವಾಗಿ ಸಾಗುತ್ತಿದೆ. ಈ ಕಾರ್ಯಕ್ರಮದಲ್ಲಿ ನಾಡಿನ ಖ್ಯಾತ ಕವಿಗಳು ಲೇಖಕರು, ಬರಹಗಾರರು, ಸಂಗೀತಜ್ಞರು ಕಲಾವಿದರು, ಹಾಗೂ ಮಠಾಧಿಪತಿಗಳು ಪಾಲ್ಗೊಂಡು ತಮ್ಮ ಅಮೂಲ್ಯ ಕಲೆ ಸಾಹಿತ್ಯದಿಂದ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ್ದಾರೆ. ಪ್ರಾರಂಭದಲ್ಲಿ ಕೆಲವೇ ಜನ ಭಕ್ತರ ಸಮ್ಮುಖದಲ್ಲಿ ಈ ಕಾರ್ಯಕ್ರಮವು ಆರಂಭಗೊಂಡು ಬರುಬರುತ್ತ ಭಕ್ತರ ಸಂಖ್ಯೆ ಹೆಚ್ಚುತ್ತಾ ಹೋಗಿ ಈಗ ಶಿವಾನುಭವ ಕಾರ್ಯಕ್ರಮದಲ್ಲಿ ಜನಸ್ತೋಮ ಕಿಕ್ಕಿರಿದು ತುಂಬಿರುತ್ತದೆ. ಯಾಕೆಂದರೆ ವೈವಿಧ್ಯಮಯ ಕಾರ್ಯಕ್ರಮವನ್ನು ಆಯೋಜಿಸಿರುತ್ತಿರುವದೇ ಇದಕ್ಕೆ ಕಾರಣ ಇದರಿಂದ ಇಡೀ ಭಕ್ತ ಸಮೂಹಕ್ಕೆ ಸಾಹಿತ್ಯ, ಸಂಸ್ಕೃತಿ, ಸಂಗೀತ ಹಾಗೂ ಧಾರ್ಮಿಕ ವಿಷಯಗಳ ಸವಿಯೂಟ ಸಿಗುತ್ತದೆ. ಅದಕ್ಕಾಗಿ ಶಿವಾನುಭವ ಮಂಟಪ ಕಟ್ಟಿಸಿದ್ದಾರೆ.

## ಅರಿವು ಆಚಾರ ಕಾರ್ಯಕ್ರಮ :

ಸಧ್ಯದ ೧೮ನೇ ಜಗದ್ಗುರು ಪೂಜ್ಯ ಗವಿಸಿದ್ದೇಶ್ವರ ಸ್ವಾಮೀಜಿ ಅವರು ತಾವು ಅಧಿಕಾರ ವಹಿಸಿಕೊಂಡಮೇಲೆ ಪ್ರತಿ ಹುಣ್ಣಿಮೆಯ ದಿನ ಹಾಗೂ ಅಮವಾಸ್ಯೆಯ ದಿನ ಅರಿವು-ಆಚಾರ ಎಂಬ ಅಧ್ಯಾತ್ಮ ಸಾಂಸ್ಕೃತಿಕ ವಿನೂತನ ಕಾರ್ಯಕ್ರಮವನ್ನು ಪ್ರಾರಂಭಿಸಿದ್ದಾರೆ. ಸ್ವತ: ಈಗಿನ ಪೂಜ್ಯರೇ ಉಪನ್ಯಾಸ, ಆಶೀರ್ವಚನ ನೀಡುತ್ತಾರೆ. ಇಂದಿನ ಪೀಳಿಗೆಗೆ ಆಧ್ಯಾತ್ಮ ವಿಷಯ ತೀರ ಅವಶ್ಯವಿದೆ ಎಂಬುದನ್ನು ಮನಗಂಡ ಶ್ರೀಗಳು ಆಳವಾದ ಅಧ್ಯಯನ ಹೊಂದಿದ ಪೂಜ್ಯರು ಭಕ್ತ ಸಮೂಹಕ್ಕೆ ತುಂಬಾ ಉಪಕಾರ ಮಾಡುತ್ತಿದ್ದಾರೆ. ಅಲ್ಲದೇ ಆಧ್ಯಾತ್ಮ ಪಂಡಿತರನ್ನು ಆಮಂತ್ರಿಸಿ ಉಪನ್ಯಾಸ ಕಾರ್ಯಕ್ರಮವನ್ನು ಇದರಲ್ಲಿ ಮಾಡುತ್ತಿರುವದು ಶ್ಲಾಘನೀಯ.

## ನವರಾತ್ರಿ ಉತ್ಸವ:

ನವರಾತ್ರಿ ಉತ್ಸವವನ್ನು ಹಿಂದಿನ ಮಹಾಸ್ವಾಮಿಗಳ ಕಾಲದಿಂದಲೂ ಬಹಳ ಅದ್ದೂರಿಯಾಗಿ ಆಚರಿಸುತ್ತ ಬಂದಿದ್ದಾರೆ. ಪ್ರತಿನಿತ್ಯ ಸಂಜೆ ಮಠದಲ್ಲಿ ವಿದ್ವತ್ ಸಭೆ, ಸಂಗೀತ ಗೋಷ್ಠಿಗಳನ್ನು ನಡೆಸುತ್ತಾರೆ. ಈ ಸಂದರ್ಭದಲ್ಲಿ ಪ್ರಮುಖವಾಗಿ ಅನ್ಯಮತೀಯರ ಧಾರ್ಮಿಕ ಮುಖಂಡರುಗಳನ್ನು ಕರೆಯಿಸಿ ಸರ್ವ ಧರ್ಮಸಮನ್ವಯ ಸಭೆಗಳನ್ನು ನಡೆಸುವ ಬಗ್ಗೆ ಉಲ್ಲೇಖಗಳು ಇವೆ. ಡಾ: ಪಂಚಾಕ್ಷರಿ ಗವಾಯಿ ಹಾಗೂ ಅವರ ಅನೇಕ ಶಿಷ್ಯಂದಿರು ಡಾ॥ ಮಲ್ಲಿಕಾರ್ಜುನ ಮನಸೂರ, ಪಂಡಿತ ರಾಮಣ್ಣನವರು ಮರೋಳ, ಎಂ. ವೆಂಕಟೇಶಕುಮಾರ  ಮುಂತಾದ ಖ್ಯಾತನಾಮರು ಮಠದಲ್ಲಿ ಸಂಗೀತ ಗೋಷ್ಠಿಗಳನ್ನು ನಡೆಸಿಕೊಟ್ಟಿದ್ದಾರೆ. ಅಂದು ಮಠದಲ್ಲಿ ಸ್ವಾಮೀಜಿಯವರಿಗೆ ಬನ್ನಿಯನ್ನು ಅರ್ಪಿಸಿದ ಮೇಲೆ ಊರಲ್ಲಿ ಒಬ್ಬರಿಗೊಬ್ಬರು ಬನ್ನಿಯನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ವಿಶೇಷವೆಂದರೆ ಮುಸಲ್ಮಾನ ಹಾಗೂ ಜೈನ ಬಂಧುಗಳು ಸಹ ಮಠಕ್ಕೆ ಆಗಮಿಸಿ ಪೂಜ್ಯರ ದರ್ಶನ ಪಡೆಯುತ್ತಾರೆ. ಈ ರೀತಿಯಾಗಿ ಸಂಭ್ರಮದಿಂದ ಆಚರಿಸಲ್ಪಡುತ್ತಿದ್ದು ಸರ್ವ ಧರ್ಮ ಸಮನ್ವಯತೆಯನ್ನು  ನಾವು ಕಾಣಬಹುದು.

## ಉತ್ಸವಗಳು:

ಉತ್ಸವಗಳು ಕೂಡಾ ಹಬ್ಬದ ಇನ್ನೊಂದು ರೂಪವು. ತುಂಬಾ ಸಡಗರದಿಂದ ಹಬ್ಬಕ್ಕೆ ಸಂಬಂದಪಟ್ಟ ದೇವರು ಮೂರ್ತಿಗಳನ್ನು ಸಂಪೂರ್ಣ ಅಲಂಕಾರ ಮತ್ತು ತಾಳ ಮೇಳಗಳೊಂದಿಗೆ ಮೆರವಣಿಗೆ ನಡೆಸುವುದು ಉತ್ಸವ ಎನಿಸಿಕೊಳ್ಳುತ್ತದೆ.

ಸೀಗಿ ಹುಣ್ಣಿಮೇಯ ದಿನ ಪೂಜ್ಯ ಶಿವಶಾಂತವೀರ ಮಹಾಸ್ವಾಮಿಗಳ ಪೂಣ್ಯಾ ತಿಥಿಯನ್ನು (ಶ್ರೀ ಗಡ್ಡದ ಅಜ್ಜನವರು) ಕಡ್ಲಬಾಳ ಗ್ರಾಮದ ಮಠದಲ್ಲಿ ಪ್ರತಿವರ್ಷ ಬಹಳ ಸಡಗರದಿಂದ ಉತ್ಸವವನ್ನು ಆಚರಿಸುತ್ತಾರೆ. ಕೊಪ್ಪಳ ಮಠದಲ್ಲೂ ಆಚರಣೆಯನ್ನು ಮಾಡುತ್ತಾರೆ.

## ಕಾರ್ತಿಕ ಇಳಿಸುವಿಕೆ:

ಪ್ರತಿ ವರ್ಷ ದೀಪಾವಳಿಯಿಂದ ಪ್ರಾರಂಭಿಸಿದ ಕಾರ್ತಿಕ (ದೀಪಾರಾಧನೆ ಉತ್ಸವ) ವನ್ನು ಬನದ ಹುಣ್ಣಿಮೆಯ ೨–೩ ದಿನ ಮುನ್ನ ಇಳಿಸುವ ಕಾರ್ಯಕ್ರಮವನ್ನು ಬಹಳೇ ಉತ್ಸಾಹದಿಂದ ಮಾಡುತ್ತಿದ್ದಾರೆ. ಭಕ್ತರು ದೀಪಾರಾಧನೆಗಾಗಿ ಎಣ್ಣಿ, ಖೊಬ್ಬರಿ ಕಾಣಿಕೆ ಸಲ್ಲಿಸುತ್ತಾರೆ. ಪ್ರತಿ ದಿನವೂ ಕಾರ್ತಿಕೋತ್ಸವವನ್ನು ಮಠದ ಮೇಲ್ಭಾಗದಲ್ಲಿ ಪ್ರಣತಿ ದೀಪಗಳನ್ನು ಹಚ್ಚಿ ಆಚರಿಸುತ್ತಾರೆ. ಅಂದೂ ಕೂಡ ಸುಮಾರು ಸಾವಿರಾರು ಭಕ್ತರಿಗೆ ಅನ್ನದಾಸೋಹ ಏರ್ಪಡಿಸಿರುತ್ತಾರೆ. ಮತ್ತು ಸಾಯಂಕಾಲ ಮಠದ ಕೈಲಾಸ ಮಂಟಪದಲ್ಲಿ ವಿಶೇಷ ಉಪನ್ಯಾಸ ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ.

## ಜಾತ್ರೆ :

ಕೊಪ್ಪಳ ಭಾಗಗದಲ್ಲಿಯೇ ಗವಿಸಿದ್ಧೇಶ್ವರ ಜಾತ್ರೆಯು ಬಹಳೇ ದೊಡ್ಡದು. ಅಂದು ಜನೇವರಿ ತಿಂಗಳಲ್ಲಿ ಮಹಾರಥೋತ್ಸವವನ್ನು ಎಳೆಯುತ್ತಾರೆ. ಸುಮಾರು ಹದಿನೈದು ದಿನಗಳವರೆಗೆ ಜಾತ್ರಾ ಮಹೋತ್ಸವವು ಅತೀ ಜನದಟ್ಟಣೆಯಿಂದ ಕೂಡಿರುತ್ತದೆ. ಮುಂದೆ ಹದಿನೈದು ದಿನಗಳ ವರೆಗೆ ಸ್ವಲ್ಪ ಕ್ಷೀಣವಾಗುತ್ತದೆ. ಜಾತ್ರೆಯಲ್ಲಿ ದನಗಳ ವ್ಯಾಪಾರವೂ ಒಳಗೊಂಡಂತೆ ಮಕ್ಕಳ ಆಟಿಗೆಗಳನ್ನು ಒಳಗೊಂಡು ಸಂಸಾರಕ್ಕೆ ಬೇಕಾದ ಎಲ್ಲಾ ಸಾಮಗ್ರಿಗಳು ಮಾರಾಟವಾಗುತ್ತವೆ. ಒಂದೊಂದು ಭಾಗದಲ್ಲಿ ಬೇರೆ ಬೇರೆ ಸಾಮಗ್ರಿಗಳು ಸಿನಿಮಾ, ನಾಟಕಗಳು ಪ್ರದರ್ಶನವಾಗುತ್ತವೆ ಹಾಗೂ ಮಿಠಾಯಿ ಅಂಗಡಿಯವರು ಒಂದು ತಿಂಗಳವರೆಗೂ ವ್ಯವಹಾರ ನಡೆಸುತ್ತಾರೆ.

ಜಾತ್ರೆಯು ಒಂದು ತಿಂಗಳು ಮುಂದೆ ಇರುವಾಗಲೇ ಇಡೀ ಮಠವನ್ನು ಸುಣ್ಣ ಬಣ್ಣದಿಂದ ಅಲಂಕರಿಸಿ, ಭಕ್ತರಿಗೆ ಇಳಿದುಕೊಳ್ಳಲು ಮಠದ ಶಾಲೆ ಕಾಲೇಜುಗಳಲ್ಲಿಯೇ ವ್ಯವಸ್ಥೆ ಕಲ್ಪಿಸಿರುತ್ತಾರೆ. ಜಾತ್ರೆಯ ಮೂರು ದಿನ ಮುಂಚೆ ಧಾರ್ಮಿಕ ಕಾರ್ಯಕ್ರಮಗಳು ಪ್ರಾರಂಭವಾಗುತ್ತವೆ. ಹಲಗೇರಿ ಗ್ರಾಮದ ಗೌಡ್ರ ಮನೆಯಿಂದ ನಂದಾ ದೀಪವು ಮಠಕ್ಕೆ ಹೋಗುತ್ತದೆ. ಹಾಗೂ ಎಲ್ಲಾ ಗದ್ದುಗೆಗಳಿಗೂ ಪೂಜಾ ವಿಧಿ ವಿಧಾನಗಳು ಪ್ರಾರಂಭಗೊಳ್ಳುತ್ತವೆ. ಸ್ಥಳೀಯ ಜಡೇಗೌಡರು (ಮಾಲೀಗೌಡರು ಎಂದು ಮೊದಲಿನ ಹೆಸರು ಇತ್ತು ಗವಿಸಿದ್ದೇಶ್ವರರು ತಮ್ಮ ಜಡೆಯನ್ನು ಕೊಟ್ಟದ್ದಕ್ಕೆ) ಜೈನರಾದರೂ ಅವರ

ಮನೆಯ ಮುಂದೆ ಇರುವ ಈಶ್ವರ ಲಿಂಗಕ್ಕೆ ಉತ್ಸವ ಜಾತ್ರಾ ಕಾಲಕ್ಕೆ ಬರುತ್ತದೆ. ಜಾತ್ರೆಯಂದು ಅನೇಕ ಸ್ವಾಮಿಗಳು, ಹರ ಗುರು ಚರಮೂರ್ತಿಗಳು ಪಾಲ್ಗೊಂಡಿರುತ್ತಾರೆ. ಮಹಾರಥವನ್ನು ಸಿಂಗರಿಸಿ ಪೂಜಾ ವಿಧಿ ವಿಧಾನಗಳು ಮುಗಿದ ಮೇಲೆ ಸಾಯಂಕಾಲ ಸುಮಾರು ಐದು ಗಂಟೆಗೆ ಪೂಜ್ಯ ಗವಿಸಿದ್ದೇಶ್ವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ತಂದು ತೇರನ್ನು ಪ್ರದಕ್ಷಿಣೆ ಹಾಕಿ ತೇರಿನಲ್ಲಿ ಮೂರ್ತಿಯನ್ನು ಕೂಡ್ರಿಸಿ ಪೂಜ್ಯ ಮಹಾಸ್ವಾಮಿಗಳು ಧಾರ್ಮಿಕ ಧ್ವಜ ಹಾರಿಸುವ ಮೂಲಕ ತೇರು ಸಾಗಲು ಅಪ್ಪಣೆ ನೀಡುತ್ತಾರೆ. ತೇರನ್ನು ಸುಮಾರು ಹತ್ತು ಸಾವಿರ ಭಕ್ತ ಜನರು, ಹೊಸದಾಗಿ ಮದುವೆ ಆದ ದಂಪತಿಗಳು, ಸೇರಿ ಜಾತಿ ಮತ ಪಂಥವೆನ್ನದೇ ಭಕ್ತಿಯಿಂದ ಎಳೆಯುತ್ತಾರೆ. ದೂರ ನಿಂತು ನೋಡುವ ಭಕ್ತ ಜನ ಸಮೂಹವೂ ಸುಮಾರು ಐವತ್ತು ಸಾವಿರ ಜನ ತೇರಿಗೆ ಉತ್ತತ್ತಿ ಬಾಳೆಹಣ್ಣು ಎಸೆದು ತಮ್ಮ ಭಕ್ತಿ ಪ್ರಕಟಿಸುತ್ತಾರೆ. ವಿಶೇಷವೆಂದರೆ ರಥೋತ್ಸವಕ್ಕೆ ಹಾಗೂ ಗವಿಮಠಕ್ಕೆ ಮುಸಲ್ಮಾನ ಗಂಡು ಹೆಣ್ಣು ಮಕ್ಕಳು ಬಂದು ತಮ್ಮ ಭಕ್ತಿ ಸಲ್ಲಿಸುತ್ತಿರುತ್ತಾರೆ. ಎರಡು ತಾಸು ದೊಡ್ಡ ಪ್ರಮಾಣದಲ್ಲಿ ಜನ ಸಂದಣಿ ಸೇರುತ್ತದೆ. ಅಂದು ಹಣ್ಣು ಕಾಯಿ ಮಾಡಿಸುವ ಭಕ್ತರು ಕಡಿಮೆ. ಮರುದಿನ ಮೂರನೆ, ಐದನೇ ದಿನ ಹೆಚ್ಚು.

ರಥೋತ್ಸವದ ನಂತರ ಗುಡ್ಡದ ಮೇಲೆ ಬಯಲು ಮಂಟಪದಲ್ಲಿ ಸೃಷ್ಠಿಯ ಸೊಬಗಿನಲ್ಲಿ ಧಾರ್ಮಿಕ ಗೋಷ್ಠಿ ಜರುಗುತ್ತದೆ. ಈ ಕಾರ್ಯಕ್ರಮದಲ್ಲಿ ನಾಡಿನ ಅನೇಕ ಹಿರಿಯ ಕಿರಿಯ ಮಹಾಸ್ವಾಮಿಗಳು ಪಾಲ್ಗೊಂಡು ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯ ಬಗ್ಗೆ ವಿಚಾರ ಮಂಥನ, ಉಪನ್ಯಾಸಗಳು ಜರುಗುತ್ತವೆ. ಇಲ್ಲಿ ಪರಂಪರೆ ಹಾಗೂ ಪ್ರಕೃತಿಗಳನ್ನು ಸಮನಾಗಿ ಕಾಣುವ ದೃಷ್ಠಿಯನ್ನು ಸ್ವಾಮಿಗಳಲ್ಲಿ ನೋಡಬಹುದು. ಮರುದಿನವೇ ಹಳೆಯ ವಿದ್ಯಾರ್ಥಿ ಬಳಗದ ವತಿಯಿಂದ ಗುರುವಂದನಾ ಕಾರ್ಯಕ್ರಮವು ಜರುಗುತ್ತದೆ. ನಾಡಿನ ಖ್ಯಾತ ಉಪನ್ಯಾಸಕರು, ವಿದ್ವತ್ ಜನತೆ ಪ್ರಸಿದ್ಧ ಸಂಗೀತಕಾರರು, ಲೇಖಕರನ್ನು ಆಹ್ವಾನಿಸುತ್ತಾರೆ. ಹೀಗೆ ನಾಲ್ಕು ಐದು ದಿನ ಬೇರೆ ಬೇರೆ ಕಾರ್ಯಕ್ರಮಗಳನ್ನು ಜಾತ್ರಾ ವಿಶೇಷವೆಂದೇ ಮಾಡುತ್ತಾರೆ. ಪ್ರತಿ ದಿನ ಕಾರ್ಯಕ್ರಮದ ನಂತರ ಸಾಂಸ್ಕೃತಿಕ ಕಾರ್ಯಕ್ರಮ ಮಕ್ಕಳಿಂದ, ಯುವಕರಿಂದ ಜರುಗುತ್ತವೆ. ಅನ್ನದಾಸೋಹವಂತೂ ದಿನದ ಎರಡೂಹೊತ್ತು ಅವ್ಯಾಹತವಾಗಿ ಸಾಗಿರುತ್ತದೆ.

ಸುಮಾರು ಒಂದು ತಿಂಗಳು ಬೇರೆ ಬೇರೆ ವ್ಯಾಪಾರಿಗಳಿಗಂತೂ ತುಂಬಾ ಲಾಭದ ದಿನಗಳು. ಎಲ್ಲಾ ತರಹದ ವ್ಯಾಪಾರಿಗಳು ಮಳಿಗೆಯಲ್ಲಿ ರಾತ್ರಿ ಹತ್ತು ಗಂಟೆಯವರೆಗೆ ವ್ಯಾಪಾರದಲ್ಲಿ ತೊಡಗಿರುತ್ತಾರೆ. ಮನೆತನದ ಸಾಮಗ್ರಿ ಬಳೆ, ಆಟಿಗೆ, ಪುಸ್ತಕ ಕೃಷಿ, ಮಿಠಾಯಿ, ಹೋಟೆಲು, ತಂಪುಪಾನೀಯ, ಹಣ್ಣುಹಂಪಲು, ಇತ್ಯಾದಿ ಪ್ರತ್ಯೇಕ ಸಾಲುಗಳ ಮಳಿಗೆಗಳಲ್ಲಿ ಮಾರಾಟ ಮಾಡುತ್ತಾರೆ. ವಿಶೇಷವೆಂದರೆ ಖಾರದ ತಿಂಡಿ ಹಾಗೂ ಮಿರ್ಚಿ ಸವಿಯನ್ನು ಸವಿಯುವ ಜನರಿಗೆ ಉತ್ಸಾಹದ ದಿನಗಳಾಗಿವೆ.

ಇಂಥ ಜಾತ್ರೆಗಳ ಉತ್ಸವಗಳು ನಮ್ಮ ಜನತೆಯ ನಾಡಿನ ಸಂಪ್ರದಾಯ, ಪರಂಪರೆ, ಸಂಸ್ಕೃತಿಯ ನೆನಪನ್ನು ಮರುಕಳಿಸುತ್ತದೆ. ಮತ್ತೂ ಆಚರಣೆಯಲ್ಲಿ ತಂದು, ತಲೆತಲಾಂತರ ಸಾಗಿಸುತ್ತವೆ. ಹೀಗೆ ಒಂದು ತಿಂಗಳವರೆಗೆ ಜಾತ್ರೆ ಉತ್ಸಾಹದಿಂದ ಸಾಗಿರುತ್ತದೆ.

## ಹರಕೆ ತೇರಿನ ಉತ್ಸವ:

ಗವಿಮಠದಲ್ಲಿ ಇದೂ ಕೂಡ ನವೀನ ಮಾದರಿಯ ಉತ್ಸವವಾಗಿ ನಡೆಯುತ್ತಿದೆ. ಭಕ್ತರು ಗವಿಸಿದ್ದೇಶನಿಗೆ ಬೇಡಿಕೊಂಡು ತಮ್ಮ ಕಾರ್ಯಗಳು ಕೈಗೂಡಿದ ಮೇಲೆ ಈ ಹರಕೆ ತೇರನ್ನು ಎಳೆಸುತ್ತಾರೇ. ಇದು ಪ್ರತಿ ಅಮಾವಾಸ್ಯೆಯ ದಿನ ಮಿನಿ ಉತ್ಸವ ಇದ್ದದ್ದು ಈಗ ದೊಡ್ಡ ಉತ್ಸವವಾಗಿ ಪರಿವರ್ತನೆಯಾಗಿದೆ. ಕತೃ ಗದ್ದುಗೆಯಸುತ್ತಲೂ ಪ್ರದಕ್ಷಿಣೆ ಹಾಕಲು ಜಾಗೆ ಇದ್ದು, ಈ ಚಿಕ್ಕ ತೇರನ್ನು ಐದು ಸುತ್ತು ಗದ್ದುಗೆಯನ್ನು ಬೇಡಿಕೊಂಡ ಭಕ್ತರನ್ನೊಳಗೊಂಡು ಅಲ್ಲಿ ನೆರೆದ ಭಕ್ತ ಸಮೂಹವು ಕೂಡಿ ಪ್ರದಕ್ಷಿಣಿ ಹಾಕುತ್ತಾರೆ. ಬೇಡಿಕೊಳ್ಳುವ ಭಕ್ತರು ಅಂದು ಎಷ್ಟಿದ್ದರೂ ಸಹ ಎಲ್ಲರೂ ಕೂಡಿ ಹರಕೆ ತೇರನ್ನು ವಿಜೃಂಭಣೆಯಿಂದ ಎಳೆಯುತ್ತಾರೆ. ನಂತರ ಪ್ರಸಾದ ವಿತರಣೆ ಜರುಗುತ್ತದೆ. ಇದು ಕೂಡಾ ಸುಮಾರು ಇಪ್ಪತ್ತು ವರ್ಷಗಳಿಂದಲೂ ನಡೆದು ಬಂದಿರುವದು ಭಕ್ತರು ಗವಿಸಿದ್ಧೇಶನ ಮೇಲಿಟ್ಟ ಅಪ್ಪಟ ಭಕ್ತಿ ಎಂಬುದನ್ನು ಬೇರೆ ಹೇಳಬೇಕಿಲ್ಲ.

## ತೆಪ್ಪೋತ್ಸವ :

೧೭ನೇ ಪೀಠಾಧಿಪತಿಗಳಾಗಿದ್ದ ಪೂಜ್ಯ ಶಿವಶಾಂತವೀರ ಮಹಾಸ್ವಾಮಿಗಳವರು ತಮ್ಮ ಗುರುಗಳಾಗಿದ್ದ (೧೬ನೇ ಸ್ವಾಮಿಗಳು) ಪೂಜ್ಯ ಮರಿ ಶಾಂತವೀರ ಮಹಾಸ್ವಾಮಿಗಳ ಚಿಕ್ಕ ಮಂದಿರವನ್ನು ಮಠದ ಪಕ್ಕಕ್ಕಿರುವ ಕೆರೆಯ ಮಧ್ಯದಲ್ಲಿ ನಿರ್ಮಿಸಿದ್ದಾರೆ. ಇನ್ನೇನು ಕೆರೆಯನ್ನು ಅಂದಗೊಳಿಸಿ ತಪ್ಪೋತ್ಸವ ಮಾಡಬೇಕೆನ್ನುವದರಲ್ಲಿಯೇ ಅಡೆತಡೆಗಳು ಬಂದವು. ಕಾರಣ ಅವರ ಕನಸನ್ನು ಪೂರ್ಣಗೊಳಿಸುವ ಜವಾಬ್ದಾರಿಯನ್ನು ಈಗಿನ ಪೂಜ್ಯ ಗವಿಸಿದ್ದೇಶ್ವರ ಮಹಾಸ್ವಾಮಿಗಳು ತೆಗೆದುಕೊಂಡು. ಕೆರೆಯ ಕೆಲಸವನ್ನು ಕೈಗೆತ್ತಿಕೊಂಡಿದ್ದಾರೆ. ಇನ್ನು ಕೆಲವೇ ದಿನಗಳಲ್ಲಿ ತೆಪ್ಪೋತ್ಸವವು ನಡೆಯಬಹುದೆಂದು ಆಶಿಸಲಾಗಿದೆ.

## ಆರೋಗ್ಯ ಕೇಂದ್ರವಾಗಿ ಗವಿಮಠ:

ಮಠಗಳು ತಮ್ಮ ಮತಾವಲಂಬಿ ಜನಸಮುದಾಯದ ಆರೋಗ್ಯ ನೈರ್ಮಲ್ಯಗಳ ಕಡೆಗೂ ಗಮನ ಹರಿಸಿ ಸೂಕ್ತ ರೀತಿಯಿಂದ ಉಪಕರಿಸಿರುವುದುಂಟು ಹಿಂದಿನ ಕಾಲದಲ್ಲಿ ಪ್ಲೇಗಿನಂತಹ ಮಾರಕ ರೋಗಗಳು ಅಥವಾ ಮತ್ತೆ ಇತರ ಸಾಂಕ್ರಾಮಿಕ ರೋಗಗಳು ಕಾಣಿಸಿಕೊಂಡಾಗ ಸೂಕ್ತ ಚಿಕಿತ್ಸೋಪಾಯಗಳಿಲ್ಲದೆ ಸಾವುನೋವುಗಳ ಸಂಖ್ಯೆ ಅಪರಿಮಿತವಾಗಿ ಕಾಡುತ್ತಿತ್ತು. ಮಾನವನಿಗೆ ಎಷ್ಟೆಲ್ಲಾ ಹಣ, ಆಸ್ತಿ-ಅಂತಸ್ತು, ಒಡವೆ-ವಸ್ತ್ರ, ಬುದ್ಧಿ ಏನೆಲ್ಲಾ ಸಂಪತ್ತುಗಳಿದ್ದರೂ ಅವುಗಳ ಸದುಪಯೋಗ ಆಗಬೇಕಿದ್ದರೆ, ಮೊದಲು ಅವರ ಆರೋಗ್ಯ ಚೆನ್ನಾಗಿರಬೇಕು. 'ಸಕಲ ಭಾಗ್ಯಗಳಲ್ಲಿ ಆರೋಗ್ಯ ಭಾಗ್ಯವೇ ಶ್ರೇಷ್ಠವಾದದ್ದು' ಎಂಬ ಮಾತು ಸರ್ವಕಾಲಿಕ ಸತ್ಯ. ಏಕೆಂದರೆ ಆರೋಗ್ಯವೆಂಬುದು ಸಿಕ್ಕಿದೆಡೆಯಲ್ಲಿ ಹಣ ನೀಡಿ ಕೊಳ್ಳಬಹುದಾದ ವಸ್ತುವಲ್ಲ. ಆರೋಗ್ಯದ ಗುಟ್ಟು ಎಲ್ಲಾ ಕಾಲದ ಜನತೆಗೂ ಒಗಟಾಗಿಯೇ ಉಳಿದಿದೆ. ಈ ಹೊತ್ತಿನ ಪ್ರಜ್ಞಾವಂತ ಜನಸಮುದಾಯದ ನಡುವೆ ಆರೋಗ್ಯದ ಬಗ್ಗೆ ಸ್ಪಷ್ಟವಾದ ಕಲ್ಪನೆಯಾದರೂ ಇದೆ. ಅದಕ್ಕಾಗಿ ಇಂದು ಏನೆಲ್ಲಾ ಆವಿಷ್ಕಾರಗಳಾಗಿದ್ದು, ಆರೋಗ್ಯದ ಏರುಪೇರುಗಳಿಗೆ ಅಗತ್ಯವಾದ ಅತ್ಯದ್ಭುತ ಸೌಲಭ್ಯಗಳಾದರೂ ಇವೆ. ಆದರೆ ಹಿಂದಿನ ಕಾಲದಲ್ಲಿ ಅಪ್ರಜ್ಞಾವಂತ ಜನಸಮುದಾಯದ ನಡುವೆ ಆರೋಗ್ಯದ ರಕ್ಷಣೆಗೆ ವೈಜ್ಞಾನಿಕವಾದ ಸವಲತ್ತುಗಳು ಏನೇನೂ ಇಲ್ಲದ ಕಾಲದಲ್ಲಿ ಮಠ-ಮಂದಿರಗಳು ಈ ದಿಸೆಯಲ್ಲಿ

ಸಾಕಷ್ಟು ಪರಿಶ್ರಮವನ್ನು ವಹಿಸಿರುವದು ಗಮನಾರ್ಹವಾಗಿದೆ. ಹಿಂದೆ ಮಠಾದೀಶರುಗಳು ಮಾರಣಾಂತಿಕ ರೋಗಗಳು ತಲೆದೋರಿದಾಗ ಜನ ಸಾಮಾನ್ಯರು ವಹಿಸಬೇಕಾದ ಎಚ್ಚರಿಕೆ ಹಾಗೂ ಮುನ್ಸೂಚನೆ ಕೊಟ್ಟು ತಾವೇ ಸ್ವತ: ಕಂಡುಕೊಂಡಿದ್ದ ಆಯುರ್ವೈದ್ಯೋಪಚಾರಗಳನ್ನು ಮಾಡುವ ಮೂಲಕ ಸಮಾಜದ ಆರೋಗ್ಯ ರಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ.

ಗವಿಮಠದಲ್ಲಿ ಬಹಳ ಹಿಂದಿನಿಂದಲೂ ಆರೋಗ್ಯದ ಬಗ್ಗೆ ಭಕ್ತ ಜನರಲ್ಲಿ ಅರಿವು ಮೂಡಿಸಿ, ಔಷಧ ಕೊಡುವ ಪದ್ಧತಿ ಬೆಳೆದು ಬಂದಿದೆ. ೧೧ ನೇ ಪೀಠಾಧಿಪತಿಗಳಿಂದ ಹೆಚ್ಚು ಹೆಚ್ಚು ಆಯುರ್ವೇದದ ಬಗ್ಗೆ ಆವಿಷ್ಕಾರವನ್ನು ಮಾಡಿ ಕೊಪ್ಪಳ ನಗರದಲ್ಲಿ ಹಾಗೂ ಸುತ್ತಲ ಗ್ರಾಮಗಳಿಗೂ ಪುಕ್ಕಟೆ ಔಷಧ ಹಂಚುವಿಕೆಯ ಕಾರ್ಯ ಸಾಗುತ್ತಲೇ ಬಂದಿದೆ. ಅವರಂತೆ ೧೬ನೇ ಸ್ವಾಮಿಗಳು ೧೭ನೇ ಸ್ವಾಮಿಗಳು ಕೂಡ ಈ ಪರಂಪರೆಯನ್ನು ಮುಂದುವರೆಸುತ್ತಾ ಬಂದಿದ್ದು ಅತ್ಯಂತ ದೊಡ್ಡ ರೋಗಗಳಿಗೂ ಆಯುರ್ವೇದ ಚಿಕಿತ್ಸೆ ಮಾಡಿದ ಅಂಶವನ್ನು ನಾವು ಗಮನಿಸಬಹುದು.

ಹಿಂದೆ ಕುಷ್ಟರೋಗದಂತಹ ಭಯಾನಕ ರೋಗವನ್ನು ಕೊಪ್ಪಳದ ಭಾಗದ ಆಡಳಿತಾಧಿಕಾರಿಯಾಗಿದ್ದ ನಿಜಾಮನ ಮುಖ್ಯಮಂತ್ರಿ ಮೀರ ಆಲಮನು ಕೊಪ್ಪಳದ ಗವಿಮಠದ ಪೂಜ್ಯರ ಆಶೀರ್ವಾದ ಮತ್ತು ಆಯುರ್ವೇದ ಔಷಧ ಉಪಚಾರದಿಂದ ಗುಣಮುಖನಾದ ಐತಿಹಾಸಿಕ ಘಟನೆಯನ್ನು ನಾವು ಮಠದ ಚರಿತ್ರೆಯಲ್ಲಿ ಕಾಣುತ್ತೇವೆ. ಅಲ್ಲದೇ ಪ್ರತಿದಿನ ಸಾವಿರಾರು ಭಕ್ತ ಜನರು ಜಾತಿ-ಮತ, ಪಂಥ ಎನ್ನದೇ ಆಯುರ್ವೇದ ಚಿಕಿತ್ಸೆಯನ್ನು ಪಡೆದು ರೋಗ ಮುಕ್ತರಾಗುತ್ತಿದ್ದಾರೆ. ಇದರ ಜೊತೆಗೆ ಅನೇಕ ಸ್ವಾಮಿಗಳು ಯಂತ್ರ-ಮಂತ್ರಗಳನ್ನು ಮಾಡುತ್ತಿದ್ದು ಇದರಿಂದಲೂ ಅನೇಕ ಜನರು ಗುಣಮುಖರಾಗಿದ್ದಾರೆ.

ಅವರ ಕಾಲದ ಔಷಧೋಪಚಾರಗಳ ವಿವರಗಳನ್ನು ಮಾಹಿತಿ ಪತ್ರದಲ್ಲಿರುವಂತೆ 'ಮೂಲವ್ಯಾದಿ' ರೋಗ ಶಮನಕ್ಕಾಗಿ ಈ ಕೆಳಗಿನಂತೆ ಮದ್ದನ್ನು ತಯಾರಿಸಲು ಸೂಚಿಸಲಾಗಿದೆ. ಚೆನ್ನಾಗಿ ಹದವಾದ ಎರಡು ಸೇರು(ಕಿಲೋ) ತೂಕದ ಕರ್ಜೂರವನ್ನು ಅದರ ಬೀಜವನ್ನು ತೆಗೆದು ಚೆನ್ನಾಗಿ ಕುಟ್ಟಬೇಕು. ನಂತರ ಅದರ ಜೊತೆಗೆ ಎರಡು ಗಜನಿಂಬೆ ಹಣ್ಣಿನ ರಸವನ್ನು ಹಾಗೂ ಅರ್ಧ ಸೊಲಿಗೆ ಹಸುವಿನ ಗಟ್ಟಿ ತುಪ್ಪವನ್ನು ಮಿಶ್ರಣ ಮಾಡಿ ಚೆನ್ನಾಗಿ ಕುಟ್ಟಬೇಕು. ಹೀಗೆ ಮಿಶ್ರಣದ

ಕರ್ಜೂರವನ್ನು ನಿಂಬೆಹಣ್ಣಿನ ಗಾತ್ರದ ಉಂಡೆಗಳನ್ನು ಮಾಡಿಕೊಂಡು ಪ್ರತಿದಿನ ಬೆಳಿಗ್ಗೆ ಒಂದು ಉಂಡೆಯಂತೆ ೪೨ ದಿನಗಳ ವರೆಗೆ ಸೇವಿಸಿದರೆ, ಮೂಲವ್ಯಾದಿ ರೋಗವು ಶಸ್ತ್ರಕ್ರಿಯೆ ಇಲ್ಲದೇ ನಿವಾರಣೆಯಾಗುವದಾಗಿ ತಿಳಿಸಲಾಗಿದೆ. ಆದರಂತೆ ತಲೆಶೂಲೆ ,ಉದರ ಬೇನೆ,ಎದೆ ನೋವು, ಆಮಶಂಕೆ ಇತ್ಯಾದಿ ರೋಗಗಳ ಉಪಶಮನಕ್ಕೆ ಬೇಕಾದ ದಿನಬಳಕೆಯ ಔಷಧ ಉಪಚಾರಗಳನ್ನು ಎಲ್ಲಾ ಸ್ವಾಮಿಗಳೂ ಮಾಡುತ್ತಾ ಬಂದಿದ್ದಾರೆ. ಅಂತಲೇ ಗವಿಮಠದ ಸುತ್ತಲೂ ಗುಡ್ಡದಲ್ಲಿ ಅನೇಕ ಔಷಧಿಸಸ್ಯಗಳನ್ನು ಬೆಳೆಸಿ,ಅದರ ಉಪಯೋಗ ಪಡೆಯುತ್ತಾರೆ.

ಹಾಗೆಯೇ ಹಾವು-ಚೇಳು ಮುಂತಾದ ವಿಷಜಂತುಗಳು ಕಡಿದಾಗ ಮಂತ್ರವನ್ನು ಕೂಡಾ ಹಾಕುವ ರೂಢಿ ಮಠದಲ್ಲಿತ್ತು. ಹೀಗಾಗಿ ನಾಡಿನ ಅನೇಕ ಜನರು ಆಸ್ಪತ್ರೆ, ಡಾಕ್ಟರರು ಇಲ್ಲದ ಗ್ರಾಮದ ಜನರು ತಕ್ಷಣ ಗವಿಮಠಕ್ಕೆ ಬಂದು ಈ ರೀತಿಯ ಚಿಕಿತ್ಸೆಯನ್ನು ಪಡೆಯುತ್ತಿದ್ದುದು ತಿಳಿದು ಬರುತ್ತದೆ.

ಈ ಚಿಕ್ಕ ಪ್ರಮಾಣದ ಪರಂಪರೆ ಈಗ ೧೭ನೇ ಪೀಠಾಧಿಪತಿಗಳಿಂದ ಆಯುರ್ವೇದ ಚಿಕಿತ್ಸೆಯ ಏರ್ಪಾಡು ಬೃಹದಾಕಾರವಾಗಿ ಬೆಳೆದಿದೆ.

ಆ ಪೂಜ್ಯರು ಆಯುರ್ವೇದ ಪಂಡಿತರಾಗಿದ್ದರು. ಅಲ್ಲದೆ ನಾಡಿನ ಜನತೆಗೆ ಅನುಕೂಲವಾಗಲೆಂದು ಪುಕ್ಕಟೆ ಆರೋಗ್ಯ ಸೇವೆಯ ಸಲುವಾಗಿ ದೊಡ್ಡ ಪ್ರಮಾಣದಲ್ಲಿ ಆಯುರ್ವೇದ ಆಸ್ಪತ್ರೆಯನ್ನು ತೆರೆದರು. ಮತ್ತು ಈ ವಿದ್ಯೆ ಕೇವಲ ಮಠದ ಸೊತ್ತಾಗಬಾರದೆಂದು, ಅನೇಕ ವೈದ್ಯರನ್ನು ತಯಾರುಮಾಡುವ ಆಯುರ್ವೇದ ಕಾಲೇಜನ್ನು ಮಾಡುವ ಸಾಹಸ ಮಾಡಿದ್ದಾರೆ.

ಸದ್ಯದ ಪೂಜ್ಯರು ತಮ್ಮ ಗುರುಗಳ ಈ ಕನಸನ್ನು ನನಸನ್ನಾಗಿ ಮಾಡಲು ಅತ್ಯಧಿಕ ಗಮನ ಹರಿಸಿ,ಅತ್ಯಾಧುನಿಕ,ಸುಸಜ್ಜಿತ ಕಾಲೇಜು ಹಾಗೂ ಆಸ್ಪತ್ರೆಯನ್ನು ನಿರ್ಮಿಸಿದ್ದಾರೆ. ಸಾವಿರಾರು ಬಡ ರೋಗಿಗಳು ನಿತ್ಯ ಆರೋಗ್ಯ ಚಿಕಿತ್ಸೆ ಪಡೆಯುತ್ತಿದ್ದಾರೆ. ಸಧ್ಯದ ಪೂಜ್ಯ ಗವಿಸಿದ್ಧೇಶ್ವರ ಮಹಾಸ್ವಾಮಿಗಳು ಸಾಮಾಜಿಕ ಪ್ರಜ್ಞಾವಂತರೂ ಹಾಗೂ ಶಿಕ್ಷಣವೇತ್ತರರೂ ಆಗಿದ್ದರಿಂದಲೂ ಆರೋಗ್ಯ-ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಬಂದಿರುವುದು ಈ ಭಾಗದ ಜನರ ಪುಣ್ಯವೆಂದೇ ಹೇಳಬಹುದು.

**ಸರ್ವಧರ್ಮ ಕಾರ್ಯಕ್ರಮ :-**

ಶ್ರೀ ಕ್ಷೇತ್ರದಲ್ಲಿ ಆಗಾಗ್ಗೆ ಸರ್ವಧರ್ಮ ಗುರುಗಳನ್ನು ಅಂದರೆ ಹಿಂದೂ,ಕ್ರೈಸ್ತ,ಮುಸಲ್ಮಾನ ಧರ್ಮಗುರುಗಳಿಂದ ಅಥವಾ ಪ್ರಾಜ್ಞರಿಂದ ಆಯಾ ಧರ್ಮದ ಮುಖ್ಯ ತಿರುಳನ್ನು ಉದಾತ್ತ ಆಶಯವನ್ನು ಕುರಿತಂತೆ ಉಪನ್ಯಾಸಗಳಿರುತ್ತವೆ. ಎಲ್ಲಾ ಧರ್ಮಗುರುಗಳು ಉಪಸ್ಥಿತರಿರುವ ವೇದಿಕೆ ಭಾವೈಕ್ಯದ ಪ್ರತೀಕದಂತಿರುತ್ತದೆ.ಸಮಸ್ತ ಧರ್ಮ ಗುರುಗಳ ಅಂತಃ ಸತ್ವವನ್ನು ಆಸಕ್ತಿಯಿಂದ ಆಲಿಸುವ ಆಸ್ತಿಕ ಸಮುದಾಯ ಮಧ್ಯರಾತ್ರಿ ಮೀರಿದರೂ ಸಹನೆಯಿಂದ ಕುಳಿತು ಆಲಿಸುವದನ್ನು ಕಾಣುತ್ತೇವೆ.

ಪೂರ್ವದಿಂದಲೂ ಈ ಸ್ಥಾನವು ಬೌದ್ಧ,ಜೈನ ಹಾಗೂ ಹಿಂದೂ ಕ್ಷೇತ್ರವಾಗಿ ಸಮ್ಮಿಳಿತವಾದ ಬಗ್ಗೆ ಈ ಹಿಂದಿನ ಅಧ್ಯಾಯಗಳಲ್ಲಿ ಉಲ್ಲೇಖಿಸಲಾಗಿದೆ. ಮುಸ್ಲಿಂ ಸಮುದಾಯವಂತೂ ಗವಿಮಠದೊಂದಿಗೆ ಪುರಾತನ ಕಾಲದಿಂದಲೂ ಭಾವೈಕ್ಯ ಹೊಂದಿದ್ದನ್ನು ಇಲ್ಲಿ ಗಮನಿಸಬಹುದು. ಹೀಗಾಗಿ ಸರ್ವಧರ್ಮ ಸಮ್ಮೇಳನ, ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಆಯಾ ಪೂಜ್ಯರು ನಡೆಸಿಕೊಡುತ್ತಾ ಬಂದಿದ್ದಾರೆ.

## ಶೈಕ್ಷಣಿಕವಾಗಿ ಗವಿಮಠದ ಚಟುವಟಿಕೆಗಳು

ಸ್ವಾತಂತ್ರ್ಯ ಪೂರ್ವದಲ್ಲಿ ವೀರಶೈವ ಮಠಗಳಲ್ಲಿ ಸಾಮನ್ಯವಾಗಿ ಎರಡು ಅಂಶಗಳನ್ನು ಕಡ್ಡಾಯವಾಗಿ ಗುರುತಿಸಬಹುದಾಗಿತ್ತು. ಒಂದನೆಯದಾಗಿ ಯಾವುದೇ ಮಠ 'ಕೂಲಿ ಮಠ' (ಸಾಲಿಮಠ) ವಾಗಿರುತ್ತಿತ್ತು. ಎರಡನೆಯದಾಗಿ ದಾಸೋಹ ಕೇಂದ್ರ ( ಧರ್ಮ ಛತ್ರ)ವಾಗಿಯಾದರೂ ಇರುವದು ಕಡ್ಡಾಯವಾಗಿರುತ್ತಿತ್ತು. ಕೆಲವು ವೇಳೆ ಬಹಳಷ್ಟು ಮಠಗಳು ಎರಡೂ ಪರಂಪರೆಯನ್ನು ಉಳಿಸಿಕೊಂಡಿರುವುದು ಸಾಮಾನ್ಯವಾಗಿತ್ತು. ಹಿಂದೆ ಒಂದು ಪಕ್ಷ ಊರೆಲ್ಲಾ ತಿರುಗಿದರೂ ಸಿಗದ ಭಿಕ್ಷಾನ್ನ ಊರಾಚೆಗಿನ ಮಠದಲ್ಲಂತೂ ತಪ್ಪದೇ ದೊರೆಯುತ್ತಿತ್ತು. ವೀರಶೈವ ಮಠಗಳ ಈ ಸತ್-ಸಂಪ್ರದಾಯವು ಬಹಳ ಪ್ರಾಚೀನಕಾಲದಿಂದಲೂ ತಪ್ಪದೇ ನಡೆದುಬಂದಿದೆ.

ಮಠಗಳು ಮೂಲತಃ ಗುರು–ಶಿಷ್ಯರು, ಸನ್ಯಾಸಿಗಳು ವಾಸಿಸುವ ಸ್ಥಳಗಳೇ ಆಗಿದ್ದರೂ ಸ್ವಭಾವತ: ಧಾರ್ಮಿಕ ಶಿಕ್ಷಣದ ಮಂದಿರಗಳಾಗಿದ್ದವು ಎಂಬುದನ್ನು ಇಲ್ಲಿ ಮನಗಾಣಬೇಕಾಗಿದೆ. ಮಠವು ಧರ್ಮಬೋಧನೆ ಮತ್ತು ಪ್ರಸಾರದ ಪ್ರಮುಖ ಕೇಂದ್ರವಾಗಿತ್ತು. ಇದೇ ಕಾರಣಕ್ಕಾಗಿ ಅಮರಸಿಂಹನು 'ಮಠಶ್ಛಾತ್ರಾದಿ ನಿಲಯ' ಎಂದು ಕರೆದು 'ಮಠಗಳೆಂದರೆ ವಿದ್ಯಾಮಂದಿರ' ಗಳೆಂದು ವ್ಯಾಖ್ಯಾನಿಸಿದ್ದಾರೆ.[೧] ಹೀಗೆ ಮಠವು ವಿದ್ಯೆ, ಜ್ಞಾನ, ಮತ, ಧರ್ಮಗಳ ಅಭ್ಯಾಸ ಹಾಗೂ ಪ್ರಸಾದ ಕಾರ್ಯಗಳನ್ನು ನಡೆಸುವ ಸ್ಥಾನ ಅಥವಾ ಸಂಸ್ಥಾನವಿದ್ದಂತೆ.[೨]

ಜಗತ್ತಿನಲ್ಲಿ ವಿದ್ಯೆಗಿಂತಲೂ ಶ್ರೇಷ್ಠವಾದುದು ಬೇರೊಂದಿಲ್ಲ ಎಂಬುದು ಪ್ರಾಚೀನ ಭಾರತದ ಕಲ್ಪನೆ ಆಗಿನ ಶಿಕ್ಷಣ ಕ್ರಮವು ಸಂಪೂರ್ಣವಾಗಿ ಧಾರ್ಮಿಕ ಚೌಕಟ್ಟುಳ್ಳದ್ದೇಆಗಿತ್ತು. ಹಾಗೂ ಆ ಪ್ರಾಚೀನ ಭಾರತದ ವಿದ್ಯೆ ಲೌಕಿಕಕ್ಕಿಂತಲೂ ಪಾರಮಾರ್ಥದ ಕಡೆಗೆ ವಿಶೇಷ ಬಲವುಳ್ಳದಾಗಿತ್ತು. ಈ ಹಿನ್ನೆಲೆಯಲ್ಲಿ ವಿದ್ಯೆಯನ್ನು ಪರಾವಿದ್ಯೆ ಮತ್ತು ಅಪರಾ ವಿದ್ಯೆ ಎಂದು ಎರಡು ತೆರನಾಗಿ ವಿಭಜಿಸಲಾಗಿತ್ತು. ಮಾನವನ ಆತ್ಮ ವಿಕಸನಕ್ಕೆ ಸಾಧನವಾದ ಪರಾವಿದ್ಯೆಯನ್ನು ಶ್ರೇಷ್ಠವೆಂದೂ ಲೌಕಿಕ ಹಿತಾಸಕ್ತಿಗೆ ಪೂರಕವಾದ ಅಪರಾ ವಿದ್ಯೆಯನ್ನು ಕನಿಷ್ಟವೆಂದೂ ಪರಿಗಣಿಸಲಾಗಿತ್ತು. ಹೀಗೆ ಪರಾವಿದ್ಯೆ ಶ್ರೇಯೋರೂಪದ್ದಾದರೆ, ಅಪರಾವಿದ್ಯೆ ಪ್ರೇಯೋ ರೂಪದ್ದು ನಜಿಕೇತನು ಅನಿತ್ಯ ಫಲಗಳಿಗೆ ಕಾರಣವಾದ ಪ್ರೇಯೋ ಮಾರ್ಗವನ್ನು ಬಿಟ್ಟು, ಮೋಕ್ಷ ಕಾರಣವಾದ ಶ್ರೇಯೋ ಮಾರ್ಗವನ್ನು ಹಿಡಿದಿದ್ದರಿಂದ ಯಮನು ನಚಿಕೇತನನ್ನು "ವಿದ್ಯಾರ್ಥಿ" ಎಂದು ಕರೆಯುತ್ತಾನೆ.[೩]

---

೧) ಫ.ಗು. ಹಳಕಟ್ಟಿ – ಸಮಾಜವು ಮಠಗಳು ಶಿವಾನುಭವ , ಸಂ.೨. ೧೯೩೮ ಪುಟ ಸಂ: ೨

೨) ಕನ್ನಡ ನಿಘಂಟು– ಸಂ.೭. ಕ.ಸಾ.ಪ. ಪುಟ– ೬೮೬೦–೬೧–೧೯೮೮

೩) ಡಾ॥ಬಿ.ಸಿ.ವೀರಪ್ಪ–ಬೆಂಗಳೂರು ನಗರದ ವೀರಶೈವ ಮಠಗಳು ಒಂದು ಅಧ್ಯಯನ – ೨೦೦೧

ವಿದ್ಯೆ ಇಲ್ಲದವನು ಪಶುವಿಗೆ ಸಮಾನ ಎಂಬುದು ಪ್ರಾಚೀನ ಕಾಲದ ಉಲ್ಲೇಖ ವಿದ್ಯೆಗಿಂತಲೂ ಶ್ರೇಷ್ಠವಾದದ್ದು ಇನ್ನೊಂದಿಲ್ಲ ಸರ್ವ ದ್ರವ್ಯಗಳಲ್ಲೂ ವಿದ್ಯೆಯೇ ನಿಜವಾದ ಧನ. ಇದನ್ನು ಯಾರೂ ಅಪಹರಿಸಲಾರರು ಇದು ಅನರ್ಘ್ಯವಾದುದು.ಮತ್ತು ಅಕ್ಷಯವಾದದ್ದು . ಕಾರಣ ಅದು ತಾಯಿಯಂತೆ ಕಾಪಾಡುತ್ತದೆ. ತಂದೆಯಂತೆ ಸರಿ ಮಾರ್ಗದಲ್ಲಿ ಮುನ್ನಡೆಸುತ್ತದೆ. ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ. ಐಶ್ವರ್ಯವನ್ನು ತರುತ್ತದೆ. ದಶದಿಕ್ಕುಗಳಲ್ಲಿ ಕೀರ್ತಿಯನ್ನು ಹರಡುತ್ತದೆ.

ನಮ್ಮ ದೇಶದಲ್ಲಿ ಬೌದ್ದ ಧರ್ಮದ ಹುಟ್ಟುವಿಕೆಯೊಂದಿಗೆ ಬೌದ್ಧ ವಿಹಾರಗಳು ರೂಪಗೊಂಡವು. ಮುಂದೆ ಅವುಗಳೇ ವಿದ್ಯಾ ಕೇಂದ್ರಗಳು ಆದವು. ಅವು ಪ್ರಾರಂಭದಲ್ಲಿ ಬೌದ್ಧ ಭಿಕ್ಷುಗಳಿಗೆ ಮಾತ್ರ ಮೀಸಲಾಗಿದ್ದು ಕಾಲಾನಂತರ ಉಳಿದವರಿಗೂ ಪ್ರವೇಶ ಕೊಡಲಾರಂಭಿಸಿದವು. "ಬೌದ್ಧ ವಿಹಾರಗಳು ವಿದ್ಯಾ ಕೇಂದ್ರಗಳಾಗಿ ಮಾರ್ಪಾಡಾದುದನ್ನು ನೋಡಿ ಅವುಗಳಿಂದ ಪ್ರೇರಣೆಯನ್ನು ಹೊಂದಿದ ಹಿಂದೂಗಳೂ ಸಹ ತಮ್ಮ ವಿದ್ಯಾ ಕೇಂದ್ರಗಳನ್ನು ಸ್ಥಾಪಿಸಿದ್ದಿರಬಹುದೆಂದು ಡಾ|| ಆಟ್ಟೆಕರ ಹೇಳುತ್ತಾರೆ.[೧] ಹಿಂದೂಗಳಲ್ಲಿಯೂ ವ್ಯವಸ್ಥಿತವಾದ ಕೇಂದ್ರಗಳು ಕಾಣಿಸಿಕೊಳ್ಳುವದೇ ಕ್ರಿ.ಶ. ೯ ನೇ ಶತಮಾನದ ನಂತರ.

---

೧. ಡಾ: ಎಂ.ಚಿದಾನಂದಮೂರ್ತಿ – ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ ಪುಟ ೨೦೬–೧೯೬೬

ಪ್ರಾಚೀನ ಕರ್ನಾಟಕದಲ್ಲಿ ವಿದ್ಯಾಭ್ಯಾಸವನ್ನು ನೀಡುತ್ತಿದ್ದ ಕೇಂದ್ರಗಳೆಂದರೆ ಅಗ್ರಹಾರ,[೧] ಬ್ರಹ್ಮಪುರಿ[೨] ದೇವಸ್ಥಾನ ಮತ್ತು ಘಟಿಕಾಸ್ಥಾನಗಳು.[೩] ಹಿಂದೆ ವಿದ್ಯಾಕೇಂದ್ರಗಳಾಗಿದ್ದ ದೇವಸ್ಥಾನಗಳನ್ನು ಮಠಗಳೆಂದು ಕರೆಯುತ್ತಿದ್ದುದುಂಟು.[೪] ಲಕುಲೀಶ, ಪಾಶುಪತ, ಕಾಳಾಮುಖರು ಕರ್ನಾಟಕಕ್ಕೆ ಆಗಮಿಸಿದ ನಂತರ ದೇವಸ್ಥಾನಗಳನ್ನು ನಿರ್ಮಿಸಿ ಅವುಗಳಿಗೆ ಸ್ಥಾನಪತಿಗಳಾಗಿ ನಂತರ ದೇವಸ್ಥಾನಗಳನ್ನೇ ವಿದ್ಯಾಕೇಂದ್ರಗಳನ್ನಾಗಿ ಮಾರ್ಪಡಿಸಿದರು. ಈ ಲಕುಲೀಶ, ಪಾಶುಪತ ಕಾಳಾಮುಖ ಶೈವಮುನಿಗಳು ಸ್ಥಾನಪತಿಗಳಾಗಿ ಇಲ್ಲಿನ ದೇವಾಲಯಗಳನ್ನು ನೋಡಿಕೊಳ್ಳುವ ಸಮಯದಲ್ಲಿ ಇವರು ವಾಸಿಸುತ್ತಿದ್ದ ಮನೆಗಳೇ ಮಠಗಳೆನಿಸಿಕೊಂಡವು.

ಅಂದು ಒಬ್ಬ ಆಧ್ಯಾತ್ಮ ಜೀವಿಯು ತನ್ನೊಡನೆ ಇತರರ ಆತ್ಮ ಕಲ್ಯಾಣವನ್ನು ಬಯಸುತ್ತ ತನ್ನ ಮನೆಯನ್ನೇ ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳಿಗೆ ತೆರೆದಿಟ್ಟರೆ ಅದು ಮಠವೆಂಬ ಅಭಿದಾನವನ್ನೇ ಪಡೆಯುತ್ತಿತ್ತು.[೫] ಶೈವರಿಗೆ ದೇವಸ್ಥಾನ ಹಾಗೂ ಮಠ ಎರಡೂ ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಕೇಂದ್ರಗಳಾಗಿದ್ದುವಾದರೆ, ವೀರಶೈವರಿಗೆ ಸ್ಥಾವರ ಲಿಂಗಪೂಜೆ ನಿಷಿದ್ಧವಾಗಿದ್ದರಿಂದ ಕೇವಲ ಮಠಗಳೇ ಆ ಕಾರ್ಯಗಳನ್ನು ನಿರ್ವಹಿಸುವ ಸಂಪೂರ್ಣ ಹೊಣೆ ಹೊತ್ತ ಕೇಂದ್ರಗಳಾಗಿದ್ದವು. ಮುಂದೆ ಶೈವರು ಅಥವಾ ವೀರಶೈವ ವಿದ್ವಾಂಸರುಗಳ ಹತೋಟಿಯಲ್ಲಿದ್ದ ಶಿಕ್ಷಣ ಕೇಂದ್ರಗಳನ್ನು ಶಿವಪುರ.(ಶಿವಪುರಿ) ಎಂದು ಕರೆಯುತ್ತಿದ್ದುದಾಗಿ ಡಾ|| ಜಿ.ಎಸ್. ದೀಕ್ಷಿತ ತಿಳಿಸಿದ್ದಾರೆ. ಕ್ರಿ.ಶ, ೧೫ ಹಾಗೂ ೧೬ ನೇ ಶತಮಾನದ ಆರಂಭದವರೆಗೂ ಉತ್ತರ ಕರ್ನಾಟಕದಲ್ಲಿ ಇಂಥಾ ಅನೇಕ ಶಿವಪುರಿ ಗಳೆಂಬ ಅಭಿದಾನದ ಗ್ರಾಮಗಳು ಹುಟ್ಟಿಕೊಂಡವು ಎಂದು ತಿಳಿದು ಬರುತ್ತದೆ.

---

೧) ಅಗ್ರಹಾರವೆಂದರೆ ಬ್ರಾಹ್ಮಣ ಪಂಡಿತರಿಗೆ ಎಲ್ಲಾ ಆದಾಯವು ಸೇರುತ್ತಿದ್ದ ಊರು

೨) ಬ್ರಹ್ಮಪುರಿ ಎಂದರೆ ದೊಡ್ಡ ಪಟ್ಟಣದ ಭಾಗವೊಂದರಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸವಾಗಿದ್ದ ಸ್ಥಳವು.

೩) ಘಟಿಕಾಸ್ಥಾನದ ಸ್ವರೂಪದ ಬಗ್ಗೆ ವಿದ್ವಾಂಸರಲ್ಲೇ ಭಿನ್ನಾಭಿಪ್ರಾಯಗಳಿವೆಯಾದರೂ ಅದೊಂದು ಧಾರ್ಮಿಕ ಶಿಕ್ಷಣ ಕೇಂದ್ರವೆಂದು ಭಾವಿಸಬಹುದು( ಡಾ: ಎಮ್.ಚಿದಾನಂದಮೂರ್ತಿ ಕ.ಸಾ.ಅ.ಪು. ೨೨೬-೧೯೬೬

೪) ಡಾ: ಪಿ.ವಿ. ನಾರಾಯಣ ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ ಪು-೨೬೪-೧೯೮೩

೫) ಪ್ರೋ: ಜಿ.ಎಚ್.ಹನ್ನೆರಡುಮಠ ವಿಶ್ವಪ್ರಭೆ ಸಂ: ೩-ಪು ೫೧೩ - ೧೯೯೧

ಕೊಪ್ಪಳ ಪ್ರದೇಶದಲ್ಲಿ ೧೦ ನೇ ಶತಮಾನದ ಪೂರ್ವದಲ್ಲಿ ಅಲ್ಲಲ್ಲಿ ಅಗ್ರಹಾರಗಳಿದ್ದುದನ್ನು ಈ ಪ್ರದೇಶದ ಶಾಸನಗಳಿಂದ ತಿಳಿಯಬಹುದು. ಈ ಅಗ್ರಹಾರಗಳೇ ಅಂದಿನ ವಿಶ್ವವಿದ್ಯಾಲಯಗಳಾಗಿದ್ದವೆಂದು ಹೇಳಬಹುದು. ಕೊಪ್ಪಳದಲ್ಲಿ ಋಗ್ವೇದಿಗಳು ಮತ್ತು ಯಜುರ್ವೇದಿಗಳು ಇದ್ದುದರಿಂದ ಈ ಎರಡೂ ವೇದಗಳ ವಿದ್ವಾಂಸರು ಇರಲೇಬೇಕು ಎಂದು ಊಹಿಸಬಹುದು. ಅಂದು ಇದು ಅಗ್ರಹಾರ ಅಥವಾ ಬ್ರಹ್ಮಪುರಿಯಾಗಿತ್ತು ಎಂದು ಹೇಳಬಹುದು.

ಕೊಪ್ಪಳದ ಗವಿಮಠವು ಪುರಾತನ ಕಾಲದಿಂದಲೂ ವಿದ್ಯಾಕೇಂದ್ರವಾಗಿತ್ತು. ಇಲ್ಲಿಯೂ ವೇದ, ಕಾವ್ಯ, ವ್ಯಾಕರಣ, ಅಧ್ಯಯನ ನಡೆದು ಬಂದವೆಂದು ಪುರಾಣ ಹಾಗೂ ಸ್ವಾಮೀಜೀಯವರಿಂದ ತಿಳಿದುಬರುತ್ತದೆ. ಜೊತೆಗೆ ಸಂಗೀತ, ಆಯುರ್ವೇದ ವಿದ್ಯೆಗೆ ಪ್ರೋತ್ಸಾಹ ಇತ್ತು. ೧೬ನೇ ಪೀಠಾಧಿಪತಿಗಳು ಆಯುರ್ವೇದ ಪಂಡಿತರಾಗಿದ್ದುದು ಈಗಲೂ ಜನತೆ ಹೇಳುತ್ತಾರೆ. ಶಾಸ್ತ್ರ ಪಂಡಿತರಿಗೆ ಆಶ್ರಯ ತಾಣವಾಗಿತ್ತು. ಸರ್ವ ಸಾಧಾರಣ ಎಲ್ಲಾ ಶ್ರೀಗಳು ಸಂಸ್ಕೃತವನ್ನು ಅರಿತಿದ್ದರು ಹಾಗೂ ಬೋಧಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಸಾರ್ವಜನಿಕವಾಗಿ ವಿದ್ಯಾಸಂಸ್ಥೆಗಳನ್ನು ಮಠದ ಹೊರಗಡೆ ಹಾಗೂ ಗ್ರಾಮಗಳಲ್ಲಿ ತೆರೆದು ವಿದ್ಯಾ ಪ್ರಸಾರದಲ್ಲಿ ನಿರತವಾದವರು ಕೂಡಾ ೧೬ನೇ ಪೂಜ್ಯರು. ೧೯೫೦ ರಲ್ಲಿ ಹೊಣೆಗಾರ ಸರಕಾರ ಅಸ್ತಿತ್ವದಲ್ಲಿ ಬಂದನಂತರ ಶಾಲೆಗಳಲ್ಲಿ ಕನ್ನಡ ಮಾಧ್ಯಮವಾಯಿತು. ಅದಕ್ಕೂ ಮುಂಚೆ ಉರ್ದು ಮಾಧ್ಯಮ ಇತ್ತು ೧೯೫೧ರಲ್ಲಿ ಕೊಪ್ಪಳದ ಗವಿಮಠವು ಶ್ರೀ ಗವಿಸಿದ್ದೇಶ್ವರರ ಹೆಸರಿನಲ್ಲಿ ಶಾಲೆ ಪ್ರಾರಂಭಿಸಿತು. ಅನುದಾನ ಪಡೆಯುವ ಶಾಲೆಗಳಲ್ಲಿ ಇದುವೇ ಪ್ರಥಮವಾಗಿತ್ತು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆ ಎರಡೂ ಒಳಗೊಂಡ ಈ ಶಾಲೆಯನ್ನು ತೆರೆದು ಸುತ್ತಲಿನ ಹಳ್ಳಿ ಮಕ್ಕಳಿಗೆ ಅನುಕೂಲ ಮಾಡಿಕೊಟ್ಟರು.

ಇದರ ಜೊತೆಗೆ ಉಚಿತ ಪ್ರಸಾದ ನಿಲಯಗಳನ್ನು ದೊಡ್ಡ ಪ್ರಮಾಣದಲ್ಲಿ ಪ್ರಾರಂಭಿಸಿದರು. ಮೊದಲು ಕೇವಲ ಊಟ, ವಸತಿ ವ್ಯವಸ್ಥೆ ಇತ್ತು. ಶಿಕ್ಷಣಕ್ಕಾಗಿ ಸರಕಾರಿ ಶಾಲೆಗಳಿಗೆ ಹೋಗಬೇಕಿತ್ತು. ಮಠದಲ್ಲಿಯೇ ಶಾಲೆ ಪ್ರಾರಂಭಿಸಿ ೩-೪ ವರ್ಷದಲ್ಲಿಯೇ ದಾನಿಗಳಿಂದ ಭವ್ಯ ಹೈಸ್ಕೂಲ ಕಟ್ಟಡ

ರ ಶಿಕ್ಷಕರನ್ನು ನೇಮಿಸಿಸುವದರೊಂದಿಗೆ ಸ್ವಾಮಿಗಳು ಶಿಕ್ಷಣ ಪ್ರಸಾರಕ್ಕೆ ಹೆಚ್ಚಿನ ುಬಾ ಸಂತೋಷದ ಸಂಗತಿ. ಶ್ರೀ ಗವಿಸಿದ್ದೇಶ್ವರ ಕಲಾ, ವಿಜ್ಞಾನ,ವಾಣಿಜ್ಯ, ಮಹಾ ರಲ್ಲಿ ಜ.ಮರಿಶಾಂತವೀರ ಸ್ವಾಮಿಗಳು ಗವಿಸಿದ್ದೇಶ್ವರ ಕಾಲೇಜನ್ನು ಪ್ರಾರಂಭಿಸಿ ಾ ವಾಣಿಜ್ಯ ತರಗತಿಗಳನ್ನು ತೆರೆದು ಗ್ರಾಮೀಣ ಪ್ರದೇಶದ ಮಕ್ಕಳಿಗೂ ಶಿಕ್ಷಣದ ಂಡರು. ಮಹಾವಿದ್ಯಾಲಯದ ಉದ್ಘಾಟನೆಯನ್ನು ಗುಲ್ಬರ್ಗಾದ ಪೂಜ್ಯ ವರು ಮಾಡಿದ್ದು ಇದೆ. ಉದ್ಘಾಟನೆಯು ಸೋಮವಾರ ನಡೆದದ್ದರಿಂದ ಇದರ ಗೆ ರವಿವಾರದ ಬದಲು ಸೋಮವಾರ ರಜಾ ದಿನವೆಂದು ಮಾಡಿದ್ದು ಈಗಲೂ ಾಲೇಜು ಭವ್ಯವಾದ ಕಟ್ಟಡವನ್ನು ಹೊಂದಿದ್ದು ಮೂರೂ ವಿಭಾಗಗಳು ತವಾಗಿ ನಡೆಯುತ್ತಿವೆ. ವಿಜ್ಞಾನ ವಿಭಾಗವನ್ನು ಆಧುನಿಕ ಸಾಮಗ್ರಿಗಳಿಂದ ಗದಲ್ಲೇ ಉತ್ತಮ ವಿಜ್ಞಾನ ಕಾಲೇಜು ಎಂದು ಸನ್ನದು ಪಡೆದುಕೊಂಡಿದೆ. ಈಗ ಿಗೆ ಪ್ರೋ: ಅಲ್ಲಮ ಪ್ರಭು ಬೆಟ್ಟದೂರ ಪ್ರಾಚಾರ್ಯರಾಗಿದ್ದಾರೆ. ಸುಮಾರು ್ಯಾಸಕರು, ಮತ್ತು ಸಿಬ್ಬಂದಿಯನ್ನು ಹೊಂದಿದೆ. ಈ ಹಿಂದೆ ಶ್ರೀಮಲ್ಲಿಕಾರ್ಜುನ ರ್ಯರಾಗಿದ್ದು ಇಡೀ ಕಾಲೇಜನ್ನು ಸುವ್ಯವಸ್ಥೆಗೊಳಿಸಿ ಹತ್ತಾರು ಸಾವಿರ ಮಕ್ಕಳಿಗೆ ಗುರುತರ ಸೇವೆ ಸಲ್ಲಿಸಿದ್ದು ಶ್ಲಾಘನೀಯ ಐದು ಎಕರೆ ಜಮೀನು ಕಾಲೇಜಿಗೆಂದೇ ು.ಸಿ. ಇಂದಾ ಡಿಗ್ರಿವರೆಗೆ ತರಗತಿಗಳು ನಡೆಯುತ್ತಿವೆ.

ವಿದ್ಯಾಲಯಕ್ಕೆ ಒಳಪಟ್ಟ ಈ ಕಾಲೇಜು 'ಎ' ದರ್ಜೆಯನ್ನು ಪಡೆದುಕೊಂಡಿದ್ದು ುಂಡಳಿ, ಪ್ರಾಚಾರ್ಯರು ಹಾಗೂ ನುರಿತ ಉಪನ್ಯಾಸಕ ಸಿಬ್ಬಂದಿಯವರ ಸತತ ದೆ. ಕಾಲೇಜಿಗಾಗಿಯೇ ಪತ್ಯೇಕ ಉಚಿತ ಪ್ರಸಾದ ನಿಲಯವಿದೆ. ಸುಮಾರು ೨೦೦ ಡೆಯುತ್ತಿದ್ದಾರೆ.

ರಾಷ್ಟ್ರೀಯ ಸ್ವಯಂ ಸೇವಾ ಘಟಕ, ಎನ್.ಸಿ.ಸಿ. ಘಟಕಗಳಿದ್ದು, ಪ್ರತಿ ವರ್ಷ ಹೋಗಿ ಹೊಸ ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಎಲ್ಲಾ ಇಲ್ಲಿ ಅವಕಾಶವಿದೆ.

## ಶ್ರೀ ಗವಿಸಿದ್ಧೇಶ್ವರ ಬಿ.ಈಡಿ. ಕಾಲೇಜು:

ಕಳೆದ ವರ್ಷದಿಂದ ಸಂಸ್ಥೆಯವರು ಸ್ವಾಮೀಜಿಯವರ ಅಪ್ಪಣೆಯಂತೆ ಬಿ.ಈಡಿ. ಕಾಲೇಜನ್ನು ಪ್ರಾರಂಬಿಸಿದ್ದಾರೆ. ೫೦ ಮಕ್ಕಳಿಗೆ ತರಬೇತಿ ಹೊಂದಲು ಅವಕಾಶವಿದ್ದು, ಪತ್ಯೇಕ ಕಟ್ಟಡವನ್ನು ಹೊಂದಿದೆ. ನುರಿತ ಪ್ರಾಚಾರ್ಯರು, ಉಪನ್ಯಾಸಕರನ್ನು, ಸಿಬ್ಬಂದಿಯನ್ನು ನೇಮಿಸಿಕೊಂಡು ಸ್ವತ: ಸ್ವಾಮಿಗಳೇ ಉಸ್ತುವಾರಿಯನ್ನು ನೋಡುತ್ತಿರುವದರಿಂದ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಕೊಡುತ್ತಿರುವದು ಕಂಡು ಬರುತ್ತದೆ. ಎಲ್ಲಾ ವರ್ಗದ ಮಕ್ಕಳಿಗೂ ಇಲ್ಲಿ ಶಿಕ್ಷಣದ ವ್ಯವಸ್ಥೆ ಇದೆ. ಹಾಗೂ ಮಕ್ಕಳಿಗೆ ಪ್ರತ್ಯೇಕ ಬಾಲಕ ಬಾಲಕಿಯರಿಗಾಗಿ ಹಾಸ್ಟೆಲ ವ್ಯವಸ್ಥೆ ಕೂಡ ಇದ್ದು ಗ್ರಾಮೀಣ ಭಾಗದ ಮಕ್ಕಳಿಗೂ ಶಿಕ್ಷಣ ಪಡೆಯಲು ಅನುಕೂಲ ಮಾಡಿದ್ದು ಪ್ರಶಂಶನೀಯ.

## ಶ್ರೀ ಗವಿಸಿದ್ದೇಶ್ವರ ಡಿ.ಈಡಿ. ಕಾಲೇಜು:

ಕಳೆದ ವರ್ಷದಿಂದಲೇ ಸಂಸ್ಥೆಯವರು ಸ್ವಾಮಿಗಳ ಅಪ್ಪಣೆಯಂತೆ ಸರಕಾರದಿಂದ ಡಿ.ಈಡಿ. (ಟಿ.ಸಿ.ಹೆಚ್) ತರಬೇತಿ ಸಂಸ್ಥೆಯನ್ನು ಮಂಜೂರಿ ಪಡೆದಿದ್ದಾರೆ. ೬೦ ಮಕ್ಕಳಿಗೆ ಶಿಕ್ಷಕರ ತರಬೇತಿ ಹೊಂದಲು ಅವಕಾಶವಿದೆ. ಪ್ರತ್ಯೇಕ ಕಟ್ಟಡದಲ್ಲಿ ಸುಸಜ್ಜಿತ ವಾಚನಾಲಯ ಪ್ರಾಯೋಗಿಕ ಪಾಠ ಕೊಠಡಿಗಳು, ಆಧುನಿಕ ಸಲಕರಣೆಗಳನ್ನು ಪೂರೈಸಿದ್ದಾರೆ. ಒಳ್ಳೆಯ ನುರಿತ ಉಪನ್ಯಾಸಕರನ್ನು ನೇಮಿಸಿಕೊಂಡು ಇಲ್ಲಿಯೂ ಸ್ವಾಮಿಗಳೇ ಸ್ವತ: ಉಸ್ತುವಾರಿ ನೋಡುತ್ತಿದ್ದಾರೆ. ಈ ವಿಭಾಗದಲ್ಲೂ ತರಬೇತಿದಾರ ವಿದ್ಯಾರ್ಥಿಗಳಿಗೆ ಪ್ರತ್ಯೇಕ ಹಾಸ್ಟೇಲ ವ್ಯವಸ್ಥೆ ಇದ್ದು ಕಡಿಮೆ ಖರ್ಚಿನಲ್ಲಿ ಊಟದ ವ್ಯವಸ್ಥೆಯನ್ನೂ ಮಾಡಿದ್ದಾರೆ. ಪೂಜ್ಯ ಸ್ವಾಮಿಗಳೇ ಶಿಕ್ಷಣ ತಜ್ಞರಾಗಿದ್ದುದಕ್ಕೆ ಇಂಥ ಶಿಕ್ಷಣ ತರಬೇತಿ ವರ್ಗಗಳನ್ನು ತೆರೆದು ಬಡ ಮಕ್ಕಳಿಗೂ ಲಾಭವನ್ನು ಕೊಡುತ್ತಿದ್ದಾರೆ. ಭವ್ಯವಾದ ಪತ್ಯೇಕ ಕಟ್ಟಡವನ್ನು ಈ ಕಾಲೇಜು ಹೊಂದಿದೆ. ಶಿಕ್ಷಣ ಪ್ರಸಾರದಲ್ಲಿ ಶ್ರೀಗಳು ಹೆಚ್ಚಿನ ಗಮನ ಕೊಟ್ಟಿದ್ದು ಕಂಡು ಬರುತ್ತದೆ.

# ಶ್ರೀ ಗವಿಸಿದ್ಧೇಶ್ವರ ಆಯುರ್ವೇದ ಕಾಲೇಜು ಮತ್ತು ಆಸ್ಪತ್ರೆ:

೧೯೯೮ ನೇ ವರ್ಷದಲ್ಲಿ ಆಯುರ್ವೇದ ಕಾಲೇಜನ್ನು ಪ್ರಾರಂಭಿಸಿ ಗವಿಮಠದಲ್ಲಿ ಹಿಂದಿನ ಪರಂಪರೆಯನ್ನು ಸಧ್ಯದ ಸ್ವಾಮಿಗಳು ಅನುಸರಿಸುತ್ತಿದ್ದಾರೆ. ಲಿಂ. ಜ. ಮರಿಶಾಂತವೀರ ಸ್ವಾಮಿಗಳು ಆಯುರ್ವೇದ ಪಂಡಿತರಾಗಿದ್ದರು. ಮಠದಲ್ಲಿ ಬಂದ ರೋಗಿಗಳಿಗೆ ಸ್ವತ: ಔಷದಿಯನ್ನು ಕೊಟ್ಟು ಗುಣಮುಖರನ್ನಾಗಿ ಮಾಡುತ್ತಿದ್ದರು. ಅದರಂತೆ ಲಿಂ. ಜ. ಶಿವಶಾಂತವೀರ ಸ್ವಾಮಿಗಳಿಗೂ ಸಹ ಆಯುರ್ವೇದ ಔಷಧಿಗಳ ಬಗ್ಗೆ ಜ್ಞಾನವಿತ್ತು. ಅನೇಕ ದೊಡ್ಡ ರೋಗಿಗಳನ್ನು ವಾಸಿ ಮಾಡಿದ್ದು ಕಂಡು ಬರುತ್ತದೆ. ಹೀಗೆ ಅಯುರ್ವೇದ ವಿದ್ಯೆಯಲ್ಲಿ ಎಲ್ಲಾ ಪೂಜ್ಯರೂ ಒಳ್ಳೆ ಅನುಭವಿಗಳಿದ್ದುದು ತಿಳಿಯುತ್ತದೆ. ಅದನ್ನೇ ಈಗಿನ ೧೮ನೇ ಪೀಠಾಧಿಪತಿಗಳು ಸಹ ಮುಂದುವರೆಸಿಕೊಂಡು ಸಾಗಿದ್ದಾರೆ. ಈಗಿರುವ ಆಯುರ್ವೆದ ಕಾಲೇಜಿಗೆ ೧೦೦ ಹಾಸಿಗೆಯ ದವಾಖಾನೆಯನ್ನು ಕಟ್ಟಿಸಿ ಸುಸಜ್ಜಿತ ಸಲಕರಣೆಗಳು ವೈದ್ಯರು ಹಾಗೂ ಇತರೆ ಸಿಬ್ಬಂದಿಗಳನ್ನು ನೇಮಿಸಿದ್ದಾರೆ. ಹೊರ ರೋಗಿಗಳಿಗೂ ಪ್ರತ್ಯೇಕ ವಿಭಾಗ ತೆರೆದಿದ್ದಾರೆ. ದಿನಾಲೂ ನೂರಾರು ಹೊರ ರೋಗಿಗಳು ಇದರ ಲಾಭ ಪಡೆಯುತ್ತಿದ್ದಾರೆ. ಇದೀಗ ವೈದ್ಯ ತರಬೇತಿ ಬಿ.ಎ.ಎಂ.ಎಸ್. ಪದವಿಯಾಗಿ ಐದನೇ ತಂಡ ಹೊರಬಂದಿದೆ. ಒಂದು ವರ್ಷದ ಕಿರು ವೈದ್ಯಸೇವೆ ಇದ್ದು. ನಾಲ್ಕೂವರೆ ವರ್ಷದ ಅಧ್ಯಯನದ ನಂತರ ಈ ಕಿರುವೈದ್ಯಸೇವೆ ಇರುತ್ತದೆ.

ಮೊದಲ ಶೈಕ್ಷಣಿಕ ಘಟ್ಟದಲ್ಲಿ ಶರೀರ ರಚನೆ, ಶರೀರ ಕ್ರಿಯಾ, ಅಷ್ಟಾಂಗ ಸಂಗ್ರಹ, ಪದಾರ್ಥ ವಿಜ್ಞಾನ, ಆಯುರ್ವೆದ ಪರಿಚಯದೊಂದಿಗೆ ಸಂಸ್ಕೃತಿ, ಪಾಣಿನಿ, ವ್ಯಾಕರಣ, ವೈದ್ಯಕೀಯ ವಿಷಯ, ಲಘು ಸಿದ್ಧಾಂತ ಕೌಮುದಿ, ಅಪರೀಕ್ಷಿತಕಾರಕ, ಅನುವಾದ ಚಂದ್ರಿಕ ಇವುಗಳನ್ನು ಕಲಿಸಲಾಗುತ್ತಿದೆ.

ಎರಡನೇ ಹಂತದಲ್ಲಿ ಸ್ವಸ್ತವೃತ್ತ, ಪ್ರಕೃತಿಚಿಕಿತ್ಸಾ, ಚರಕ ಸಂಹಿತೆ, ದ್ರವ್ಯಶಾಸ್ತ್ರ, ಯೋಗ ರಸಶಾಸ್ತ್ರ ಮತ್ತು ಬೈಷಜ್ಯ ಕಲ್ಪನೆ, ವಿಕೃತಿ ವಿಜ್ಞಾನ ಮತ್ತು ವ್ಯವಹಾರ ಆಯುರ್ವೇದಗಳನ್ನು ಕಲಿಸಲಾಗುತ್ತದೆ.

ಮೂರನೇ ಮಜಲಿನಲ್ಲಿ ಕಾಯ ಚಿಕಿತ್ಸೆ, ಪಂಚ ಕರ್ಮ, ಶಲ್ಯ ತಂತ್ರ, ಶಾಲತಂತ್ರ, ಕೌಮಾರ ಪಥ್ಯ, ಪ್ರಸೂತಿ ತಂತ್ರ ಮತ್ತು ಸ್ತ್ರೀ ರೋಗ, ಚರಕ ಸಂಹಿತೆಯ ಎರಡನೇ ಭಾಗಗಳನ್ನು ಕಲಿಸುತ್ತಾರೆ. ಅಧ್ಯಯನ ನಂತರ ವೃತ್ತಿ ತರಬೇತಿಗಾಗಿ ಈಗಾಗಲೇ ಒಂದು ನೂರು ಹಾಸಿಗೆವುಳ್ಳ ಆಸ್ಪತ್ರೆಯೂ ಇಲ್ಲಿದೆ. ವಿವಿಧ ಕಾಯಿಲೆಗಳಿಗೆ ಇಲ್ಲಿ ಯಶಸ್ವಿ ಚಿಕಿತ್ಸೆ ನೀಡಲಾಗುತ್ತಿದೆ. ಬಡವರಿಗೆ ಉಚಿತ ಚಿಕಿತ್ಸಾ ಸೌಲಭ್ಯವಿರುವುದು.

ನಗರಕ್ಕೆ ಹೊಂದಿಕೊಂಡ ಈ ಕಾಲೇಜಿನ ವಿಶಾಲ ಆವರಣ, ವಿಸ್ತಾರ ತರಗತಿ ಕೊಠಡಿಗಳು, ಸೂಕ್ತ ಪ್ರಯೊಗಾಲಯವನ್ನು ಹೊಂದಿದೆ. ಒಂದು ಶೈಕ್ಷಣಿಕ ಹಂತ (ಬ್ಯಾಚ್) ಕ್ಕೆ ೫೦ ವಿದ್ಯಾರ್ಥಿಗಳಿಗೆ ಪ್ರವೇಶಾವಕಶವಿದೆ. ೧೯೯೮ ರಲ್ಲಿ ಆರಂಭಗೊಂಡ ಈ ಕಾಲೇಜಿನಲ್ಲಿ ೨೫೦ ವಿದ್ಯಾರ್ಥಿಗಳು ಈಗ ವ್ಯಾಸಂಗ ಮಾಡುತ್ತಿದ್ದಾರೆ.

## ಹಿರಿಯ ಪ್ರಾಥಮಿಕ ಶಾಲೆಗಳು:

ಕೊಪ್ಪಳ ನಗರದಲ್ಲಿ ಎರಡು ಪ್ರಾಥಮಿಕ ಶಾಲೆಗಳಿದ್ದು ಒಂದು ಕುಂಬಾರ ಓಣಿಯಲ್ಲಿದೆ. ದೊಡ್ಡದಾದ ಸ್ವಂತ ಕಟ್ಟಡವನ್ನು ಹೊಂದಿದ್ದು ಒಂದರಿಂದ ಏಳನೇ ತರಗತಿಗಳ ವರೆಗೆ ಈ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣ ನೀಡಲಾಗುತ್ತಿದೆ. ಉತ್ತಮ ನುರಿತ ಶಿಕ್ಷಕರ ವೃಂದವು ಕಾರ್ಯ ನಿರ್ವಹಿಸುತ್ತಿದೆ. ಇದರ ಜೊತೆಗೆ ಒಂದು ಪೂರ್ವ ಪ್ರಾಥಮಿಕ ಶಾಲೆಯು ಇದೇ ಕಟ್ಟಡದಲ್ಲಿ ನಡೆಯುತ್ತೆದೆ. ೨೮ ವರ್ಷಗಳ ಹಿಂದೆ ಇದನ್ನು ಪ್ರಾರಂಭಿಸಿದರು.

ಇನ್ನೊಂದು ಪ್ರಾಥಮಿಕ ಶಾಲೆಯು ಕೊಪ್ಪಳದ ಗುಡ್ಡದ ಓಣಿಯಲ್ಲಿರುವ ಕೊನೆಯ ಭಾಗ (ಓಣಿ) ಗೌರಿಅಂಗಳದಲ್ಲಿ ಇದು ಕೂಡಾ ಹೊಸದಾದ ಸುಸಜ್ಜಿತ ಕಟ್ಟಡವನ್ನು ಹೊಂದಿದೆ. ಹದಿನೈದು ವರ್ಷಗಳ ಹಿಂದೆ ಪೂಜ್ಯ ಶಿವಶಾಂತವೀರ ಸ್ವಾಮಿಗಳು ಇದನ್ನು ಉದ್ಘಾಟಿಸಿ ತರಗತಿ ಪ್ರಾರಂಭಿಸಿದ್ದರು.

## ಹಿರಿಯ ಪ್ರಾಥಮಿಕ ಶಾಲೆ ಕುಕನೂರು

ಯಲಬುರ್ಗಾ ತಾಲೂಕಿನ ಕುಕನೂರಲ್ಲಿಯೂ ಇದೇ ಸಂಸ್ಥೆಯ ವತಿಯಿಂದ ಹಿರಿಯ ಪ್ರಾಥಮಿಕ ಶಾಲೆಯು ನಡೆಯುತ್ತಿದೆ. ೧೯೮೧ ರಿಂದ ಪ್ರಾರಂಭಗೊಂಡ ಈ ಶಾಲೆ ಸ್ವಂತ ಕಟ್ಟಡವನ್ನು ಹೊಂದಿದ್ದು ಒಂದರಿಂದ ಏಳನೇ ತರಗತಿಗಳವರೆಗೆ ನಡೆಯುತ್ತದೆ. ಉತ್ತಮ ಭೋಧಕ ವರ್ಗ ಇದೆ. ಸುಮಾರು ಐದು ನೂರು ಮಕ್ಕಳು ಈ ಶಾಲೆಯಲ್ಲಿ ಓದುತ್ತಿದ್ದಾರೆ. ವಿಶಾಲ ಆಟದ ಮೈದಾನ , ಗ್ರಂಥಾಲಯವೂ ಇರುತ್ತದೆ. ಗ್ರಾಮೀಣ ಭಾಗದ ಮಕ್ಕಳಿಗೆ ಹೆಚ್ಚಿನ ಅನುಕೂಲತೆಯನ್ನು ಈ ಸಂಸ್ಥೆ ಕಲ್ಪಿಸಿದೆ.

ಇದರೊಂದಿಗೆ ಪೂರ್ವ ಪ್ರಾಥಮಿಕ ಶಾಲೆಯೂ ಕೂಡಾ ನಡೆಯುತ್ತದೆ. ಮೊದಲು ಈ ಶಾಲೆಯನ್ನೇ ಪ್ರಾರಂಭಿಸಿ ಅಂದರೆ ೧೯೮೦ ರಲ್ಲಿ ಪ್ರಾರಂಭಿಸಿ ಅ ಮಕ್ಕಳೆ ಮುಂದೆ ಪ್ರಾಥಮಿಕ ಒಂದನೇ ತರಗತಿಗೆ ಹಾಜರಾದರು ಚಿಕ್ಕ ಮಕ್ಕಳಿಗೆ ಆಟದ ಸಾಮಗ್ರಿ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಉತ್ತಮ ಶಿಕ್ಷಕರನ್ನು ನೇಮಿಸಿದ್ದಾರೆ. ಮಹಿಳಾ ಶಿಕ್ಷಕಿಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದುದು ವಿಶೇಷ.

## ಅಂಗನವಾಡಿ ಶಿಕ್ಷಕಿಯರ ತರಬೇತಿ ಸಂಸ್ಥೆ:

ಕುಕನೂರು ಯಲಬುರ್ಗಾ ತಾಲೂಕಿನಲ್ಲಿ ದೊಡ್ಡ ಶಹರವು ಇಲ್ಲಿಯೂ ಒಂದು ಅಂಗನವಾಡಿ ಶಿಕ್ಷಕಿಯರ ತರಬೇತಿ ಸಂಸ್ಥೆಯನ್ನು ೧೯೮೦ ರಲ್ಲಿ ಪ್ರಾರಂಭಿಸಿದರು ಇದು ಮಾಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ಸಂಬಂಧಿಸಿದ್ದು ಗವಿಶಿದ್ದೇಶ್ವರ ಶಿಕ್ಷಣ ಟ್ರಸ್ಟದವರೆ ನಡೆಸುತ್ತಿದ್ದಾರೆ. ಈ ಸಂಸ್ಥೆಗೂ ಪ್ರತ್ಯೇಕ ಕಟ್ಟಡವಿದ್ದು ಐದು ಜನ ಶಿಕ್ಷಕರು (ಬೋಧಕರು) ಇರುತ್ತಾರೆ. ಪ್ರತಿ ಮೂರು ತಿಂಗಳ ೧೦ ತಿಂಗಳ ತರಬೇತಿ ಕೋರ್ಸ ಇಲ್ಲಿ ನಡೆಯುತ್ತಿದೆ. ಇಡಿ ಜಿಲ್ಲೆಗೆ ಇದೊಂದೇ ಅಂಗನವಾಡಿ ಸಂಸ್ಥೆ ಇದ್ದು ಉತ್ತಮ ತರಗತಿಯನ್ನು ಕಾರ್ಯ ನಿರ್ವಹಿಸುತ್ತದೆ.

## ಗವಿಸಿದ್ಧೇಶ್ವರ ಪ್ರೌಢ ಶಾಲೆ ಕೊಪ್ಪಳ

ಕೊಪ್ಪಳ ನಗರದಲ್ಲಿ ೧೯೫೧ ರಲ್ಲಿ ಶಿಕ್ಷಣ ಟ್ರಸ್ಟ ಆರಂಭಗೊಂಡು ಪೂಜ್ಯ ಮರಿಶಾಂತವೀರ ಸ್ವಾಮಿಗಳು ಪ್ರಾರಂಭಿಸಿದ ಈ ಸಂಸ್ಥೆ ಕೊಪ್ಪಳ ಭಾಗದ ಸಾವಿರಾರು ಜನರಿಗೆ ಶಿಕ್ಷಣ ಒದಗಿಸಿದ ಹೆಮ್ಮೆ ಈ ಹೈಸ್ಕೂಲಿನದು ಆಗಿನ ಆ ಕಾಲಕ್ಕೆ ಸುಸಜ್ಜಿತ ಕಟ್ಟಡವನ್ನು ಹೊಂದಿದ್ದ ಶಾಲೆ ಸುಮಾರು ಒಂದು ಸಾವಿರ ಮಕ್ಕಳು ಅಲ್ಲಿ ೮,೯,೧೦, ನೇ ತರಗತಿಯಲ್ಲಿ ಓದುತ್ತಿದ್ದರು. ಇದು ವಿವಿದೋದ್ದೇಶ ಶಾಲೆಯಂದು ಪ್ರಾರಂಭವಾಗಿತ್ತು. ಆನೇಕ ಉತ್ತಮ ಶಿಕ್ಷಕರು ಇಲ್ಲಿ ಕೆಲಸ ಮಾಡಿ ರಾಜ್ಯ ರಾಷ್ಟ್ರ ಪ್ರಶಸ್ತಿ ಗಳಿಸಿದ್ದಾರೆ. ದೊಡ್ಡ ಆಟದ ಮೈದಾನವಿದ್ದು, ಎನ್.ಸಿ.ಸಿ. ವಿಭಾಗ ಇದೆ. ಈಗಲೂ ಒಂದೊಂದು ತರಗತಿ ೩-೪ ಡಿವಿಜನ ಹೊಂದಿದ್ದು ಸುಮಾರು ೧೨೦೦ ವಿಧ್ಯಾರ್ಥಿಗಳು ಓದುತ್ತಿದ್ದಾರೆ.

## ಗವಿಸಿದ್ಧೇಶ್ವರ ಪ್ರೌಢ ಶಾಲೆ ಕುಕನೂರು:

ಯಲ್ಬುರ್ಗಾ ತಾಲೂಕಿನ ಕುಕನೂರು ಗ್ರಾಮದಲ್ಲಿ ಸಂಸ್ಥೆಯಿಂದ ಪ್ರೌಢ ಶಾಲೆಯನ್ನು ೧೯೭೦ನೇ ಇಸ್ವಿಯಿಂದ ಪ್ರಾರಂಭಿಸಿದರು. ಮೊದಲು ಭಾಡಿಗೆ ಮನೆಯಲ್ಲಿ ಪ್ರಾರಂಭಿಸಿದ ಈ ಶಾಲೆಯನ್ನು ೧೯೭೬ ರಲ್ಲಿ ಸ್ವಂತ ಜಾಗೆ ಹಿಡಿದು ಕಟ್ಟಡ ವನ್ನು ನಿರ್ಮಿಸಿ ತರಗತಿಯನ್ನು ನಡೆಸುತ್ತಿದ್ದರು. ಈಗಲೂ ಭವ್ಯ ಕಟ್ಟಡವಿದೆ, ಆಟವಾಡಲು ವಿಶಾಲ ಮೈದಾನ ಇದೆ. ೨೦ ಜನ ಶಿಕ್ಷಕ ಸಿಬ್ಬಂದಿಯವರನ್ನು ಉತ್ತಮ ಬೋಧಕ ಸಿಬ್ಬಂದಿಯವರ ಮಕ್ಕಳಿಗೆ ಒಳ್ಳೆ ಮಟ್ಟದ ಶಿಕ್ಷಣವನ್ನು ಕೊಟ್ಟದ್ದರಿಂದು ಸಂಸ್ಥೆಗೆ ರಾಜ್ಯ ಮಟ್ಟದ ಪ್ರಶಸ್ತಿ ಲಭಿಸಿದ್ದು. ಶ್ರೀ ಗವಿಸಿದ್ದೇಶ್ವರ ಆಶೀರ್ವಾದವೆಂದು ಹೇಳಬಹುದು. ಸಧ್ಯ ಈ ಪ್ರೌಢ ಶಾಲೆಯಲ್ಲಿ ಸುಮಾರು ಒಂದು ಸಾವಿರ ಮಕ್ಕಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಈಗ ಶ್ರೀ ಗವಿಸಿದ್ಧಪ್ಪ ಚಲವಾದಿ ಮುಖ್ಯೋಪಾಧ್ಯಾಯರು ಒಳ್ಳೇ ಆಡಳಿತಗಾರರಿದ್ದು, ಶಾಲೆಯನ್ನು ಪ್ರಗತಿಯತ್ತ ಕೊಂಡೊಯ್ಯುತ್ತಿರುವದು ಶ್ಲಾಘನೀಯ.

## ಗವಿಸಿದ್ಧೇಶ್ವರ ಸಂಸ್ಕೃತ ಪಾಠ ಶಾಲೆ :

ಕೊಪ್ಪಳದ ಮಠದಲ್ಲಿಯೂ ಈ ಹಿಂದೆ ಪೂಜ್ಯ ಮರಿಶಾಂತವೀರ ಸ್ವಾಮಿಗಳು ಸಂಸ್ಕೃತ ಶಾಲೆ ಪ್ರಾರಂಭಿಸಿದ್ದರು. ಕಾಶಿಯಲ್ಲಿ ಸಂಸ್ಕೃತ ಭಾಷೆಯನ್ನು ಸ್ವತ: ಪೂಜ್ಯರು ಅಭ್ಯಾಸ ಮಾಡಿ ಬಂದವರು ಇಲ್ಲಿಯೂ ಶಾಲೆಯನ್ನು ಪ್ರಾರಂಭಿಸಿದಾಗ ಕೇವಲ ೫-೬ ಮಕ್ಕಳು ಬೇರೆ ಬೇರೆ ಮಠದ ಪಟ್ಟಾಧ್ಯಕ್ಷರುಗಳು ಇಲ್ಲಿ ಸಂಸ್ಕೃತವನ್ನು ಕಲಿತ ಉದಾಹರಣೆಗಳಿವೆ. ಆಗ್ಗೆ ಸಂಸ್ಕೃತ ಪಂಡಿತರೆಂದು ಕೊಂಗವಾಡದ ವೀರಭದ್ರಯ್ಯನವರು ಪಾಠ ಹೇಳಿ ಕೊಡುತ್ತಿದ್ದಾರೆಂದು ಉಲ್ಲೇಖವಿದೆ ಮತ್ತು ಪೂಜ್ಯ ಸ್ವಾಮಿಗಳಲ್ಲಿ ಸ್ವತ: ಸಂಸ್ಕೃತ ವಿದ್ವಾಂಸರಿದ್ದಾರೆ. ಈ ಪರಂಪರೆ ಹಾಗೆ ಮುಂದುವರೆದು ಪೂಜ್ಯ ಶಿವಶಾಂತವೀರ ಸ್ವಾಮಿಗಳು ಸಹ ಸಂಸ್ಕೃತ ಅಭ್ಯಾಸವನ್ನು ಬೆಂಗಳೂರಿನಲ್ಲಿ ಮಹಾಂತರಮಠದಲ್ಲಿ ಸಂಸ್ಕೃತವನ್ನು ಓದಿ ಪಂಡಿತರಾದ ಬಗ್ಗೆ ಉಲ್ಲೇಖವಿದೆ.[೧] ಮುಂದೆ ಶ್ರೀ ಶಿವಶಾಂತವೀರ ಸ್ವಾಮಿಗಳು ಸಂಸ್ಕೃತ ಪಾಠಶಾಲೆಯನ್ನು ಮುಂದುವರೆಸಿದ್ದರು. ಪ್ರತೀವರ್ಷ ೮-೧೦ ಜನರು ಅಭ್ಯಾಸ ಮಾಡುತ್ತಾ ಬಂದಿದ್ದಾರೆ. ಇದರ ಜೊತೆಗೆ ವೇದದ ಅಭ್ಯಾಸವನ್ನು ಮಾಡಿಸಲು ವ್ಯವಸ್ಥೆಯನ್ನೂ ಮಾಡಿದ್ದಾರೆ. ಈಗಲೂ ಕೂಡಾ ಸಂಸ್ಕೃತ ಹಾಗೂ ವೇದ ಪಾಠ ಶಾಲೆ ಉತ್ತಮ ರೀತಿಯಿಂದ ಕಾರ್ಯ ನಿರ್ವಹಿಸುತ್ತಿದೆ.

ಈಗಿನ ೧೮ನೇ ಪೂಜ್ಯರಾದ ಜ. ಅಭಿನವ ಗವಿಸಿದ್ದೇಶ್ವರಸ್ವಾಮಿಗಳು ವೇದಾಭ್ಯಾಸದಲ್ಲಿ ಪ್ರಖಾಂಡ ಪಂಡಿತರಿದ್ದು ಸ್ನಾತಕೊತ್ತರ ಪದವಿಧರಿದ್ದು, ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಉನ್ನತಿಯನ್ನು ನಿರೀಕ್ಷಿಸಲಾಗಿದೆ.

---

೧. ಬೆಂಗಳೂರು ನಗರದ ವೀರಶೈವ ಮಠಗಳು ಡಾ: ಬಿಸಿ ವೀರಪ್ಪ ಪುಟ ೨೨೨ / ೨೨೭ - ೨೦೦೧

## ಸಂಸ್ಕೃತ ಪಾಠ ಶಾಲೆ

ಸಂಸ್ಕೃತ ಭಾಷೆ ಭಾರತೀಯ ಸಂಸ್ಕೃತಿ, ವೇದ, ಆಗಮಗಳನ್ನು ಅಧ್ಯಯನ ಮಾಡಲು ಅನುಕೂಲವಾಗುವ ಹಾಗೆ ಶ್ರೀ ಗವಿಸಿದ್ಧೇಶ್ವರ ಸಂಸ್ಕೃತ ವೇದ ವಿದ್ಯಾಲಯವನ್ನು ೧೫ನೇ ಪೀಠಾಧಿಪತಿಗಳಾದ ಪೂಜ್ಯ ಜ. ಮರಿಶಾಂತವೀರ ಮಹಾಸ್ವಾಮಿಗಳು ಪ್ರಾರಂಭಿಸಿದ್ದರು. ಇಲ್ಲಿ ಎಲ್ಲಾ ವರ್ಗದ ಮಕ್ಕಳಿಗೂ ಉಚಿತ ಶಿಕ್ಷಣವನ್ನು ನೀಡುತ್ತಿದೆ. ಅಲಂಕಾರ, ಅದ್ವೈತ ವೇದಾಂತ ಶೈವ ಆಗಮ ತರಗತಿಗಳನ್ನು ನಡೆಸಿದ ಬಗ್ಗೆ ಉಲ್ಲೇಖವಿದೆ. ಪ್ರಥಮ ಹಂತದಿಂದ ವಿದ್ವತ್ ಉತ್ತಮ ವರೆಗೆ ಕಲಿಕೆಗೆ ಅವಕಾಶವಿರುತ್ತದೆ. ಇದರಿಂದ ಗ್ರಾಮೀಣ ಭಾರತ ಮಕ್ಕಳಿಗೂ ಧರ್ಮ ಸಂಸ್ಕೃತಿಗಳ ಬಗ್ಗೆ ಉತ್ತಮ ಅರಿವನ್ನು ಮೂಡಿಸಲು ಸಾಧ್ಯವಾಗುತ್ತಿದೆ. ಈಗಲೂ ಸಹ ಎಲ್ಲ ಧರ್ಮದ ಮಕ್ಕಳು ಬೇರೆ ಬೇರೆ ಮಠಗಳ ವಟುಗಳು, ಭಾವೀ ಮಠಾಧೀಶರುಗಳು, ವೇದಾಗಮ, ಶಾಸ್ತ್ರಾಧ್ಯಯನ ಮಾಡುತ್ತಿದ್ದಾರೆ. ಇಲ್ಲಿ ಅಭ್ಯಾಸ ಮಾಡಿದ ಅನೇಕ ಶಿಷ್ಯರು ಬೇರೆ ಬೇರೆ ಮಠಗಳಿಗೆ ಅಧಿಪತಿಗಳಾಗಿದ್ದಾರೆ.

## ಗವಿಸಿದ್ಧೇಶ್ವರ ಸಂಗೀತ ಪಾಠ ಶಾಲೆ :

ಕೊಪ್ಪಳದಲ್ಲಿ ಮಠದಲ್ಲಿಯೇ ಸಂಗೀತಪಾಠ ಶಾಲೆಯಿದ್ದು, ಕಳೆದ ೨೫ ವರ್ಷದಿಂದ ಈ ಸಂಸ್ಥೆ ಕಾರ್ಯ ನಿರ್ವಹಿಸುತ್ತಿದೆ. ಗದುಗಿನ ವೀರೇಶ್ವರ ಸಂಗೀತ ಆಶ್ರಮದಲ್ಲಿ ಕಲಿತ ನುರಿತ ಇಬ್ಬರು ಸಂಗೀತ ಅಧ್ಯಾಪಕರು ಇಲ್ಲಿ ಕೆಲಸ ಮಾಡುತ್ತಿದಾರೆ. ಸುಮಾರು ೫೦ ಮಕ್ಕಳು ಸಂಗೀತ ಕಲಿಯುತ್ತಿದ್ದಾರೆ. ಮಠದ ಯಾವುದೇ ಕಾರ್ಯಕ್ರಮವಿದ್ದರು ಈ ಸಂಗೀತ ಶಾಲೆಯ ಮಕ್ಕಳು ಪ್ರಾರ್ಥನೆ ಹಾಗೂ ಹಾಡುಗಳನ್ನು ಹಾಡಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸುತ್ತಿರುವರು ಮೆಚ್ಚುವಂತಹದ್ದು. ಇನ್ನೂ ಹೆಚ್ಚಿನ ಫಲವನ್ನು ನಿರೀಕ್ಷಿಸಲಾಗಿದೆ.

ಅಲ್ಲದೇ ಪಠ್ಯೇತರ ಚಟುವಟಿಕೆಗಳಲ್ಲಿ ಇಲ್ಲಿಯ ಶಾಲಾ ಕಾಲೇಜು ವಿದ್ಯಾಪೀಠದ ಮಕ್ಕಳು ಒಳ್ಳೆಯ ಪ್ರಗತಿಯನ್ನು ಸಾಧಿಸಿದ್ದಾರೆ. ರಾಜ್ಯ ಮಟ್ಟದ, ರಾಷ್ಟ್ರಮಟ್ಟದ ಅನೇಕ ಚಟುವಟಿಕೆ ಭಾಷಣ ಸಂಗೀತ ಹಾಗೂ ಆಟೋಟಗಳಲ್ಲಿ, ನಾಟಕಗಳಲ್ಲಿ ಸ್ಪರ್ಧೆಯಲ್ಲಿ ಭಾಗವಹಿಸಿ ಸ್ವರ್ಣ ಪದಕ ವಿಜೇತರಾಗಿದ್ದಾರೆ. ಆಕಾಶವಾಣಿ, ದೂರದರ್ಶನದಲ್ಲಿ ಇಲ್ಲಿಯ ಮಕ್ಕಳು ಶಿಕ್ಷರು, ಉಪನ್ಯಾಸಕರು ಭಾಗವಹಿಸಿದ್ದಾರೆ.

## ಶ್ರೀ ಗವಿಸಿದ್ಧೇಶ್ವರ ಉಚಿತ ಪ್ರಸಾದ ನಿಲಯಗಳು:

### ೧) ಕೊಪ್ಪಳದಲ್ಲಿ :

ಕೊಪ್ಪಳ ಮಠದಲ್ಲಿಯೇ ಪ್ರತ್ಯೇಕವಾಗಿ ಅಲ್ಲಿಯ ಸುಮಾರು ೫೫೦ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಯಮವನ್ನು ಮಾಡಿದ್ದಾರೆ ವಿವಿಧ ಶಾಲೆ ಕಾಲೇಜುಗಳಲ್ಲಿ ಓದುತ್ತಿರುವ ಬಡ ಹಾಗೂ ಎಲ್ಲಾ ಜಾತಿ ವರ್ಗದ ಮಕ್ಕಳಿಗೆ ಈ ಅವಕಾಶವನ್ನು ಕಲ್ಪಿಸಿದ್ದಾರೆ. ಈ ಹಿಂದಿನ ಪೂಜ್ಯರು ಈ ವ್ಯವಸ್ಥೆಯನ್ನು ೨೦೦ ಮಕ್ಕಳಿಗೆ ಮಾಡಿದ್ದರಿಂದ ಪರ ಊರಿನಿಂದಲೂ ವಿದ್ಯಾರ್ಥಿಗಳು ಈ ಪ್ರಸಾದ ನಿಲಯಗಳಲ್ಲಿ ಅವಕಾಶ ಪಡೆದಿದ್ದಾರೆ. ಸಧ್ಯದ ಶ್ರೀಗಳು ಕಳೆದ ವರ್ಷದಿಂದ ಇನ್ನೂ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳನ್ನು ದಾಖಲ ಮಾಡಿಕೊಂಡು ಪ್ರಸಾದ ವ್ಯವಸ್ಥೆಯನ್ನು ಮಠದ ವತಿಯಿಂದ ಮಾಡಿದ್ದು ಸಂತೋಷದ ಸಂಗತಿ.

### ೨) ಹಿರೇ ಸಿಂದೋಗಿಯಲ್ಲಿ :

ಕೊಪ್ಪಳ ತಾಲೂಕಿನ ಹಿರೇಸಿಂದೋಗಿಯಲ್ಲಿ ಪ್ರೌಢ ಮತ್ತು ಪ್ರಾಥಮಿಕ ಶಾಲಾ ಮಕ್ಕಳಿಗಾಗಿ ಬಡ ವೀರಶೈವ ಮಕ್ಕಳಿಗೆಂದು ೧೯೭೦ ರಲ್ಲಿಯೆ ಗವಿಸಿದ್ದೇಶ್ವರ ಉಚಿತ ಪ್ರಸಾದ ನಿಲಯವನ್ನು ಹಿಂದಿನ ಪೂಜ್ಯರು ಪ್ರಾರಂಭಿದ್ದರು. ಆಗ್ಗೆ ಸುಮಾರು ೨೫ ಜನ ವಿದ್ಯಾರ್ಥಿಗಳು ಇದ್ದರು. ಕೆಲವು ವರ್ಷಕಾಲ ನಾನು ಅದರ ಉಸ್ತುವಾರಿ ನೋಡಿದ್ದೆನು. ಇದು ಕ್ರಮೇಣ ವೃದ್ಧಿ ಆಗುತ್ತ ಈಗ ಸುಮಾರು

೧೦೦ ಮಕ್ಕಳಿಗೆ ಅವಕಾಶವನ್ನು ಕಲ್ಪಿಸಿದ್ದಾರೆ. ಇನ್ನೊಂದು ಪ್ರಗತಿಯ ಸಂಗತಿ ಎಂದರೆ ಈಗ ಎಲ್ಲಾ ವರ್ಗದ ಬಡ ಮಕ್ಕಳಿಗೂ ವ್ಯವಸ್ಥೆಯನ್ನು ಮುಂದುವರಿಸಿದ್ದು ಮೆಚ್ಚುವಂಥದ್ದು.

## ೩) ಗಜೇಂದ್ರಗಡದಲ್ಲಿ :

ಗದಗ ಜಿಲ್ಲೆಯ ರೋಣ ತಾಲೂಕಿನ ಗಜೇಂದ್ರಗಡದಲ್ಲಿ ಶ್ರೀ ಗವಿಮಠದ ಶಾಖಾ ಮಠವಿದ್ದು ಅಲ್ಲಿಯೂ ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯವನ್ನು ಪ್ರಾರಂಭಿಸಿದ್ದಾರೆ. ಹತ್ತು ವರ್ಷದಿಂದ ಈಚೆಗೆ ಈ ವ್ಯವಸ್ಥೆ ಮಾಡಿದ್ದಾರೆ. ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಈ ವ್ಯವಸ್ಥೆ ಕಲ್ಪಿಸಿದ್ದಾರೆ. ಮೊದಲು ಇಲ್ಲಿಯೂ ಕೇವಲ ವೀರಶೈವ ಮಕ್ಕಳನ್ನು ಸೇರಿಸಿಕೊಳ್ಳುತ್ತಿದ್ದರು ಈಗ ಸ್ವಲ್ಪ ಸಡಿಲಿಕೆ ಉಂಟು.

## ೪) ಹೂವಿನ ಹಡಗಲಿ :

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯಲ್ಲಿ ಶಾಖಾ ಮಠವಿದೆ. ಭವ್ಯ ಮಠದ ಕಟ್ಟಡವಿದ್ದು ವಿದ್ಯಾರ್ಥಗಳಿಗೆ ವಾಸಿಸಲು ಕೊಠಡಿಗಳು ಹಾಗೂ ಉಚಿತ ಪ್ರಸಾದ ನಿಲಯವು ಇದೆ. ಉಸ್ತುವಾರಿಯನ್ನು ಅದೇ ಮಠದ ಶ್ರೀಗಳು ನೋಡಿಕೊಳ್ಳುತ್ತಿದ್ದಾರೆ. ಇಲ್ಲಿಯೂ ಶಾಲಾ ಕಾಲೇಜಿನ ಸುಮಾರು ೧೦೦ ಮಕ್ಕಳಿಗೆ ಊಟದ ವ್ಯವಸ್ಥೆಯನ್ನು ಮಾಡಿದ್ದಾರೆ. ಎಲ್ಲಾ ಜನಾಂಗದ ಮಕ್ಕಳಿಗೂ ವ್ಯವಸ್ಥೆಯನ್ನು ವಿಸ್ತರಿಸಿದ್ದಾರೆ. ಕೊಪ್ಪಳ ಶ್ರೀಗಳು ಆಗಾಗ್ಗೆ ಉಸ್ತುವಾರಿ ನೋಡುತ್ತಿದ್ದಾರೆ. ಇದೂ ಕೂಡಾ ಇಪ್ಪತ್ತು ವರ್ಷಗಳಿಂದ ಬೋರ್ಡಿಂಗಿನ ವ್ಯವಸ್ಥೆ ಮಾಡಿದ್ದಾರೆ.

## ೫) ಹರಪನಹಳ್ಳಿ :

ಡಾವಣಗೇರಿ ಜಿಲ್ಲೆಯ ಹರಪನಹಳ್ಳಿಯಲ್ಲೂ ಶಾಖಾ ಮಠವಿದೆ. ಇಲ್ಲಿಯೂ ಸುಮಾರು ೫೦ ಮಕ್ಕಳಿಗೆ ಉಚಿತ ಪ್ರಸಾದ ನಿಲಯವಿದ್ದು, ಅಲ್ಲಿಯೇ ಇದ್ದು ಓದಿಕೊಳ್ಳಲು ಕೊಠಡಿಗಳನ್ನು ನಿರ್ಮಿಸಿದ್ದಾರೆ. ಹೈಸ್ಕೂಲ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಿದ್ದಾರೆ.

## ೬) ಕಡ್ಲಬಾಳು ಗ್ರಾಮದಲ್ಲಿ:

ಬಳ್ಳಾರಿ ಜಿಲ್ಲಾ ಹಗರಿಬೊಮ್ಮನಳ್ಳಿ ತಾಲೂಕಿನ ಕಡ್ಲಬಾಳು ಗ್ರಾಮದ ಹೈಸ್ಕೂಲು ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯವನ್ನು ಅಲ್ಲಿಯ ಶಾಖಾ ಮಠದಲ್ಲಿಯೇ ಮಾಡಿದ್ದಾರೆ. ಸುಮಾರು ೫೦ ಮಕ್ಕಳು ಇಲ್ಲಿ ಓದಿ ಪ್ರಸಾದವನ್ನು ತೆಗೆದುಕೊಳ್ಳುತ್ತಿದ್ದಾರೆ. ೧೫ನೇ ಪೀಠಾಧೀಶರು ಅವಾಗ್ಗೆಯೇ ಬೋರ್ಡಿಂಗ ವ್ಯವಸ್ಥೆ ಮಾಡಿದ ಬಗ್ಗೆ ಉಲ್ಲೇಖವಿದೆ. ಮಠವು ದೊಡ್ಡ ಕಟ್ಟಡ ಹೊಂದಿದ್ದು ಬಡ ಮಕ್ಕಳಿಗೆ ವರಮಾನವಾಗಿದೆ. ಇಲ್ಲಿಯೂ ಕೂಡ ಎಲ್ಲಾ ಜಾತಿ ಮತದ ಮಕ್ಕಳನ್ನು ಸೇರಿಸಿಕೊಳ್ಳುತಿದ್ದುದು ತಿಳಿದು ಬರುತ್ತದೆ.

## ಮಠಗಳು ಸಾಹಿತ್ಯಕವಾಗಿ

ಯಾವುದೇ ಒಂದು ಜನಾಂಗದ ಸುಸಂಸ್ಕೃತ ಬದುಕಿನ ಬಗೆಗೆ ಒಂದು ಸ್ಪಷ್ಟವಾದ ಚಿತ್ರಣವನ್ನು ನೀಡುವಂತಹದು ಸಾಹಿತ್ಯ. ಇದು ಮಾನವ ಬದುಕಿಗೆ ಸಂಬಂಧಪಟ್ಟ ಭಾವನೆಗಳು ಅನುಭವಗಳು ಹಾಗೂ ಆಶೋತ್ತರಗಳನ್ನು ಮುಂದಿನ ತಲೆಮಾರುಗಳಿಗೆ ಕೊಂಡೊಯ್ಯುವಂತಹದು. ಮೇಲಾಗಿ ಅದಮ್ಯವಾದ ಕುತೂಹಲಗಳನ್ನು ವಿಚಾರಿಸಿ ನಂತರ ಮನಸ್ಸಿನಲ್ಲಿ ಬಿತ್ತಿ ಬೆಳೆಯುವಂತಹದು. ಹೀಗಾಗಿ ಸಾಹಿತ್ಯ ಭಾವ ಪ್ರಧಾನವಾಗುಳ್ಳ ಹೃದಯ ಸಂವೇದನೆಗೆ ಸಂಬಂಧಪಟ್ಟದ್ದು. ನಿಶ್ಚಿತವಾದ ವಿಷಯವನ್ನಾಧರಿಸಿ ವೈಜ್ಞಾನಿಕವೂ, ಶಾಸ್ತ್ರೀಯವೂ, ಆದ ಬರವಣಿಗೆಯನ್ನು ಒಳಗೊಂಡಿದ್ದು ಉಪಯುಕ್ತ ಮಾಹಿತಿಗಳನ್ನು ಅನುಗ್ರಹಿಸುವಂಥದ್ದು.

ಕನ್ನಡ ಸಾಹಿತ್ಯ ಪ್ರವಾಹವು ಕಳೆದ ಒಂದು ಸಾವಿರ ವರ್ಷಗಳಷ್ಟು ಹಿಂದಿನಿಂದಲೂ ನಾನಾ ಮುಖವಾಗಿ ಹರಿದು ಬಂದಿದೆ. ಇಲ್ಲಿ ಪರಂಪರಾನುಗತವಾಗಿ ಜೈನ ವೈಷ್ಣವ ಹಾಗೂ ವೀರಶೈವ ಕವಿಗಳು ತಮ್ಮದೇ ಆದ ವಿಶಿಷ್ಟ ಸಾಹಿತ್ತಿಕ ಕೊಡುಗೆಯನ್ನು ನೀಡಿರುವರು ಎದ್ದು ಕಾಣುವ ಸಂಗತಿಯಾಗಿದೆ. ಅದರಲ್ಲೂ ವೀರಶೈವ ಕವಿಗಳ ಪಾಲು ಅದ್ವಿತೀಯವಾದದ್ದು. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಾಡಿನ ವೀರಶೈವ ಮಠಗಳ ಕೊಡುಗೆ ಅಪಾರವಾದುದು. ಏಕೆಂದರೆ

ಪರಂಪರೆಯಿಂದ ನಡೆದು ಬಂದಿದ್ದ ರಾಜಾಶ್ರಯವನ್ನು ದಿಕ್ಕರಿಸಿನಿಂತ ವೀರಶೈವ ಕವಿಗಳಿಗೆ ಹಾಗೂ ವೀರಶೈವ ಸಾಹಿತ್ಯಕ್ಕೆ ಬೆಂಬಲವಾಗಿದ್ದ ಸಂಸ್ಥೆಗಳೇ ವೀರಶೈವ ಮಠಗಳು. ಪ್ರಾಚೀನ ಕಾಲದಿಂದಲೂ ಈ ಮಠಗಳು ಶಿಕ್ಷಣಕ್ಕೆ ಎಷ್ಟೊಂದು ಮಹತ್ವವನ್ನು ನೀಡಿದ್ದವೋ ಅಷ್ಟೇ ಮಹತ್ವವನ್ನು ವೀರಶೈವ ಸಾಹಿತ್ಯ ರಚನೆ ಅಧ್ಯಯನ ಹಾಗೂ ಅಧ್ಯಾಪನೆಗಳಿಗೂ ಮೀಸಲಾಗಿ ಇರಿಸುತ್ತಿದ್ದುದು ಕಂಡು ಬರುತ್ತದೆ. ಕರ್ನಾಟಕದಲ್ಲಿರುವ ಅನೇಕ ಮಠಗಳ

ಪರಿಚಯವನ್ನು ಅವುಗಳ ಪೀಠ ಪರಂಪರೆ ಹಾಗೂ ಮಠಾಧೀಶರ ಸಾಧನೆಗಳನ್ನು ಕುರಿತು ಮೊದಲು ಪರಿಚಯ ಮಾಡಿಕೊಟ್ಟ ಕೀರ್ತಿ ವೀರಶೈವ ಪುರಾಣಿಕರರಿಗೆ ಸಲ್ಲತಕ್ಕದ್ದು. ವೀರಶೈವ ಧರ್ಮ ಸಂವರ್ಧನೆಯ ಕಾರ್ಯದಲ್ಲಿ ಮಠಗಳ ಪಾತ್ರ ಹಿರಿದು. ಕಲ್ಯಾಣ ಕ್ರಾಂತಿಯ ನಂತರ ನಿಷ್ಕ್ರೀಯಗೊಂಡ ವೀರಶೈವ ಸಾಹಿತ್ತಿಕ ಚಟುವಟಿಕೆಗಳು ಮತ್ತೆ ಪುನಶ್ಚೇತನಗೊಂಡಿದ್ದು ವಿಜಯನಗರದ ಪ್ರೌಢ ದೇವರಾಯನ ಕಾಲಕ್ಕೆ (ಕ್ರಿ.ಶ. ೧೪೧೯ ರಿಂದ ೪೬) ಆಗ ನಾಡಿನ ಮೂಲೆ ಮೂಲೆಗಳಲ್ಲಿಯೂ ಅಪಾರ ಸಂಖ್ಯೆಯ ವೀರಶೈವ ಮಠಗಳು ಉದಯವಾದವು. ಅಲ್ಲಿ ವೀರಶೈವ ಧರ್ಮದ ಪ್ರಚಾರ ಹಾಗೂ ಪ್ರಸಾರ ಕಾರ್ಯಗಳು ಸೂವ್ಯವಸ್ಥಿತವಾಗಿ ನಡೆಯಬೇಕೆಂಬ ಮೂಲೋದ್ದೇಶಕ್ಕಾಗಿ ಅಸಂಖ್ಯಾತ ಯತಿಗಳ ಪಡೆಯೂ ಸಿದ್ಧವಾಗಿತ್ತು. ತತ್ಪಲವಾಗಿ ಪ್ರಾರಂಭವಾಗಿದ್ದು ಅಂದಿನ ಅನೇಕ ಗುರು–ವಿರಕ್ತ ಮಠಗಳು ವೀರಶೈವ ಧರ್ಮ ಹಾಗೂ ಸಾಹಿತ್ಯ ಸಂವರ್ಧನೆಗಾಗಿ ಅಪರಿಮಿತ ಸೇವೆ ಸಲ್ಲಿಸುವಂತಾಯಿತು.

ಮುಂದೆ ತೋಂಟದ ಸಿದ್ಧಲಿಂಗ ಯತಿಗಳ ಕಾಲ (ಕ್ರಿ.ಶ.೧೫೩೦) ದಲ್ಲೂ ಅವರ ಅಸಂಖ್ಯಾತ ಶಿಷ್ಯಗಣದವರಿಂದ ವೀರಶೈವ ಧರ್ಮ, ಸಾಹಿತ್ಯ, ಸಂವರ್ಧನೆಗಾಗಿ ವ್ಯವಸ್ಥಿತವಾದ ಯೋಜನೆಗಳು ರೂಪುಗೊಂಡಿದ್ದವು. ಅಂದಿನ ವೀರಶೈವ ಮಠಾಧೀಶರಲ್ಲಿ ಅನೇಕ ಮಂದಿ ವೀರಶೈವ ಸೃಜನ, ಟೀಕೆ, ಸಂಪಾದನೆ ಮುಂತಾದ ಕ್ಷೇತ್ರಗಳಲ್ಲಿ ಮೌಲಿಕವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಅದರಂತೆ ಕೊಪ್ಪಳದ ಗವಿಮಠದಲ್ಲಿಯೂ ಕೂಡಾ ೧೬ನೇ ಪೀಠಾಧಿಪತಿಗಳಾಗಿದ್ದ ಜ. ಪೂಜ್ಯ ಮರಿಶಾಂತವೀರ ಮಹಾಸ್ವಾಮಿಗಳ ಕಾಲಾವಧಿಯಲ್ಲಿ ಬಳ್ಳಾರಿಯ ಡಾ|| ಪಂಡಿತ ವೈ. ನಾಗೇಶ ಶಾಸ್ತ್ರಿಗಳನ್ನು ಆಸ್ಥಾನದ ಕವಿಗಳನ್ನಾಗಿ ಮಾಡಿಕೊಂಡಿದ್ದರು. ಅವರಿಂದಲೇ ಜ. ಗವಿಸಿದ್ದೇಶ್ವರರ ಪುರಾಣವನ್ನು ಬರೆಯಿಸಿದ್ದಾರೆ. ವೀರಶೈವ ಕವಿ ಪಂಡಿತ ಪರಂಪರೆಯಲ್ಲಿ ಡಾ|| ವೈ. ನಾಗೇಶ ಶಾಸ್ತ್ರಿಗಳದ್ದು ಸುಪ್ರಸಿದ್ಧ ಹೆಸರು. ಸಂಸ್ಕೃತ ಭಾಷೆ, ದರ್ಶನ ಶಾಸ್ತ್ರಗಳ ಆಳವಾದ ಅಭ್ಯಾಸಿಗಳಾಗಿದ್ದ ಅವರು ವೀರಶೈವ ದರ್ಶನದ ವಿಷಯದಲ್ಲಿ ಪ್ರಮಾಣ ಪುರುಷರಾಗಿದ್ದರು. ಶಿವಾನುಭವ ಬೋಧೆ ಸಾಂಸ್ಥಿಕ ರೂಪ ಪಡೆದು ವ್ಯವಸ್ಥಿತವಾಗಿ ಪ್ರಸಾರಗೊಳ್ಳುವಲ್ಲಿ ಶ್ರೀ ನಾಗೇಶ ಶಾಸ್ತ್ರಿಗಳು ಸಲ್ಲಿಸಿದ ಸೇವೆ ಅಪ್ರಮೇಯವಾದುದು. ಸ್ವತಂತ್ರ ಮತ್ತು ಅನುವಾದರೂಪದ ಕಾವ್ಯ ಶಾಸ್ತ್ರಗಳ ರಚನೆಯಿಂದಾಗಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿ ಶ್ರೀ ಶಾಸ್ತ್ರಿಗಳು ವೀರಶೈವದ ಬಹುದೊಡ್ಡ ಸಾಂಸ್ಥಿಕ ಆಸ್ತಿ ಎನಿಸಿದ್ದರು. ಇಂಥ ಅಪ್ರತಿಮ ಪಂಡಿತರನ್ನು ಗವಿಮಠದಲ್ಲಿ ಆಸ್ಥಾನ ಪಂಡಿತರನ್ನಾಗಿ ಮಾಡಿಕೊಂಡಿದ್ದು ಮಠದ ಘನತೆಯನ್ನು ತೋರಿಸುತ್ತದೆ.

ಶ್ರೀ ಗವಿಸಿದ್ದೇಶ್ವರ ಪುರಾಣವು ಎಲ್ಲ ವೀರಶೈವ ಪುರಾಣಗಳಂತೆ ಮಹಿಮೆ, ಲೀಲೆಗಳು ಹಾಗೂ ಚಾರಿತ್ರ್ಯವನ್ನು ಬಿಂಬಿಸುವ ಕೃತಿ. ಅಲ್ಲಲ್ಲಿ ಬರುವ ಶಿವಶರಣ, ಶರಣೆಯರ, ಸ್ತೋತ್ರ, ಗುರು, ಲಿಂಗ, ಜಂಗಮ ಮಹಿಮೆಗಳು ಗವಿಸಿದೇಶ್ವರ ಚಾರಿತ್ರ್ಯವನ್ನು ರಸವತ್ತಾಗಿಸಿವೆ. ಶಾಸ್ತ್ರಿಗಳವರ ಸರಳ ಶೈಲಿ ಮುಗ್ಧ ಗೊಳಿಸುವಂಥದು.

ಶಾಸ್ತ್ರಿಗಳು ಬರೆದ ಗವಿಸಿದ್ದೇಶ್ವರರ ಪುರಾಣದಲ್ಲಿ ಪೀಠಿಕಾ ಸಂಧಿಯಲ್ಲಿಯ ಎರಡು ನುಡಿಗಳನ್ನು ಇಲ್ಲಿ ನೋಡಬಹುದು.

೧) ಶ್ರೀಮದಗ ಜಾವರನೆ ಸಿದ್ಧಿಸು ।
ನಾಮ ಚರಪತಿಯಾಗಿ ಕನ್ನಡ ।
ಭೂಮಿಯಲ್ಲವತರಿಸುತಂ ಕೊಪ್ಪಳ ಗವಿಮಠದೋಳ್ ॥
ಪ್ರೇಮದಿಂದಂ ನೆಲಸಿ ಭಕ್ತ ।
ಸ್ತೋಮಮಂ ಸಲೆಪೊರೆದನಾಜಿತ ।
ಕಾಮನಡಿದಾವರೆಗಳೆನ್ನಂ ರಕ್ಷಿಸುಗೆ ಸತತಂ ॥

೨) ಭೂಮಹಿತಮೆನಿಸಿದ್ದ ಗವಿಮಠ ।
ದಾಮಹಾಪ್ರಭುವಾಗಿ ಭಕ್ತಿಸು ।
ಧಾಮನೆನಿಸುತೆ ಬೇಡುವರ ಬಯಕೆಗಳ ಕರುಣಿಸಿದಾ ।
ಪ್ರೇಮ ಭೂಷನುದಾರಗುಣಿಯನಿ ।
ರಾಮಯನ ಮರಿ ಶಾಂತವೀರ ।
ಸ್ವಾಮಿಯಡಿದಾವರೆಗಳೆನ್ನೆದೆಗೊಳದೆ ಶೋಭಿಸಲಿ ॥

ಈ ರೀತಿ ಗವಿಸಿದ್ದೇಶ್ವರ ಪುರಾಣವನ್ನು ೨೨ ಸಂಧಿಗಳಲ್ಲಿ ೧೧೮೯ ನುಡಿಗಳಲ್ಲಿ ಚೊಕ್ಕಟವಾಗಿ ಬರೆದು ಶಾಸ್ತ್ರಿಗಳು ತಮ್ಮ ಜೀವನವನ್ನು ಸಾರ್ಥಕ ಮಾಡಿಕೊಂಡಿದ್ದಾರೆ.

## ಗವಿಮಠ ಮತ್ತು ಪರಿಸರ ಪ್ರಜ್ಞೆ

ಕಾಡು ಇದ್ದರೆ ನಾಡು ಎಂಬ ನಾಣ್ಣುಡಿ ಪರಿಸರ ಸಂರಕ್ಷಣೆ ಕುರಿತು ಜಾಗೃತಿಯನ್ನು ಉಂಟು ಮಾಡುವಂತಿದೆ. ಹಸಿರೇ ನಮ್ಮ ಬಾಳಿನ ಉಸಿರೆಂದು ನಂಬಿದ ನಮ್ಮ ಪೂರ್ವಜರು ಕೆರೆಕಟ್ಟುವ, ಬಾವಿ ತೋಡುವ, ಮರಗಳನ್ನು ಬೆಳೆಸುವ ಬಗ್ಗೆ ತೀವ್ರ ಕಾಳಜೀ ವಹಿಸುತ್ತಿದ್ದರು. ನಾವು ಬದುಕುವ ಭೂಮಿ ಸತ್ವ ಭರಿತವಾಗಿ ಆರೋಗ್ಯಕರ ಹವಾಮಾನವನ್ನು ಕೊಡುವಂತಹುದಾಗ ಬೇಕಾದರೆ ಸಾಕಷ್ಟು ಪ್ರಮಾಣದಲ್ಲಿ ಗಿಡ ಮರಗಳನ್ನು ಬೆಳೆಯಿಸುವದು ಅತ್ಯಗತ್ಯವಾಗಿದೆ. ಮಾನವನು ಪರಿಸರದಲ್ಲಿಯೇ ಇದ್ದು ಜೀವಿಸ ಬೇಕಾಗಿದ್ದರಿಂದ ಅದರ ಅಭಿವೃದ್ಧಿ ಹಾಗೂ ರಕ್ಷಣೆ ಅತೀ ಮುಖ್ಯವಾದುದು.

ಮರಗಳು ಮಣ್ಣಿನ ಸವೆತವನ್ನು ಕಡಿಮೆ ಮಾಡುತ್ತವೆ. ಮಳೆಯ ನೀರಿನ ರಭಸವನ್ನು ಕಡಿಮೆ ಮಾಡಿ, ಬಿದ್ದ ನೀರು ನೆಲದಲ್ಲಿ ಇಂಗಿ ವರ್ಷವಿಡೀ ದೊರೆಯುವಂತೆ ಮಾಡುತ್ತವೆ. ನಮಗೆ ಬೇಕಾದ ಇಂಧನ, ಔಷಧಿ, ಕೈಗಾರಿಕೆಗೆ ಪೂರಕವಾದ ಕಚ್ಚಾ ವಸ್ತುಗಳನ್ನು ಪಡೆಯಲು ಮೂಲವಾಗಿರುವ ಗಿಡ ಮರಗಳನ್ನು ಬೆಳೆಸುವದು, ಕಾಪಾಡುವದು ನಮ್ಮೆಲ್ಲರ ಹೊಣೆಯಾಗಿದೆ. ವೈಜ್ಞಾನಿಕ ಸಂಶೋಧನೆಯಿಂದ ಒಂದು ಅರಳೀ ಮರವು ಒಂದು ತಾಸಿನ ಅವಧಿಯಲ್ಲಿ ೨೨೫೨ ಕೆ.ಜಿ. ಇಂಗಾಲ ಆಮ್ಲವನ್ನು ಹೀರಿಕೊಂಡು ೧೭೧೨ ಕೆ.ಜಿ. ಆಮ್ಲಜನಕವನ್ನು ಬಿಡುಗಡೆ ಮಾಡುತ್ತದೆ ಎಂದು ತಿಳಿದು ಬಂದಿದೆ.

ಸಾಲು ಮರಗಳನ್ನು ಸಾಮ್ರಾಟ ಅಶೋಕನೇ ನೆಡಿಸುತ್ತಿದ್ದನೆಂಬುದಕ್ಕೆ ಇತಿಹಾಸದಲ್ಲಿ ಆಧಾರವಿದೆ. ಪ್ರಾಣಿ ಪಕ್ಷಿಗಳಿಂದ ಮನುಷ್ಯನವರೆಗೆ ಎಲ್ಲರಿಗೂ ನೆರಳು ನೀಡಿ, ನೆರವಾಗುವ ಮರಗಳನ್ನು ಬೆಳೆಯಿಸುವದು ಧರ್ಮದ ಕೆಲಸ ಎಂದೇ ಹಿಂದಿನ ಜನಾಂಗ ನಂಬಿದ್ದರು.

ಹಾವೇರಿ ಜಿಲ್ಲೆಯ ಸವಣೂರು ನಗರದಲ್ಲಿ 'ದೊಡ್ಡ ಹುಣಿಸಿಮರ'ದ ಆವರಣದಲ್ಲಿ ಸುಮಾರು ೧೩೫ ಅಡಿ ಅಗಲ, ೫೨ ಅಡಿ ಎತ್ತರದ ಸಾವಿರಾರು ವರ್ಷಗಳಷ್ಟು ಹಳೆಯದಾದ "ಐರಾವತ" ಎಂಬ ಹೆಸರಿನ ಮೂರು ಮರಗಳಿವೆ.

ಗವಿಮಠದ ಪರಂಪರೆಯಲ್ಲಿ ಸಾಗಿಬಂದ ಅನೇಕ ಪೂಜ್ಯರು ಪರಿಸರ ಪ್ರೇಮಿಗಳೇ ಆಗಿದ್ದರೆಂಬುದಕ್ಕೆ ಸಾಕ್ಷಿಗಳು ಕಾಣಸಿಗುತ್ತವೆ. ಗವಿಮಠವು ಪ್ರಕೃತಿ ದತ್ತವಾದ ಗುಡ್ಡಗಳ ಇಳಿಜಾರು ತಾಣದಲ್ಲಿ ನೆಲೆಸಿದ್ದರಿಂದ ತಾನೇ ತಾನಾಗಿ ಬೆಳೆದ ಸಾವಿರಾರು ಗಿಡ ಮರ ಬಳ್ಳಿಗಳಿಂದ ಕೂಡಿದ ಹಸಿರು ತಾಣವಾಗಿದೆ. ಆ ಪ್ರಕೃತಿ ಸುಂದರತೆ ಕಂಡು ಪೂರ್ವದ ಶ್ರೀಗಳು ಗವಿಮಠವನ್ನು ಅಲ್ಲಿ ಸ್ಥಾಪಿಸಿದ್ದು ತಿಳಿಯುತ್ತದೆ. ನಂತರದ ಪೂಜ್ಯರೂ ಸಹ ಅಲ್ಲಲ್ಲಿ ಮಣ್ಣಿನ ಜಾಗವಿರುವಲ್ಲಿ ಪ್ರತಿ ವರ್ಷ ನೂರಾರು ಗಿಡ ಮರಗಳನ್ನು ನೆಡಿಸಿ ಕಾಪಾಡುತ್ತಾರೆ. ಹದಿನೈದನೇ ಪೂಜ್ಯರಾದ ಜ. ಶಿವಶಾಂತವೀರ ಮಹಾಸ್ವಾಮಿಗಳು (ಗಡ್ಡದ ಅಜ್ಜನವರು) ಕೃಷಿಕ ಮನೆತನದಿಂದ ಬಂದದ್ದರಿಂದ ಸ್ವಾಭಾವಿಕವಾಗಿಯೇ ಗಿಡ ಮರ ಬೆಳೆಸುವಲ್ಲಿ ಆದ್ಯರು. ಮಠದ ಸುತ್ತಲೂ ಅನೇಕ ತರದ ಗಿಡ ಮರಗಳನ್ನು ಬೆಳೆಸಿದ್ದಾರೆ. ಮಠದ ಪಶ್ಚಿಮಕ್ಕೆ ದೊಡ್ಡದಾದ ಕೆರೆಯನ್ನು ನಿರ್ಮಿಸಿದ್ದಾರೆ. ಗುಡ್ಡದ ಮೇಲೆ ಬಿದ್ದ ಮಳೆ ನೀರು ಕೆರೆಯಲ್ಲಿಯೇ ಸಂಗ್ರಹವಾಗಿ ಆ ನೀರನ್ನು ಹಚ್ಚಿದ ಗಿಡ ಮರಗಳಿಗೆ ಉಪಯೋಗಿಸುತ್ತಾರೆ. ಇವರಿಗಿಂತ ಹಿಂದಿನ ಪೂಜ್ಯರು ಮಠದ ಆವರಣದಲ್ಲಿ ಹಣ್ಣಿನ ಗಿಡಗಳನ್ನು ಹಾಗೂ ನೇಪಾಳದಿಂದ ತಂದ ರುದ್ರಾಕ್ಷಿಗಿಡಗಳನ್ನು ಬೆಳೆಸಿದ್ಧನ್ನು ಪುರಾಣದಲ್ಲಿ ಹಾಗೂ ಜನರು ಜಾನಪದದಲ್ಲಿ ಹಾಡಿದ್ದು ಇಂದಿಗೂ ಉಲ್ಲೇಖವಾಗಿದೆ ("ಜಾನಪದದಲ್ಲಿ ಗವಿಮಠ" ಎಂಬ ವಿಭಾಗದಲ್ಲಿ ಪ್ರತ್ಯೇಕವಾಗಿ ನಮೂದಿಸಲಾಗಿದೆ).

ಪೂಜ್ಯಗಡ್ಡದ ಅಜ್ಜನವರು ತಮ್ಮ ಶಾಖಾ ಮಠವಾದ ಕಡ್ಲಬಾಳು ಮಠದ ಆವರಣ ಹಾಗೂ ಹೊಲದಲ್ಲಿ ನೂರಾರು ವಿವಿಧ ಹಣ್ಣಿನ ಗಿಡ ಮರಗಳನ್ನು ಬೆಳೆಯಿಸಿ, ರಕ್ಷಿಸಿ, ಜನರಿಗೆ ಅದರ ಲಾಭವನ್ನು ಕೊಡುತ್ತಿದ್ದರಂತೆ. ಹದಿನಾರನೇ ಹಾಗೂ ಹದಿನೇಳನೇ ಪೂಜ್ಯರೂ ಸಹ ಗಿಡಗಳನ್ನು ಬೆಳೆಸುವಲ್ಲಿ ಸಾಕಷ್ಟು ಶ್ರಮಿಸಿದ್ದಾರೆ. ಜಾತ್ರೆ ನಡೆಯುವ ಸ್ಥಳದಲ್ಲಿ ದೊಡ್ಡ ಬಯಲಿನಲ್ಲಿ ಮೇರೆ ಗುಂಟ ಗಿಡ ಮರಗಳನ್ನು ಬೆಳೆಯಿಸಿದ್ದಾರೆ. ಕಾಲೇಜು ಆವರಣ ಹಾಗೂ ಗಂಜ ರಸ್ತೆ ಇಕ್ಕೆಲಗಳಲ್ಲಿ ಗಿಡಗಳನ್ನು ಬೆಳೆಯಿಸಿದ್ದಾರೆ. ಇದರ ನೆರಳಿನಲ್ಲಿ ಜಾತ್ರೆಗೆ ಬರುವ ಯಾತ್ರಿಕರಿಗೆ ನೆರಳು ಮಾಡಿದ್ದಾರೆ. ಸಧ್ಯದ ಶ್ರೀಗಳು ಕೂಡಾ ಪರಿಸರ ಪ್ರೇಮಿಗಳಾಗಿದ್ದು ಗಿಡ ಮರಗಳನ್ನು ಬೆಳೆಸುತ್ತಿದ್ದಾರೆ. ಮಠದ ಕಾಲೇಜು ಆವರಣಕ್ಕೆ ಹೊಂದಿರುವ ಎರಡು ಎಕರೆ ಜಮೀನಿನಲ್ಲಿ ಬೇರೆ ಬೇರೆ ತರದ ಗಿಡಗಳನ್ನು ನೆಡಿಸಿ ಅದರ ರಕ್ಷಣೆಯನ್ನು ಮಾಡುತ್ತಿದ್ದಾರೆ. ಮಠದ ಒಳಗಿನ ಅವರಣದಲ್ಲಿ ಭವ್ಯವಾದ ಗಾರ್ಡನ ಮಾಡಿಸಿದ್ದಾರೆ. ಆ ಗಾರ್ಡನ ಸುತ್ತಲೂ ಯಾತ್ರಿಗಳು ಬಂದು ಕುಳಿತು ವಿಶ್ರಾಂತಿ ಪಡೆಯಲು ಅನುಕೂಲವಾಗಲೆಂದು ಹುಲ್ಲಿನ ಹಾಸಿಗೆ, ಅನೇಕ ತರಹ ಹೂ ಗಿಡ ಬಳ್ಳಿಗಳನ್ನು ನೆಡಿಸಿದ್ದಾರೆ. ಜಿಂಕೆ, ನವಿಲು, ಮೊಲಗಳನ್ನು ಸಾಕಿದ್ದಾರೆ. ಪ್ರಾಣಿ ದಯೆಯನ್ನು ಅವರಲ್ಲಿ ಕಾಣುತ್ತೇವೆ. ಆಯುರ್ವೇದ ಕಾಲೇಜಿನ ಒಳ ಆವರಣದಲ್ಲಿಯೂ ಬೃಹತ್ ಗಾರ್ಡನ ಮಾಡಿದ್ದಾರೆ. ವಿವಿಧ ಹೂ ಗಿಡಗಳು, ಬಳ್ಳಿಗಳು, ಹುಲ್ಲಿನ ಹಾಸಿಗೆ, ಔಷಧಿಯ ಸಸ್ಯಗಳನ್ನು ಬೆಳೆಸುತ್ತಿದ್ದಾರೆ. ಒಳ್ಳೆಯ ವ್ಯವಸ್ಥಿತವಾದ ಗಾರ್ಡನ ಇದಾಗಿದೆ.

ಈ ಪರಿಸರ ಪ್ರಜ್ಞೆ ಪರಂಪರಾಗತವಾಗಿ ಈ ಮಠದಲ್ಲಿ ಸಾಗಿ ಬಂದದ್ದನ್ನು ನಾವು ನೋಡಬಹುದು. ಪೂಜ್ಯರು ಅನೇಕ ಕಾರ್ಯಕ್ರಮಗಳನ್ನು, ಗೋಷ್ಠಿಗಳನ್ನು ಸಾಯಂಕಾಲ ಈ ಪರಿಸರದ ಮಧ್ಯ ಮೇಲು ಚಪ್ಪರದ ಆಡಂಬರ ಇಲ್ಲದೇ ಗುಡ್ಡದ ಸೌಂದರ್ಯದ ಮಧ್ಯ ಮಾಡುತ್ತಿದ್ದದನ್ನು ನಾವು ನೋಡುತ್ತಿದ್ದೇವೆ. ಲಕ್ಷಗಟ್ಟಲೇ ಸಸಿ ನೆಡಿಸಿ ಕಾಪಾಡುವ ಯೋಜನೆ ಈಗಿನ ಪೂಜ್ಯರಿಗೆ ಇರುತ್ತದೆ.

# ಅಧ್ಯಾಯ -೭

## ಕೊಪ್ಪಳ ಗವಿಮಠವು ಇತರೆ ಮಠಗಳೊಂದಿಗೆ ಅನ್ಯೋನ್ಯತೆ (ಸೌಹಾರ್ದತೆ)

### ೧) ಅನ್ನದಾನೀಶ್ವರ ಸಂಸ್ಥಾನಮಠ ಮುಂಡರಗಿ ಅವರೊಡನೆ :

ಕೊಪ್ಪಳ ಮುಂಡರಗಿ ಬೇರೆ ಬೇರೆ ಅಲ್ಲ ಈಗಿನ ಗದಗ ಜಿಲ್ಲೆಯಲ್ಲಿ ಬರುವ ಮುಂಡರಗಿಯು ತಾಲೂಕ ಸ್ಥಳವಾಗಿದ್ದು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಕೊಪ್ಪಳ ತಾಲೂಕಿನ ಸರಹದ್ದಿಗೆ ಹೊಂದಿಕೊಂಡಿರುವ ತಾಲೂಕು. ಇದು ಇಲ್ಲಿಯ ಅನ್ನದಾನೀಶ್ವರ ಸಂಸ್ಥಾನ ಮಠವು ಚನ್ನ ಬಸವಣ್ಣನವರ ಪರಂಪರೆಯಾಗಿ ಬಂದಿದ್ದು[೧], ಅನೇಕ ಭಾಗಗಳಲ್ಲಿ ಶಾಖಾಮಠಗಳನ್ನು ಹೊಂದಿದ ಸಂಸ್ಥಾನ ಮಠವೆಂದು ಈ ಭಾಗದಲ್ಲಿ ಖ್ಯಾತಿ ಪಡೆದಿದೆ. ಕೊಪ್ಪಳದ ಗವಿಮಠಕ್ಕೂ ಮುಂಡರಗಿ ಅನ್ನದಾನೀಶ್ವರ ಮಠಕ್ಕೂ ಬಹಳ ಅನ್ಯೋನ್ಯವಿರುತ್ತದೆ. ಯಾವುದೇ ದೊಡ್ಡ ಧಾರ್ಮಿಕ ಕಾರ್ಯಕ್ರಮಗಳು ಜರುಗಿದರೂ ಸಹ ಉಭಯ ಜಗದ್ಗುರುಗಳು ಸಾನಿಧ್ಯವಹಿಸಿರುವದನ್ನು ಕಾಣುತ್ತೇವೆ. ಬಹಳ ಹಿಂದಿನಿಂದಲೂ ಬೆಳೆದು ಬಂದ ಆಧ್ಯಾತ್ಮ ಬಾಂಧವ್ಯ ಇಂದು ಹೆಮ್ಮರವಾಗಿದೆ. ಎರಡೂ ಮಠಗಳಲ್ಲಿ ಅವಿನಾಭಾವ ಸಂಬಂಧವಿದೆ. ಪುರಗಳೆರಡಾದರೂ ಹರನೊಬ್ಬನೇ ಎಂಬ ಭಾವನೆ ಸದ್ಭಕ್ತರಲ್ಲಿ ಮೂಡಿ ನಿಂತಿದೆ ಎಂಬುದನ್ನು ಗಮನಿಸಬಹುದು.

ಕೊಪ್ಪಳ ಗವಿಮಠದ ಹದಿನೈದನೇ ಪೀಠಾಧೀಶರು ಮುಂಡರಗಿ ತಾಲೂಕಿನ ತಾಮ್ರಗುಂಡಿ ಗ್ರಾಮದವರು. ಇವರು ಮುಂಡರಗಿ ಮಠದ ಏಳನೇ ಪೀಠಾಧೀಶರಾಗಿದ್ದ ಬಳ್ಳೊಳ್ಳಿ ಅಜ್ಜನವರ ಆಶೀರ್ವಾದದಿಂದ ಜನಿಸಿದವರು.[೨]

---

೧. "ಮೃಡಗಿರಿಯ ಮಹಾದಾನಿ" ಜ. ಅನ್ನದಾನೀಶ್ವರ ಮಹಾಸ್ವಾಮಿಗಳು. ಪು-೨೪ - ೨೦೦೨

೨. "ಮೃಡಗಿರಿಯ ಮಹಾದಾನಿ" ಜ. ಅನ್ನದಾನೀಶ್ವರ ಮಹಾಸ್ವಾಮಿಗಳು ಪು. ೧೦೨ - ೨೦೦೨

ಈ ಪೂಜ್ಯರೇ ಮುಂದಾಗಿ ಗವಿಮಠದ ಪೀಠಾಧಿಕಾರಿಗಳನ್ನಾಗಿ ಮಾಡುವಲ್ಲಿ ಶ್ರಮಿಸಿದ್ದು ತಿಳಿಯುತ್ತದೆ. ಅಂದಿನಿಂದಲೂ ಎರಡೂ ಮಠಗಳಲ್ಲಿ ಅನ್ಯೋನ್ಯತೆ ಇತ್ತೆಂದು ಕಂಡು ಬರುತ್ತದೆ. ಕೊಪ್ಪಳದ ಹದಿನೈದನೇ ಪೂಜ್ಯರಾಗಿದ್ದ ಜ.ಶಿವಶಾಂತವೀರ ಮಹಾಸ್ವಾಮಿಗಳು ಮುಂಡರಗಿ ಪೂಜ್ಯರೊಂದಿಗೆ ಅತ್ಯಂತ ಆತ್ಮೀಯರಾಗಿದ್ದರಂತೆ. ಕೊಪ್ಪಳದವರು ಜಟಾಧಾರಿಗಳಾಗಿದ್ದರು. ನಗರ ಗಡ್ಡಿ ಮಠದ ಶ್ರೀಗಳೂ ಜಟಾಧಾರಿಗಳಾಗಿದ್ದರಂತೆ. ಕೊಪ್ಪಳ, ಗಡ್ಡಿಮಠ, ಹಾಗೂ ಮುಂಡರಗಿ ಶ್ರೀಗಳು ಒಟ್ಟಿಗೆ ಸೇರಿದಾಗ ಕೊಪ್ಪಳ ಪೂಜ್ಯರು "ಎಡಕ ಬಲಕ ಗಡ್ಡ, ನಡುವೆ ಜೋಳ, ಎಂದು ವಿನೋದ ಮಾಡುತ್ತಿದ್ದರಂತೆ. ಯಾವುದೇ ಧಾರ್ಮಿಕ ಕಾರ್ಯಗಳಲ್ಲಿ ಈ ಮೂವರೂ ಒಟ್ಟಿಗೆ ಸೇರುತ್ತಿದ್ದರಂತೆ.

ಪೂಜ್ಯ ಜ. ಶಿವಶಾಂತವೀರ ಮಾಹಾಸ್ವಾಮಿಗಳು ಲಿಂಗೈಕ್ಯರಾಗುವ ಪೂರ್ವದಲ್ಲಿ ಸೂಡಿಯ ಜುಕ್ತಿಹಿರೇಮಠದ ಗುರುನಂಜಯ್ಯ (ಶ್ರೀಕಂಠ ಶಿವಾಚಾರ್ಯರು) ದೇವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಲು ಸಂಕಲ್ಪಮಾಡಿ ಮೃತ್ಯು ಪತ್ರವನ್ನು ಊರಿನ ಸದ್ಭಕ್ತರಿಗೆ ಒಪ್ಪಿಸಿ ಲಿಂಗೈಕ್ಯರಾದರು. ಮುಂದೆ ೧೯೨೨ ಡಿಸೆಂಬರ ತಿಂಗಳಲ್ಲಿ ೩೪ ವಯಸ್ಸಿನ ಶ್ರೀಕಂಠ ಶಿವಾಚಾರ್ಯರ ಅಧಿಕಾರವು ಮುಂಡರಗಿ ಮಹಾಸ್ವಾಮಿಗಳವರ ಸಮ್ಮುಖದಲ್ಲಿಯೇ ಜರುಗಿತು.[೧] ಕಂಪ್ಲಿಯ ಕಲ್ಲುಮಠದ ಮಹಾಸ್ವಾಮಿಗಳು ಶ್ರೀಕಂಠ ದೇವರಿಗೆ ಅನುಗ್ರಹ ಮಾಡಿ ನಿರಂಜನ ದೀಕ್ಷೆಯನ್ನು ಕರುಣಿಸಿದ ಬಳಿಕ ಜ. ಮರಿ ಶಾಂತವೀರ ಮಾಹಾಸ್ವಾಮಿಗಳೆಂದು ಪುನರ್ ನಾಮವನ್ನು ಪಡೆದರು.

ಮುಂಡರಗಿ ಮಠದ ನ್ಯಾಯದ ಪ್ರಕರಣದಲ್ಲೂ ಕೊಪ್ಪಳ ಶ್ರೀಗಳು ಬಲವಾದ ಸಾಕ್ಷ್ಯವನ್ನು ನೀಡಿದ್ದರು. ನೂತನ ಪೀಠಾಧಿಕಾರಿಗಳಾದ ಶ್ರೀ ಮರಿಶಾಂತವೀರಸ್ವಾಮಿಗಳು ಸ್ವತ: ಹಸ್ತಾಕ್ಷರದ ಸಹಿ ಮಾಡಿ, ಈ ರೀತಿ ಬಿನ್ನಹ ಪತ್ರ ಕಳಿಸಿದ್ದರಂತೆ "ದಿನಾಂಕ ೧೯೨೪ ರಂದು ರಕ್ತಾಕ್ಷಿ ಸಂ. ಪುಷ್ಯ ಶು. ೧೫ನೇ ದಿವಸ ಹುಣ್ಣಿಮೆಯೆಂದು ತೆಪ್ಪೋತ್ಸವ ಮತ್ತು ಆಂದೋಲಿಕೋತ್ಸವ ಬ.೧. ರವಿವಾರ ಸಣ್ಣ ರಥೋತ್ಸವ ಬ.೨ ಸೋಮವಾರ ಮಹಾ ರಥೋತ್ಸವ ಬ.೩ ಮಂಗಳವಾರ ಕೀರ್ತನ ಉಪನ್ಯಾಸಗಳು ಏರ್ಪಾಡು ಮಾಡಿರುತ್ತದೆ. ತಾವು ತಮ್ಮ ಭಕ್ತ ಮಂಡಳಿಯೊಡನೆ ದಯಮಾಡಿಸಿ, ಕಾರ್ಯಗಳಿಗೆ

---

೧. "ಮೃಡಗಿರಿಯ ಮಹಾದಾನಿ" ಜ. ಅನ್ನದಾನೀಶ್ವರ ಮಹಾಸ್ವಾಮಿಗಳು. ಪು-೧೦೨-೨೦೦೨

ಶೋಭೆಯನ್ನುಂಟು ಮಾಡಿ ನಮ್ಮೆಲ್ಲರ ಮನಸಂತೋಷಗೊಳಿಸುವುದೆಂದು ಆಶಿಸುತ್ತೇನೆ. ಇಂತಿ ಸಾ.ನ. ಬಿನ್ನಹಗಳು ಎಂದು ಬಿನ್ನಹ ಪತ್ರ ಬರೆದುಕೊಂಡಿರುವದು ಸಾಂಪ್ರದಾಯಬದ್ಧವಾಗಿರುವದು ಕಂಡುಬರುತ್ತದೆ.

ಅಂತೆಯೇ ಮುಂಡರಗಿಯ ಜ. ಅನ್ನದಾನೀಶ್ವರ ಮಹಾಶಿವಯೋಗಿಗಳ ಯಾತ್ರಾ ಮಹೋತ್ಸವದ ಶುಭ ಸಂದರ್ಭದಲ್ಲಿ ಕೊಪ್ಪಳದ ಜ. ಶಿವಶಾಂತವೀರ ಮಹಾಸ್ವಾಮಿಗಳಿಗೆ ಭಕ್ತಿ ಬಿನ್ನಹ ಅರ್ಪಿಸಿದ್ದು ತಿಳಿದು ಬರುತ್ತದೆ.

೧೭/೦೨/೧೯೬೨ ನೇ ಸೋಮವಾರ ಜ.ಅನ್ನದಾನೀಶ್ವರ ಮಹಾಸ್ವಾಮಿಗಳ ಜಾತ್ರಾಮಹೋತ್ಸವ ಸಂದರ್ಭದಲ್ಲಿಜಂಗಮತ್ವವನ್ನು ಆಳವಡಿಸಿಕೊಂಡು ಅರವತ್ತು ವರ್ಷಗಳನ್ನು ಸಾರ್ಥಕವಾಗಿ ಪೂರೈಸಿದ ಜ. ಶಿವಶಾಂತವೀರ ಮಹಾಸ್ವಾಮಿಗಳನ್ನು ಅಡ್ಡ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಉತ್ಸವಗೈದು ಸಂತಸಹೊಂದುವ ಜೊತೆಗೆ ಭಕ್ತಿ ಸಮರ್ಪಣೆ ಮಾಡಿದ್ದು, ಎರಡೂ ಮಠಗಳಲ್ಲಿಯ ಅನ್ಯೋನ್ಯತೆಯನ್ನು ತೋರಿಸುತ್ತದೆ. ಆಗ ತುಲಾಭಾರ ಮಾಡಿದ ಹಣವನ್ನು ಸ್ವೀಕರಿಸದೇ ಮುಂಡರಗಿ ಶ್ರೀಗಳ ಸಾಹಿತ್ಯ ಕೃತಿಗಳ ಪ್ರಕಟನೆಗೆ ವಾಪಸ ನೀಡಿದ್ದನ್ನು ಇಲ್ಲಿ ಸ್ಮರಿಸಬಹುದು.

**೨) ಶ್ರೀಕಲ್ಮಠ ಗಂಗಾವತಿ:**

ಕೊಪ್ಪಳ ಜಿಲ್ಲೆಯಲ್ಲಿ ಗಂಗಾವತಿಯು ವ್ಯಾಪಾರಿ ಸ್ಥಳವಾಗಿದ್ದು ಕೊಪ್ಪಳ ಪಟ್ಟಣದ ನಂತರ ಗಂಗವತಿಯೇ ದೊಡ್ಡ ಶಹರವು ನೀರಾವರಿ ವ್ಯವಸ್ಥೆಯನ್ನು ಹೊಂದಿದ್ದರಿಂದ ಇಲ್ಲಿ ಭತ್ತ, ಶೇಂಗಾ ಬೆಳೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಇಂತಹ ಫಲವತ್ತಾದ ಭೂಮಿಯಲ್ಲಿ ದುಡಿದು ಶ್ರೀಮಂತರಾದ ಎಷ್ಟೊ ಆಂದ್ರದ ಜನತೆ ಗಂಗಾವತಿ ಹಾಗೂ ಸುತ್ತಲಿನ ಪ್ರದೇಶದಲ್ಲಿ ನೆಲೆಸಿದ್ದಾರೆ. ಭಕ್ತಿಬಾವದಲ್ಲಿಯೂ ಫಲವತ್ತತೆಯನ್ನು ಒಳಗೊಂಡ ಈ ಶಹರದಲ್ಲಿ ಕಲ್ಮಠವು ಇದೆ. ಡಾ|| ಕೊಟ್ಟೂರೇಶ್ವರ ಸ್ವಾಮಿಗಳು ಈಗಿನ ಪೀಠಾಧಿಪತಿಗಳು, ಇವರು ಕೊಪ್ಪಳ ಗವಿಮಠದಲ್ಲಿದ್ದು

---

೧. ಶಾಂತ ಪ್ರಭೆ –ಲೇ– ವಿದ್ಯಾರ್ಥಿ ಬಳಗ, ಶ್ರೀ ಗವಿಸಿದ್ದೇಶ್ವರ ಸಂ.ಮಠ ಕೊಪ್ಪಳ.–೧೯೯೩

ಓದಿದವರು (ಲಿಂ.ಶಿವಶಾಂತವೀರ ಮಹಾಸ್ವಾಮಿಗಳ ಶಿಷ್ಯಂದಿರು) ಹಾಗೂ ಗವಿಸಿದ್ದೇಶ್ವರ ಹೈಸ್ಕೂಲಿನಲ್ಲಿ ಅಭ್ಯಾಸ ಮಾಡಿದವರು. ತಪೋನಿಧಿಗಳು, ವಾಂಗ್ಮಯಿಗಳು ಹಾಗೂ ಸಮಾಜದ ಧರ್ಮ ಸುಧಾರಕರು, ಮಠದಲ್ಲಿ ಶಾಲಾ ಕಾಲೇಜುಗಳಲ್ಲಿ ಓದುವ ಮಕ್ಕಳಿಗಾಗಿ ಉಚಿತ ಅನ್ನದಾಸೋಹದ ವ್ಯವಸ್ಥೆಯನ್ನು ಮಾಡಿದ್ದಾರೆ.

ಇವರ ಹಿಂದಿನ ಪೀಠಾಧಿಪತಿಗಳಾದ ಶ್ರೀಚನ್ನಬಸವೇಶ್ವರ ಸ್ವಾಮಿಗಳು ಕೂಡ ಗವಿಮಠದಲ್ಲಿಯೇ ಶಿಷ್ಯರಾಗಿದ್ದರು. (ಲಿಂ.ಜ. ಮರಿಶಾಂತವೀರ ಮಹಾಸ್ವಾಮಿಗಳ ಪರಮ ಶಿಷ್ಯರಾಗಿದ್ದರು) ಗುರುಗಳ ಬಗ್ಗೆ ಹಾಗೂ ಕೊಪ್ಪಳ ಮಠದ ಬಗ್ಗೆ ಅಪಾರ ಗೌರವ, ಭಕ್ತಿ ಇತ್ತೆಂದು ತಿಳಿದು ಬರುತ್ತದೆ. ೧೯೬೩ ರಲ್ಲಿ ಚಿಕೇನಕೊಪ್ಪದ ಚನ್ನವೀರ ಶರಣರೊಂದಿಗೆ ಮಠಕ್ಕೆ ನಿಧಿ ಸಂಗ್ರಹಣಾ ಕಾರ್ಯದಲ್ಲಿ ಮುಂಚೂಣಿಯಲ್ಲಿ ಕೆಲಸ ಮಾಡಿದ್ದು ತಿಳಿದು ಬರುತ್ತದೆ.

## ಬೋಳೋಡಿ ಬಸವೇಶ್ವರ ಶಿವಯೋಗಿ ಸಂಸ್ಥಾನ ಹಿರೇಮಠ

ಗಂಗಾವತಿ ತಾಲೂಕಿನ ಹೆಬ್ಬಾಳ ಗ್ರಾಮ ತಾಲೂಕು ಸ್ಥಳದಿಂದ ಈಶಾನ್ಯಕ್ಕೆ ೧೨ ಕಿ.ಮಿ. ದೂರದಲ್ಲಿದೆ. ಕೊಪ್ಪಳಕ್ಕೆ ಪೂರ್ವದಲ್ಲಿ ೬೨ ಕಿ.ಮಿ. ಅಂತರದಲ್ಲಿದೆ. ಈ ಗ್ರಾಮವು ತುಂಗಭದ್ರಾ ನದಿಯ ಎಡ ದಂಡೆಯ ಮೇಲೆ ಇದ್ದು, ಆರ್ಥಿಕವಾಗಿ ಅಭಿವೃದ್ಧಿಯನ್ನು ಕಂಡಿದೆ.

ಇಲ್ಲಿಯ ಬೋಳೋಡಿ ಬಸವೇಶ್ವರ ಮಠವು ಹೆಬ್ಬಾಳ ಗ್ರಾಮದ ಮಧ್ಯ ಭಾಗದಲ್ಲಿ ಶ್ರೀರಂಭಾಪುರಿ ಪೀಠದ ಶಾಖಾ ಮಠವಾಗಿ ಸ್ಥಾಪನೆಗೊಂಡಿದೆ.

ಮಠದ ಕರ್ತೃ ಗುರುಗಳಾದ ಶ್ರೀ ಬೋಳೋಡಿ ಬಸವೇಶ್ವರ ಶಿವಯೋಗಿಗಳು ಕೆಂಭಾವಿಯಿಂದ ಲೋಕ ಸಂಚಾರಕ್ಕೆ ಹೊರಟು, ದೇಶ ಪರ್ಯಟನೆಯನ್ನು ಮುಗಿಸಿಕೊಂಡು ಕನಸಾವಿ, ಮುದಗಲ್ಲು, ಹಂಪಿ ಹಾಗೂ ಹುಣಿಕಾಳು ಈ ಮೂಲಕ ಹೆಬ್ಬಾಳಿಗೆ ಬಂದುನೆಲೆಸಿದರು.

ಗುರುಗಳು ನಿತ್ಯ ತಪೋನಿಷ್ಠರಾಗಿ ಬಳಿಗೆ ಬರುವ ಎಲ್ಲ ಭಕ್ತರನ್ನು ಸಂತಸದಿ ಆಶೀರ್ವದಿಸಿ ಕಳುಹಿಸಿಕೊಡುತ್ತಿದ್ದರು. ಕಾಲಕ್ರಮೇಣ ಇವರ ತಪೋ ಶಕ್ತಿಗೆ ತಲೆ ಬಾಗಿದ ಗ್ರಾಮದ ಜನರು ತಮ್ಮಲ್ಲಿಯೇ ಗುರುಗಳು ಇರಲೆಂದು ಮಠವನ್ನು ಸ್ಥಾಪಿಸಿಕೊಡುತ್ತಾರೆ. ಗುರುಗಳ ಹೆಸರಿನಿಂದಲೇ ಈ ಮಠವು ಅಭಿವೃದ್ಧಿ ಹೊಂದಿದ್ದುತಿಳಿಯುತ್ತಿದೆ. ಗುರುಗಳು ಅನೇಕ ವರ್ಷ ಇಲ್ಲಿ ನೆಲೆಸಿ ಇದನ್ನು ಜಾಗೃತ ಸ್ಥಳವನ್ನಾಗಿ ಮಾಡಿ ಲಿಂಗೈಕ್ಯರಾದರು. ಇವರ ಸಮಾಧಿಯನ್ನು ಮಠದಲ್ಲಿಯೇ ನಿರ್ಮಿಸಲಾಗಿದೆ. ಈ ಗದ್ದುಗೆ ಇಂದಿಗೂ ಪೂಜನೀಯವಾಗಿದೆ.

**ಈ ಮಠದ ಪರಂಪರೆ :**

೧) ಷ.ಬ್ರ.ಶ್ರೀ ಬೋಳೋಡಿ ಬಸವೇಶ್ವರ ಶಿವಾಚಾರ್ಯಸ್ವಾಮಿಗಳು.

೨) ಷ.ಬ್ರ.ಶ್ರೀ ಬಸವಾರ್ಯ ಶಿವಾಚಾರ್ಯಸ್ವಾಮಿಗಳು.

೩) ಷ.ಬ್ರ.ಶ್ರೀ ಸಣ್ಣ ಬಸವಾರ್ಯ ಶಿವಾಚಾರ್ಯಸ್ವಾಮಿಗಳು.

೪) ಷ.ಬ್ರ.ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಸ್ವಾಮಿಗಳು.

೫) ಷ.ಬ್ರ.ಶ್ರೀ ಶಾಂತವೀರ ಶಿವಾಚಾರ್ಯಸ್ವಾಮಿಗಳು.

೬) ಷ.ಬ್ರ.ಶ್ರೀ ಮರಿಶಾಂತವೀರ ಶಿವಾಚಾರ್ಯಸ್ವಾಮಿಗಳು.

೭) ಷ.ಬ್ರ.ಶ್ರೀ ನಾಗಭೂಷಣ ಬಸವೇಶ್ವರ ಶಿವಾಚಾರ್ಯಸ್ವಾಮಿಗಳು.

೮) ಷ.ಬ್ರ.ಶ್ರೀ ಮರಿ ನಾಗಭೂಷಣ ಶಿವಾಚಾರ್ಯಸ್ವಾಮಿಗಳು.

ಈ ರೀತಿ ಮಠದ ಪರಂಪರೆ ಬೆಳೆದು ಬಂದಿರುತ್ತದೆ. ಕರ್ತೃ ಗುರುಗಳ ನಂತರ ಷ.ಬ್ರ.ಶ್ರೀ ಬಸವಾರ್ಯರು ತಮ್ಮ ಶ್ರೀ ಸಣ್ಣ ಬಸವಾರ್ಯರು ಅಧಿಕಾರಕ್ಕೆ ಬಂದರು. ಇವರ ಬಗ್ಗೆ ಹೆಚ್ಚು ವಿಷಯ ತಿಳಿಯದಾಗಿದೆ. ಇವರ ನಂತರ ಅಧಿಕಾರಕ್ಕೆ ಬಂದ ಶ್ರೀ ಸಿದ್ದೇಶ್ವರಸ್ವಾಮಿಗಳು ತಪೋನಿಧಿಗಳಾಗಿ ಮಹಿಮಾ ಪುರುಷರಾಗಿದ್ದರು. ಇವರು ದೇಶ ಸಂಚಾರದಿಂದ ಅಪಾರ ಜ್ಞಾನವನ್ನು ಸಂಪಾದಿಸಿಕೊಂಡ ಬಗ್ಗೆ ತಿಳಿಯುತ್ತದೆ. ಭೂತ ಪ್ರೇತಗಳಿಂದ ಒಂದೇ ರಾತ್ರಿಯಲ್ಲಿ ಮಠವನ್ನು ಕಟ್ಟಿಸಿದರೆಂದು ಊರ ಜನರ ಅಭಿಪ್ರಾಯವಿದೆ.

ಈ ಲೀಲಾ ಪುರುಷರು ಭೂತಗಳನ್ನು ಮಠಗಳಲ್ಲಿಯೇ ಇಟ್ಟುಕೊಂಡು ನೂರಾರು ಎಕರೆ ಭೂಮಿಯನ್ನು ಸಾಗುವಳಿ ಮಾಡಿಸುತ್ತಿದ್ದರಂತೆ ಇದಕ್ಕೆ ಸಾಕ್ಷಿಯಾಗಿ ಈಗಲೂ ಈ ಜಮೀನನ್ನು ದೆವ್ವದ ಭೂಮಿ ಎಂದು ಕರೆಯಲಾಗುತ್ತಿದೆ. ಶ್ರೀ ಸಿದ್ದೇಶ್ವರಸ್ವಾಮಿಗಳು ತುಂಬಿ ಹರಿಯುತ್ತಿದ್ದ ತುಂಗಭದ್ರಾ ನದಿಯ ನೀರಿನ ಮೇಲೆ ಕರಿ ಕಂಬಳಿ ಹಾಸಿ ಅದರ ಮೇಲೆ ಕುಳಿತು ನದಿ ದಾಟಿ ತಮ್ಮ ಲೀಲೆಯನ್ನು ತೋರಿಸಿದ್ದ ಬಗ್ಗೆ ಇಂದಿಗೂ ಜನರು ಕಥೆಗಳಲ್ಲಿ ಹೇಳುತ್ತಾರೆ. ನಂತರ ಬಂದ ಶ್ರೀಮರಿಶಾಂತವೀರ ಶಿವಾಚಾರ್ಯರು ದೈವೀ ಉಪಾಸಕರಾಗಿದ್ದರು, ಬಳ್ಳಾರಿ ಜಿಲ್ಲೆಯ ರಾಂಪುರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಅಲ್ಲೇ ಲಿಂಗೈಕ್ಯರಾದರು. ನಂತರ ಬಂದ ಶ್ರೀ ನಾಗಭೂಷಣ ಬಸವೇಶ್ವರ ಶಿವಾಚಾರ್ಯಸ್ವಾಮಿಗಳು ಅನೇಕಲೀಲೆಗಳನ್ನು ಭಕ್ತ ಜನರಿಗೆ ತೋರಿಸಿ ೧೯೯೬ ರಲ್ಲಿ ಲಿಂಗೈಕ್ಯರಾದರು. ನಂತರ ಈ ಪುರಾತನ ಸಂಸ್ಥಾನ ಮಠಕ್ಕೆ ಶ್ರೀ ಬಸಪ್ಪಯ್ಯನವರ ಪುತ್ರರಾದ ಶ್ರೀ ಮರಿ ನಾಗಭೂಷಣ ಶಿವಾಚಾರ್ಯರು ೧೯೯೬ ರಲ್ಲಿ ಪಟ್ಟಾಧ್ಯಕ್ಷರಾಗಿ ಅಧಿಕಾರಕ್ಕೆ ಬಂದಿದ್ದು ತಿಳಿಯುತ್ತದೆ.[೧] ಇವರು ಕೊಪ್ಪಳ ಗವಿಮಠದ ಶಿಷ್ಯರಾಗಿದ್ದರಿಂದ ಈಗಲೂ ಇವೆರಡೂ ಮಠಗಳ ನಡುವೆ ಅನ್ಯೋನ್ಯತೆ ಹೆಚ್ಚಾಗಿದೆ.

ಈಗ ಶ್ರೀ ಬೋಳೋಡಿ ಬಸವೇಶ್ವರ ಸಂಸ್ಥಾನ ಹಿರೇಮಠಕ್ಕೆ ಷ.ಬ್ರ.ಶ್ರೀ ನಾಗಭೂಷಣ ಶಿವಾಚಾರ್ಯಸ್ವಾಮಿಗಳು, ಪೀಠಾಧಿಪತಿಗಳಾಗಿದ್ದಾರೆ. ಸಂಸ್ಕೃತ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ಸ್ವಾಮಿಗಳು, ಒಳ್ಳೇ ವಾಂಗ್ಮಿಗಳೂ, ತಪಸ್ವಿಗಳೂ ಆಗಿದ್ದಾರೆ. ಬಾಲ್ಯದಿಂದಲೂ ಗವಿಮಠ ಕೊಪ್ಪಳದಲ್ಲಿದ್ದು ಲಿಂ.ಜ. ಶಿವಶಾಂತವೀರ ಸ್ವಾಮಿಗಳ ಶಿಷ್ಯಂದಿರಾಗಿ ಸಂಸ್ಕೃತ, ವೇದ ಧಾರ್ಮಿಕ ವಿಷಯಗಳನ್ನು ಕಲಿತವರಾಗಿದ್ದಾರೆ. ನಂತರ ಗವಿಸಿದ್ದೇಶ್ವರ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ಮಾಡಿದವರು. ಒಳ್ಳೇ ಸಂಸ್ಕೃತ ಪಂಡಿತರಾಗಿದ್ದಾರೆ. ತಮ್ಮ ಮಠದಲ್ಲಿ ಬಡ ಮಕ್ಕಳಿಗೆ ಉಚಿತ ಊಟದ ವ್ಯವಸ್ಥೆ ಮಾಡಿ ಶಾಲಾ ಕಾಲೇಜುಗಳಿಗೆ ಹೋಗುವ ಏರ್ಪಾಡು ಮಾಡಿದ್ದು ಮೆಚ್ಚುವಂತದ್ದು.

ಚಿಕ್ಕಂದಿನಲ್ಲಿ ಗವಿಮಠದಲ್ಲಿದ್ದು ಲಿಂ.ಜ.ಶಿವಶಾಂತವೀರ ಮಹಾಸ್ವಾಮಿಗಳನ್ನು ಸೇವೆಗೈಯುತ್ತ ಇದ್ದ ಜೀವನದ ಕೆಲವು ಅನುಭಗಳನ್ನು ಅವರಿಂದಲೇ ಕೇಳಿ ಪಡೆದ ವಿವರ ಈ ಕೆಳಗಿನಂತಿದೆ.

---

೧. ಕಾಯಕ ಸಿರಿ–ಸ್ಮರಣ ಸಂಚಿಕೆ, ಲೇಖಕರು ಡಾ|| ಬಿ.ವ್ಹಿ.ಶಿರೂರ. "ಗಂಗಾವತಿ ಪ್ರದೇಶದ ವೀರಶೈವ ಮಠಗಳು" – ೧೯೯೩ ಹಾಗೂ ಕರ್ನಾಟಕದ ವೀರಶೈವಮಠಗಳು – ಚಂದ್ರಶೇಖರ ನಾರಾಯಣಪುರ ಪು– ೫೬–೨೦೦೨

ಷ.ಬ್ರ. ನಾಗಭೂಷಣ ಶಿವಾಚಾರ್ಯರು ಹೆಬ್ಬಾಳದಲ್ಲಿ ಹಿರೇಮಠದ ಮೆ।। ಶ್ರೀ ಬಸಪ್ಪಯ್ಯ, ಶ್ರೀಮತಿ ನೀಲಮ್ಮನವರ ಸುಪುತ್ರರು. ಮೊದಲು ಹೆಬ್ಬಾಳ ಮಠದ ಗುರುಗಳಾಗಿದ್ದ ಷ.ಬ್ರ.ಶ್ರೀ ಗುರು ಮರಿಶಾಂತವೀರ ಮಹಾಸ್ವಾಮಿಗಳವರು ೧೯೬೭ರ ಮಣ್ಣೆತ್ತಿನ ಅಮವಾಸ್ಯೆಯ ದಿನ ಲಿಂಗೈಕ್ಯರಾದಾಗ, ಅಂದು ಕೂಡಿದ ಸಮಾಜ ಬಾಂಧವರು, ಮಠದ ಶಿಷ್ಯರು, ಹರ-ಗುರು ಚರವರ್ಯರು ಇವರ ಮಸ್ತಕದ ಮೇಲೆ ಗುರುಗಳ ಪೇಟಾವನ್ನಿರಿಸಿ, ಉತ್ತರಾಧಿಕಾರಿಗಳೆಂದು ಘೋಷಿಸಿದ್ದು ತಿಳಿಯಿತು. ನಂತರ ಇವರನ್ನು ಕೊಪ್ಪಳ ಗವಿಮಠಕ್ಕೆ ತಂದು ಸ್ವಾಮಿಗಳ ಹತ್ತಿರ ಕಳಿಸಿದರು. ಗುರುಗಳನ್ನು ಕಂಡು ನಮಸ್ಕರಿಸಿ ಪರಿಚಯಿಸಿಕೊಂಡ ಮೇಲೆ ಸಪ್ಪೆ ಮೋರೆ ಮಾಡಿಕೊಂಡು ನಿಂತಿದ್ದ ಅವರಿಗೆ ಪೂಜ್ಯರು ಸಮಾಧಾನದ ಮಾತುಗಳನ್ನು ಹೇಳಿ, ತಂದೆ-ತಾಯಿ ಎಲ್ಲವೂ ನಾವೇ, ಚಿಂತೆ ಬಿಟ್ಟು ಇಲ್ಲಿರು ಎಂದು ಸಂತೈಸಿ ಆಶೀರ್ವದಿಸಿದಾಗ ನನಗೆ ತುಂಬಾ ಸಂತಸವಾಯಿತೆಂದು ಹೇಳುತ್ತಾರೆ.

ಮುಂದೆ ಯಾವಾಗಲೂ ತಮ್ಮ ಜೊತೆಗೇ ಇರಿಸಿಕೊಂಡು ಪೂಜೆ, ಪ್ರಸಾದ, ನಿಯಮ, ವಿಧಿ ವಿಧಾನಗಳ ಬಗ್ಗೆ ತಿಳಿಸ್ತುತ್ತಿದ್ದರಂತೆ. ಒಮ್ಮೊಮ್ಮೆ ತಪ್ಪು ಮಾಡಿದಾಗ ತಂದೆ-ತಾಯಿಯರಂತೆ ಕ್ಷಮಿಸಿ, ತಿದ್ದಿ ದಾರಿ ತೋರಿಸಿದ ಅನೇಕ ಸಂದರ್ಭಗಳನ್ನು ಕೃತಜ್ಞತಾ ಭಾವದಿಂದ ಸ್ಮರಿಸಿಕೊಳ್ಳುತ್ತಾರೆ.

ಸಂಸ್ಕೃತ ಪಾಠ ಕಲಿಯುತ್ತಿದ್ದಾಗ ನನಗೆ ಶಾಲೆ ಸಂಚಾರಿ ಪಾಠ ಶಾಲೆ ಆಗಿತ್ತು. ನನ್ನ ಜೊತೆ ೧೦-೧೫ ಶಿಷ್ಯರು ನನ್ನಂತೆ ಅವರ ಸೇವೆಯಲ್ಲಿ ಹಿಂಬಾಲಕರಾಗಿದ್ದರು. ಪಾಠ ಪ್ರಾರಂಭಿಸಿದರೆ ಪೂಜೆ ಪ್ರಸಾದಗಳ ಕಡೆ ಗಮನವೇ ಹರಿಯುತ್ತಿದ್ದಿಲ್ಲ. ಗುರುಗಳದು ಅದ್ಭುತ ಬೋಧನೆ. ಸಾಯಣಾಚಾರ್ಯ ಹೇಳುವಂತೆ, "ಶಿಷ್ಯಂತೇ ವೇದನಾಯೋಪದಿಶ್ಯಂತೇ ಸ್ವರ ವರ್ಣಾದಯೋ ಯತ್ರಾಸೌ ಶಿಕ್ಷಾ" ಅಂದರೆ ಸ್ವರ, ವರ್ಣ ಮುಂತಾದವುಗಳನ್ನು ಯಥಾವತ್ತಾಗಿ ಉಪದೇಶಿಸುವ ಪಾಠ ಕ್ರಮವೇ ಉತ್ತಮವೆಂದು ಹೇಳುತ್ತಿದ್ದರಂತೆ.

ಹತ್ತಾರು ವರ್ಷ ಸಮರ್ಪಕ ಜ್ಞಾನ ಪಡೆದ ನಂತರ ಹೆಬ್ಬಾಳ ಮಠದಲ್ಲಿ ಕಾರ್ಯನಿರತರಾಗಲು ಗುರುಗಳಿಂದ ಅಪ್ಪಣೆ ದೊರೆಯಿತು ಎಂದು ಕ್ಷೇತ್ರ ಕಾರ್ಯದಲ್ಲಿ ಅವರಿಂದ ವಿಷಯವು ತಿಳಿದು ಬಂದಿದೆ.[೧] ಕಾರಣ ಈಗಲೂ ಸಹ ಗವಿಮಠದ ಜೊತೆ ಒಳ್ಳೇ ಸೌಹಾರ್ದತೆ ಹಾಗೂ ನಂಬಿಕೆ ಇಟ್ಟು ಕೊಂಡಿದ್ದಾರೆಂಬುದನ್ನು ಕಾಣುತ್ತೇವೆ.

---

೧. ಸಂಶೋಧಕರ ಕ್ಷೇತ್ರ ಕಾರ್ಯದಲ್ಲಿ ತಿಳಿದ ವಿಷಯ ಹಾಗೂ ಶಾಂತ ಪ್ರಭೆಯಲ್ಲಿ ಷ.ಬ್ರ.ನಾಗಭೂಷಣ ಶಿವಚಾರ್ಯಸ್ವಾಮಿಗಳು ಬರೆದ ಲೇಖನದಿಂದ. - ೧೯೯೩ ಸ್ಮರಣಸಂಚಿಕೆ.

## ೩) ಶ್ರೀ ಚನ್ನವೀರ ಶರಣರು (ಚಿಕೇನಕೊಪ್ಪ ಹಾಗೂ ಬಳಗಾನೂರಮಠ)

ಯಲಬುರ್ಗಾ ತಾಲೂಕಿನ ಚಿಕೇನಕೊಪ್ಪ ಗ್ರಾಮದಲ್ಲಿರುವ ಚನ್ನವೀರ ಶರಣರ ಮಠವೂ ಈ ಭಾಗದಲ್ಲಿ ಜಾಗೃತ ಸ್ಥಳವೆಂದು ಖ್ಯಾತಿ ಪಡೆದಿದೆ. ಕೊಪ್ಪಳದ ಗವಿಮಠಕ್ಕೂ ಚಿಕೇನಕೊಪ್ಪದ ಈ ಮಠಕ್ಕೂ ಅತೀವ ನಂಟು, ಸೌಹಾರ್ದತೆಯನ್ನು ಕಾಣುತ್ತೇವೆ. ಗವಿಮಠದ ೧೬ನೇ ಪೀಠಾಧಿಪತಿಗಳಾಗಿದ್ದ ಜ. ಮರಿಶಾಂತವೀರ ಮಹಾಸ್ವಾಮಿಗಳಿಂದ ದೀಕ್ಷೆ ಪಡೆದು ಅವರ ಪರಮ ಶಿಷ್ಯರಾಗಿ ಭವ್ಯ ಪರಂಪರೆಯಲ್ಲಿ ಮೆರೆಯುತ್ತಿದ್ದ ಶರಣರಾದ ಶ್ರೀ ಚನ್ನವೀರ ಸ್ವಾಮಿಗಳ ಚರಿತ್ರೆಯನ್ನು ಈ ಸಂದರ್ಭದಲ್ಲಿ ನೆನೆಯದಿದ್ದರೆ, ಗವಿಮಠದ ಪರಂಪರೆ ಅಪೂರ್ಣ ವಾದೀತು.

ಈ ಜಗತ್ತಿನಲ್ಲಿ ಕಾಲಕಾಲಕ್ಕೆ ಅನೇಕ ಅನುಭಾವಿಪುರುಷರು ಜನ್ಮವೆತ್ತಿ ಮಾನವ ಕಲ್ಯಾಣಕ್ಕಾಗಿ ಶ್ರಮಿಸಿ ತಮ್ಮ ತತ್ವ ದರ್ಶನವನ್ನು ಜನತೆಗೆ ಬಿತ್ತರಿಸುತ್ತ ಅನುಭವ ವಾಣಿಯನ್ನು ಭಕ್ತಸಮೂಹಕ್ಕೆ ಕರುಣಿಸುತ್ತಾರೆ. ಇಂಥ ಮಹಾಮಾ ಮಹಿಮ ಪುರುಷರಲ್ಲಿ ಪೂಜ್ಯ ಶ್ರೀ ಚನ್ನವೀರ ಶರಣರೂ ಒಬ್ಬರು.

ಹಿಂದೆ ಹೈದ್ರಾಬಾದ ಸಂಸ್ಥಾನದಲ್ಲಿ ನವಾಬ ಸಾಲಾರಜಂಗ ಬಹಾದ್ದೂರ ಅವರ ಜಹಗೀರ ಆಗಿದ್ದ ಕೊಪ್ಪಳ ಜಿಲ್ಲೆಯ ಒಂದು ಹಳ್ಳಿ, ಯಲಬುರ್ಗಾದ ಚಿಕೇನಕೊಪ್ಪ. ಎರೀನಾಡಿನ ಈ ಪ್ರದೇಶದ ಪರಿಸರವು ಕೃಷಿ, ಪುರಾಣ, ಕೀರ್ತನ, ಜನಪದರ ಸಹಜ ವಾತ್ಸಲ್ಯ ಗೌರವಗಳಿಂದ ತುಂಬಿದ ನಡುವಳಿಕೆ, ಆಧ್ಯಾತ್ಮ ಚಿಂತನ ಮಂಥನದ ಕೇಂದ್ರವಾಗಿದ್ದ ಚಿಕೇನಕೊಪ್ಪವು ಸ್ವಾತಂತ್ರ್ಯ ಹೋರಾಟದ ಜನಜಾಗೃತಾ ಕೇಂದ್ರವೂ ಆಗಿತ್ತು. ದ್ಯಾಂಪೂರ ಚನ್ನ ಕವಿಗಳ ವಂಶಜರಾದ ಶಿರೂರ ಮಠದ ಶ್ರೀ ಕಳಕಯ್ಯನವರು ಚಿಕೇನಕೊಪ್ಪ ಗ್ರಾಮಕ್ಕೆ ಅಕ್ಷರದ ಬೆಳಕು ಮೂಡಿಸಿದ ಗುರುಗಳು. ಇವರು ನಾಡಿನ ಖ್ಯಾತ ಸಾಹಿತಿ ಡಾ|| ಸಿದ್ದಯ್ಯ ಪುರಾಣಿಕ ಅವರ ಸೋದರ ಮಾವಂದಿರು. ಹೀಗಾಗಿ ಚಿಕೇನಕೊಪ್ಪವು ಶೈಕ್ಷಣೀಕವಾಗಿ, ಧಾರ್ಮಿಕವಾಗಿ ಬೆಳೆದ ಊರಾಗಿದೆ. ಕವಿಗಳೂ ಶಾಸ್ತ್ರಕೋವಿದರೂ ಚಿತ್ರದುರ್ಗದ ಬೃಹನ್ಮಠದ ಲಿಂಗೈಕ್ಯ ಜಯದೇವ ಜಗದ್ಗುರುಗಳವರ ಪೂರ್ವಾಶ್ರಮದ ಬಳಗಕ್ಕೆ ಸೇರಿದವರೂ ಆ ಹಿರಿಯ ಮಠದ ಕಾನಯ್ಯನವರು ಹಾಗೂ ಶಿವಮ್ಮನವರು ಶರಣರ ಪೂರ್ವಾಶ್ರಮದ ತಂದೆ–ತಾಯಿಗಳು ಕಾನಯ್ಯನವರು (ಈ ಹಿರೇಮಠದವರು) ಮೂಲತಃ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಮಮದಾಪೂರದವರು.

ಆಗ್ಗೆ ಬೀಕರ ಬರಗಾಲ ಬಿದ್ದ ಪ್ರಯುಕ್ತ, ರಾಯಚೂರು ಜಿಲ್ಲಾ ಲಿಂಗಸೂಗೂರ ತಾಲೂಕಿನ ಪವಿತ್ರ ಕ್ಷೇತ್ರ ಗುಡುಗುಂಟಾ ಅಮರೇಶ್ವರ ದೇವಸ್ಥಾನದಲ್ಲಿ ಇದ್ದರಂತೆ. ಕೆಲವು ವರ್ಷಗಳ ನಂತರ ಮುಂಡರಗಿ ತಾಲೂಕಿನ ಡಂಬಳಕ್ಕೆ ಬಂದರಂತೆ, ಮುಂದೆ ಗದುಗಿನ ತೋಂಟದಾರ್ಯ ಮಠಕ್ಕೆ ಬಂದು ಅಲ್ಲಿಂದ ಯಲಬುರ್ಗಾ ತಾಲೂಕಿನ ಬಿನ್ನಾಳ ಗ್ರಾಮದಲ್ಲಿರುವ ಶಾಖಾಮಠಕ್ಕೆ ಬಂದರೆಂದು ತಿಳಿದು ಬರುತ್ತದೆ, ಅವರಲ್ಲಿ ಕಾನಯ್ಯನವರು ಪಕ್ಕದ ಹಳ್ಳಿ ಚಿಕೇನಕೊಪ್ಪಕ್ಕೆ ಬಂದು ಹಿರೇಮಠವನ್ನು ಸ್ಥಾಪಿಸಿದ ಬಗ್ಗೆ ಮಾಹಿತಿ ಸಿಗುತ್ತದೆ. ಬಾಲ್ಯದಿಂದಲೂ ಕಾನಯ್ಯನವರ ಮಗ ಚನ್ನವೀರಯ್ಯನು ಆಧ್ಯಾತ್ಮದ ಕಡೆ ಒಲುವು ಬಹಳ ಇತ್ತಂತೆ. ಶಾಲಾ ಶಿಕ್ಷಣ ಅಷ್ಟೇನೂ ಅಲ್ಲವೆಂದರೂ ಪ್ರಾಥಮಿಕ ಶಾಲಾ ಶಿಕ್ಷಣವನ್ನು ಮಾತ್ರ ಮುಗಿಸಿದವರು. ಆದರಲ್ಲಿಯೇ ಪಾಂಡಿತ್ಯವನ್ನು ಪಡೆದುಕೊಂಡು ಕೀರ್ತಿ ಮೆರೆದ ವ್ಯಕ್ತಿಗಳು ಚನ್ನವೀರಯ್ಯನವರು. ಪ್ರಾಥಮಿಕ ಶಿಕ್ಷಣವನ್ನು ಗದಗ ಜಿಲ್ಲೆಯ ಬಳಗಾನೂರಲ್ಲಿ ಪಡೆದರು. ಇಲ್ಲಿ ಚಿಕೇನಕೊಪ್ಪ–ಬಳಗಾನೂರ ಸಂಬಂದದ ಬಗ್ಗೆ ಸ್ವಲ್ಪ ವಿಚಾರಿಸುವದು ಸೂಕ್ತ ಚಿಕೇನಕೊಪ್ಪದ ಗುಗ್ಗಳ ಮಹಾಂತಪ್ಪನವರು ಪೂಜನೀಯ ವ್ಯಕ್ತಿಗಳು ಪುರಾಣ ಪ್ರವಚನ ಮಾಡುತ್ತಿದ್ದರು. ಅದಕ್ಕಾಗಿ ಪ್ರತಿ ವರ್ಷ ಬಳಗಾನೂರಿಗೆ ಹೋಗುತ್ತಿದ್ದರು. (ಚಿಕೇನಕೊಪ್ಪದಲ್ಲಿ ಶ್ರಾವಣ ಮಾಸದಲ್ಲಿ ಪುರಾಣವನ್ನು ಓದುವವರು ಹಕಾರಿ ಸಿದ್ದಪ್ಪನವರು ಹಾಗೂ ಕಳಕಯ್ಯನವರು ಪುರಾಣ ಹೇಳುವವರು. ಇಬ್ಬರದೂ ಒಳ್ಳೇ ಜೋಡಿ ಇತ್ತಂತೆ. ಇಂದು ಕವಿಗಳಾಗಿ, ಕತೆಗಾರರಾಗಿ, ವಿಮರ್ಶಕರಾಗಿ, ವಾಗ್ಮಿಗಳಾಗಿ ಪ್ರಸಿದ್ಧಿ ಪಡೆದ ಡಾ॥ ದೇವೇಂದ್ರಕುಮಾರ ಹಕಾರಿ ಅವರ ತಂದೆಯವರೇ ಹಕಾರಿ ಸಿದ್ದಪ್ಪನವರು) ಬಳಗಾನೂರಿನ ಗೂಳರಡ್ಡಿ. ಹನುಮರಡ್ಡಿಯವರು ಮಹಾಂತಪ್ಪನವರ ಶಿಷ್ಯರಾಗಿದ್ದರಿಂದ, ಚಿಕೇನಕೊಪ್ಪದ ಹಿರೇಮಠವನ್ನು ಕಟ್ಟುವಲ್ಲಿ ಬಹಳ ಸಹಾಯ ಮಾಡಿದರಂತೆ. ಮುಂದೆ ಹನುಮರಡ್ಡಿಯವರು ಬಾಲಕ ಚನ್ನವೀರಯ್ಯನನ್ನು ವಿದ್ಯಾಭ್ಯಾಸಕ್ಕಾಗಿ ಬಳಗಾನೂರಿಗೆ ಕರೆದೊಯ್ದು ಅನೂಕೂಲ ಮಾಡಿಕೊಟ್ಟ ಬಗ್ಗೆ ವಿವರ ತಿಳಿಯುತ್ತದೆ.

ಚಿಕೇನಕೊಪ್ಪದ ಹಿರೇಮಠವು ಉಜ್ಜನಿ ಜಗದ್ಗುರು ಪಂಚಾಚಾರ್ಯ ಪೀಠದ ಶಾಖಾಮಠವಾಗಿ ಸಂಬಂಧ ಹೊಂದಿದೆ.[೧] ಚಿತ್ರದುರ್ಗ ಬೃಹನ್ಮಠದ ಜಗದ್ಗುರುಗಳಾಗಿದ್ದ ಜಯದೇವ ಮಹಾಸ್ವಾಮಿಗಳು ಇದೇ ವಂಶದಲ್ಲಿ ಜನಿಸಿದವರು.

---

೧. ಪ್ರೋ. ಆರ್.ಎಲ್. ಬಡಿಗೇರ – "ಶಾಂತ ಪ್ರಭೆ" - ಗವಿಮಠದ ವಿದ್ಯಾರ್ಥಿ ಬಳಗದ – ಪುಟ–೧೦೦–೧೯೯೩

ಇವರ ಪೂರ್ವಾಶ್ರಮದ ಹೆಸರು ಚನ್ನವೀರಯ್ಯನವರು. ಈ ಹೆಸರನ್ನೇ ಹೊತ್ತು ಬಂದಿರುವ ಪೂಜ್ಯ ಚನ್ನವೀರ ಶರಣರು ನಡುವಳಿಯಲ್ಲಿ ಜಯದೇವ ಸ್ವಾಮಿಗಳ ಮೊಮ್ಮಕ್ಕಳಾಗಿರಬೇಕು. ಅವರು ಹೇಳಿದಂತೆ, ಚನ್ನವೀರ ಶರಣರು ಸನ್ಯಾಸಿ ಆಗಿ, ವೈರಾಗ್ಯ ಪ್ರವೃತ್ತಿಯನ್ನು ಬೆಳೆಸಿಕೊಂಡು ವೀರಸನ್ಯಾಸಿಯಾಗಿ, ಚನ್ನವೀರ ಶರಣರಾಗಿ ಮಹಾತಪಸ್ವಿಯಾಗಿ ಮಹಿಮಾ ಪುರುಷರಾಗಿ ಮೆರೆದ ಬಗ್ಗೆ ಉಲ್ಲೇಖವಿದೆ. ನಂತರ ಕೊಪ್ಪಳ ಗವಿಮಠದ ಮಹಾ ಭಕ್ತರಾಗಿ ಮಠದ

ವಿದ್ಯಾಸಂಸ್ಥೆಗಳ ಮತ್ತು ಪ್ರಸಾದ ನಿಲಯದ ಸರ್ವತೋಮುಖದೇಳ್ಗೆಗೆ ಚನ್ನವೀರ ಶರಣರ ಪರಿಶ್ರಮ ಹಾಗೂ ಸೇವೆ ಅಪಾರ ಎಂಬುದು ತಿಳಿದು ಬರುತ್ತದೆ. ಗವಿಮಠದ ೧೬ನೇ ಜಗದ್ಗುರು ಪೂಜ್ಯ ಮರಿಶಾಂತವೀರ ಮಹಾಸ್ವಾಮಿಗಳು ಅನುಗ್ರಹಿಸಿ ಸನ್ಯಾಸ ದೀಕ್ಷೆ ಕೊಟ್ಟು ಆಶೀರ್ವದಿಸಿದರು. ಅಂದಿನಿಂದ ಅವರು ವೀರಸನ್ಯಾಸಿಗಳಾಗಿ, ಮಹಿಮಾ ಪುರುಷರಾಗಿ ಅಪಾರ ಮಹಿಮೆ, ಪವಾಡಗಳನ್ನು ಮಾಡಿದ ಬಗ್ಗೆ ತಿಳಿದು ಬರುತ್ತದೆ. ಚಿಕೇನಕೊಪ್ಪದ ಮಠದಲ್ಲಿ ಅದ್ಭುತವಾದ ರುದ್ರಾಕ್ಷಿ ಪೂಜಾ ಮಂಟಪವನ್ನುರಚಿಸಿದ್ದಾರೆ.

ಪ್ರತಿ ವರ್ಷ ಗವಿಸಿದ್ದೇಶ್ವರ ಜಾತ್ರೆಯ ಮರುದಿವಸ ತಮ್ಮ ಆತ್ಮೀಯ ಶಿಷ್ಯರಲ್ಲೊಬ್ಬರಾದ ಗಂಗಯ್ಯ ಡಾಕ್ಟರ ಮನೆಯಿಂದ ಪೂಜಾ ವೈಭವದಿಂದ ಮೆರವಣಿಗೆಯಲ್ಲಿ ಹೊರಟು, ಗವಿಮಠದ ಮಹಾದ್ವಾರದಿಂದ ಮೇಲ್ಗಡೆ ತಮ್ಮ ಗುರುಗಳ ಗದ್ದುಗೆಯ ಹಾಗೂ ಕೈಲಾಸ ಮಂಟಪದವರೆಗೆ ದೀರ್ಘದಂಡ ನಮಸ್ಕಾರ ಹಾಕುತ್ತ, ಅಲ್ಲಿ ಯಾತ್ರಾಮಹೋತ್ಸವದಲ್ಲಿ ಪಾಲ್ಗೊಂಡ ಎಲ್ಲಾ ಪೂಜ್ಯ ಶ್ರೀಗಳಿಗೆ ಆವುಗೆ, ಭಸ್ಮ, ರುದ್ರಾಕ್ಷಿ, ಉಚಿತ ವಸ್ತ್ರಾದಿಗಳನ್ನು ಗುರುಕಾಣಿಕೆಯಾಗಿ ಅರ್ಪಿಸುವ ರೀತಿ ಪ್ರತಿವರ್ಷ ನಡೆಯುತ್ತ ಬಂದಿರುವ ವಿಶಿಷ್ಟ ಸಂಪ್ರದಾಯವಾಗಿದೆ ಎಂಬುದನ್ನು ಪ್ರತೀವರ್ಷ ನಾವು ಕಾಣುತ್ತಿದ್ದೇವೆ.

ಪೂಜ್ಯ ಶರಣರ ಉಡುಗೆ ತೊಡುಗೆಗಳು ಅತೀ ಕಡಿಮೆ. ತಲೆಗೆ ಉಣ್ಣೇ ಟೊಪ್ಪಿಗೆ, ಹೆಗಲ ಮೇಲೆ ಒಂದು ಕಂಬಳಿ, ಒಂದು ಚಿಕ್ಕ ಪಂಜೆ, ಕೈಯಲ್ಲಿ ಬೆತ್ತ ಹೆಗಲಿಗೆ ಜೋಳಿಗೆ, ಆ ಜೋಳಿಗೆಯಲ್ಲಿ ಶರಣರ ವಚನ ಸಾಹಿತ್ಯ, ಚರಿತ್ರೆಗಳು, ಗ್ರಂಥಗಳು ಇರುತ್ತಿದ್ದುದನ್ನು ನಾವು ಕಂಡಿದ್ದೇವೆ.

ಚಿಕೇನಕೊಪ್ಪದಲ್ಲಿ ಮೋಹರಂ ಹಬ್ಬವನ್ನು ಹಿಂದೂ-ಮುಸ್ಲೀಂ ಜನರು ಕೂಡಿ, ಶರಣರ ದಿವ್ಯ ಸನ್ನಿಧಾನದಲ್ಲಿ ಆಚರಿಸುತ್ತಿರುವದು ವಿಶೇಷ.

ಬಳಗಾನೂರಿನಲ್ಲಿ ಲಕ್ಷಾವಧಿ ಹಣದಿಂದ ಖರ್ಚುಮಾಡಿ ಭವ್ಯ ಮಠವನ್ನು ಕಟ್ಟಿಸಿದ್ದಾರೆ. ಚನ್ನವೀರ ಶರಣರ ಈ ಮಠದಲ್ಲಿ ಪ್ರತಿ ಹುಣ್ಣಿಮೆಗೆ ಶಿವಾನುಭವ ಕಾರ್ಯಕ್ರಮವು ಜರುಗುತ್ತದೆ. ೧೩/೧೦/೧೯೮೧ ರಂದು ಸೀಗಿ ಹುಣ್ಣಿಮೆ ದಿನದಂದು ಈ ಶಿವಾನುಭವ ಕಾರ್ಯಕಮ ಪ್ರಾರಂಭಗೊಂಡು ಇಲ್ಲಿಯವರೆಗೆ ಅವ್ಯಾಹತವಾಗಿ ನಡೆದು ಬಂದಿದೆ, ಈಗ ೩೦೦ ಶಿವಾನುಭವಗಳು ಆಗಿವೆ. ಬಳಗಾನೂರು ಮಠದಲ್ಲೂ ನಿತ್ಯ ದಾಸೋಹ ನಡೆಯುತ್ತದೆ. ಆಂಧ್ರ ಪ್ರದೇಶದ ದಂಡಿನ ಹಿರೇಹಾಳದಲ್ಲಿ ಒಂದು ನೂರಾ ಎಂಟು ಲಿಂಗಗಳ ಪ್ರತಿಷ್ಠಾಪನೆಯ ಅಪೂರ್ವ ಕಾರ್ಯಕ್ರಮಗಳನ್ನು ಶರಣರು ಮಾಡಿದ್ದಾರೆ. ಬಳಗಾನೂರ ಮಠದಲ್ಲಿ ಸಭಾ ಮಂಟಪ, ಕಲ್ಯಾಣ ಮಂಟಪ, ಪ್ರಸಾದ ನಿಲಯ, ಪ್ರವಚನ ಪೂಜಾಗೃಹ ಇತ್ಯಾದಿ, ಭಕ್ತ ಸಮುದಾಯ ಸಹಕಾರದೊಂದಿಗೆ ನಿರ್ಮಾಣ ಮಾಡಿಸಿದ್ದಾರೆ. ಸುಮಾರು ಎಂಭತ್ತು ಸಂವತ್ಸರ ದಾಟಿದ ಶರಣರು ಕಾಯಿಲೆಯಿಂದ ದಿನಾಂಕ ೦೬/೦೨/೧೯೯೫ ರಂದು ಲಿಂಗೈಕ್ಯರಾದರು. ಕೊಪ್ಪಳದ ಶ್ರೀಗಳು ಆಗಾಗ್ಗೆ ಬಳಗಾನೂರಿಗೆ ಹೋಗಿ ಬಂದು ಆ ಮಠದ ಯೋಗಕ್ಷೇಮವನ್ನು ವಿಚಾರಿಸುತ್ತಿರುವುದು ಹಾಗೂ ಬಳಗಾನೂರ ಶ್ರೀಗಳು ಕೊಪ್ಪಳದ ಮಠಕ್ಕೆ ಆಗಮಿಸಿ ಆಶೀರ್ವಾದ ಪಡೆಯುತ್ತ ಇರುವದು ಅವ್ಯಾಹತವಾಗಿ ನಡೆದಿರುತ್ತದೆ.

ಚಿಕೇನಕೊಪ್ಪದ ಶರಣರ ಹೆಸರಿನಲ್ಲಿ ಪೂರ್ವ ಪ್ರಾಥಮಿಕ ಶಾಲೆಯಿಂದ ಪ್ರಾರಂಭಗೊಂಡು ಏಳನೇ ತರಗತಿಯವರೆಗೆ ಶಾಲೆಯನ್ನು ನಡೆಸುತ್ತಿದ್ದಾರೆ. ೧೯೯೫ರಲ್ಲಿ ಶಾಲೆ ಪ್ರಾರಂಭಗೊಂಡಿದ್ದು, ೨೦ ಜನ ಶಿಕ್ಷಕರಿದ್ದಾರೆ. ಒಟ್ಟು ೪೫೦ ಮಕ್ಕಳು ಬೇರೆ ಬೇರೆ ತರಗತಿಯಲ್ಲಿ ಓದುತ್ತಿದ್ದಾರೆ. ಮಠದಲ್ಲಿ ಉಚಿತ ಪ್ರಸಾದ ನಿಲಯವಿದ್ದು ೫೦ ಮಕ್ಕಳು ಉಪಯೋಗ ಪಡೆದು ಕೊಳ್ಳುತ್ತಿದ್ದಾರೆ. ಸಂಸ್ಕೃತ ಪಾಠ ಶಾಲೆ ಇದೆ. ಸಂಗೀತ ಪಾಠ ಶಾಲೆ ಇದೆ. ಪ್ರತಿ ಶಾಲೆಯಲ್ಲಿ ೪೦ ಮಕ್ಕಳು ಕಲಿಯುತ್ತಿದ್ದಾರೆ. ವೇದ-ಶಾಸ್ತ್ರ ಪಾಠ ಶಾಲೆಯಿದ್ದು ೧೨ ಮಕ್ಕಳು ಇಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಮಠವು ಒಟ್ಟು ೩೦ ಎಕರೆ ಎರಿ ಹೊಲವನ್ನು ಹೊಂದಿದ್ದು ಬಂದ ಬೆಳೆಯಲ್ಲಿ ಪ್ರಸಾದ ನಿಲಯ, ಮಠದ ಅಭಿವೃದ್ಧಿ ಮಾಡುತ್ತಿರುವುದು, ಕ್ಷೇತ್ರ ಕಾರ್ಯದಿಂದ ತಿಳಿದು ಬಂದಿದೆ. ಮೌನ ತಪಸ್ವಿಗಳ ಉತ್ತರಾಧಿಕಾರಿಗಳಾಗಿ ಈಗ ಪೂಜ್ಯ ಶಿವಶಾಂತವೀರ ಶರಣರು ಪೀಠಾಧ್ಯಕ್ಷರಾಗಿದ್ದಾರೆ. ವಯಸ್ಸಿನಲ್ಲಿ ಚಿಕ್ಕವರಾದರೂ ವಿದ್ವತ್ತು, ತಪಸ್ಸಿನಲ್ಲಿ ಸಿದ್ಧ ಹಸ್ತರು.

## ಬಳಗಾನೂರ ಮಠದ ಸಧ್ಯದ ಶರಣರಾದ ಶ್ರೀ ಶಿವಶಾಂತವೀರ ಶರಣರು

ಕೊಪ್ಪಳದ ಜಗದ್ಗುರು ಲಿಂ. ಶಿವಶಾಂತವೀರ ಮಹಾಸ್ವಾಮಿಗಳ ಅಪ್ಪಣೆ ಪಡೆದು ಚಿಕೇನಕೊಪ್ಪದ ಹಿರೇಮಠದವರನ್ನೇ ಮರಿಶರಣರನ್ನಾಗಿ ಆರಿಸಿಕೊಂಡರು. ಆ ಮನೆತನದ ಹಿರಿಯರಾದ ಮಹಾಂತಯ್ಯ ಸ್ವಾಮಿಗಳವರೆಗೆ ಮುಷ್ಠೂರಿನ ಶ್ರೀಮತಿ ದ್ರಾಕ್ಷಾಯಿಣಮ್ಮನವರೊಂದಿಗೆ ಮದುವೆ ನಂತರ ಅವರಿಗೆ ಕಾಳಣ್ಣ, ಈಶಯ್ಯ, ಖಾನ್ಯಯ್ಯ, ಬಸಲಿಂಗಯ್ಯ, ಶಿವಶಾಂತಯ್ಯರೆಂಬ ಐವರು ಪುತ್ರರಿದ್ದರು. ಮಹಾಂತಯ್ಯನವರು ಚಿಕೇನಕೊಪ್ಪದ ಹಾಗೂ ಮುಷ್ಠೂರಿನ ಎರಡೂ ಕಡೆಯ ಹೊಲ-ಮನೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದರಂತೆ. ಕೊನೆಯ ಮಗ ಶಿವಶಾಂತಯ್ಯನು ಇನ್ನೂ ಚಿಕ್ಕ ಬಾಲಕ ವಿದ್ಯಾಭ್ಯಾಸದಲ್ಲಿ ತೊಡಗಿದ್ದರು. ಉಳಿದವರು ಆಗಲೇ ದೊಡ್ಡವರಾಗಿದ್ದರಿಂದ ಹೊಲ-ಮನೆ ಕೆಲಸ ನೋಡಿಕೊಳ್ಳುತ್ತಿದ್ದರು. ದಿನಾಂಕ : ೦೧/೦೬/೧೯೭೨ ರಂದು ಜನಿಸಿದ ಶಿವಶಾಂತವೀರಯ್ಯನ ಶಿವನಿಷ್ಠೆ ಹಾಗೂ ಕ್ರಿಯಾಶೀಲ ಚೈತನ್ಯವನ್ನು ಕಂಡು ಶರಣರು ಈತನನ್ನೇ ಮರಿ ಶರಣರನ್ನಾಗಿ ನೇಮಿಸಿಕೊಳ್ಳಲು ಒಪ್ಪಿಗೆಯನ್ನು ಇತ್ತರು.

ಚಿಕ್ಕ ಬಾಲಕ ಶಿವಶಾಂತಯ್ಯನು ಉತ್ತಮ ಸಂಸ್ಕಾರ, ಮಠದ ಪರಂಪರೆ, ಶರಣರ ತಪೋನುಷ್ಠಾನಗಳನ್ನೆಲ್ಲ ರೂಢಿಸಿಕೊಂಡಿದ್ದರು. ಚಿಕೇನಕೊಪ್ಪ ಹಾಗೂ ಮುಷ್ಠೂರುಗಳಲ್ಲಿ ತಮ್ಮ ಬಾಲ್ಯ ಜೀವನ ಕಳೆದ ಮೇಲೆ ಚಿಕೇನಕೊಪ್ಪದಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ಸದ್ಗುಣಿ, ವಿನಯ ಶೀಲರಾಗಿದ್ದ ಬಾಲಕನನ್ನು ಎಲ್ಲ ಶಿಕ್ಷಕರೂ ಬಹಳೇ ಮುದ್ದಾಗಿ ಕಾಣುತ್ತಿದ್ದರು. ಬೆಳೆಯ ಸಿರಿ ಮೊಳಕೆಯಲ್ಲಿ ಎನ್ನುವಂತೆ ಲೌಕಿಕ ಜೊತೆ ಪಾರಮಾರ್ಥಿಕ ಅಂಶಗಳನ್ನು ವಿದ್ಯಾರ್ಥಿ ದೆಸೆಯಲ್ಲಿಯೆ ಇದ್ದಾವೆಂದು ಹಿರಿಯರು ಹೇಳುತ್ತಿದ್ದಾರೆ. ಶಿವಶಾಂತಯ್ಯನಿಗೆ ಹೆಚ್ಚಿನ ಓದಿನ ಬಗ್ಗೆ ಆಶೇ ಇತ್ತು. ಕಾರಣ ಪ್ರೌಢ ಶಿಕ್ಷಣಕಾಗಿ ಕೊಪ್ಪಳದ ಗವಿಸಿದ್ದೇಶ್ವರ ಸಂಸ್ಥೆಗೆ ಸೇರಿಸಿದರು. ಕೊಪ್ಪಳದ ಶ್ರೀಗಳವರು ಈತನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು. ತಾವೆ ಸ್ವತ: ಸಂಸ್ಕೃತ ವೈದಿಕ ಶಿಕ್ಷಣವನ್ನು ಪ್ರಾರಂಭಿಸಿದರು. ಪ್ರತಿ ದಿನ ಶಿವಪೂಜಾ ವಿಧಾನ ತಪೋನುಷ್ಠಾನಗಳ ವಿವರಣೆ ಮಾಡುತ್ತಿದ್ದರು. ಜೊತೆ ಜೊತೆಗೆ ಅಧ್ಯಾತ್ಮ, ವ್ಯವಹಾರಿಕ ಜ್ಞಾನವನ್ನು ಕೊಟ್ಟರು. ತಾವು ಪರ ಊರ ಭಕ್ತರ ಮನೆಗೆ ಹೋದರೆ ತಮ್ಮ ಜೊತೆಗೇ ಶಿವಶಾಂತಯ್ಯನನ್ನು ಕರೆದುಕೊಂಡು ಹೋಗುತ್ತಿದ್ದರಂತೆ.

ಇಲ್ಲಿದ್ದರೂ ಶ್ರೀಗಳ ಸೇವೆಯನ್ನು ಮನಸಾ ಮಾಡಿ ಅವರ ಆಶೀರ್ವಾದಕ್ಕೆ ಪಾತ್ರರಾದರು ಶರಣ ಪೀಠದ ಅಭಿವೃದ್ಧಿಯ ಕನಸು ಕಾಣುತ್ತಿದ್ದ ಶಿಷ್ಯನನ್ನು ಬಳಗಾನೂರಿಗೆ ಕರೆತಂದು ಚನ್ನವೀರ ಶರಣರ ಒಪ್ಪಿಗೆಯಂತೆ ದಿನಾಂಕ:೨೬-೪-೧೯೮೫ ರಂದು ಶರಣ ಪೀಠದ ಅಧಿಕಾರವನ್ನು ಕೊಪ್ಪಳದ ಪೂಜ್ಯರ ಸನ್ನಿಧನದಲ್ಲಿ ಹಸ್ತಾಂತರಿಸಿದರು. ಅಂದಿನಿಂದಲೇ ಶಿವಶಾಂತವೀರ ಶರಣರು, ಎಂದು ಪುನರ ನಾಮಕರಣ ಮಾಡಿ ಚನ್ನವೀರ ಶರಣರ ಮಾರ್ಗದರ್ಶನದಲ್ಲಿ ಅವರ ಆಚಾರ ವಿಚಾರ ಪೂಜಾವಿಧಿ ವಿಧಾನ ಭಕ್ತ ಕಲ್ಯಾಣಗಳನ್ನೇಲ್ಲಾ ನೀವು ಮುಂದುವರಿಸಿಕೊಂಡು ಹೋಗಲು ಅಪ್ಪಣೆ ಮಾಡಿದರು.

ಚನ್ನವೀರ ಶರಣರು ತಮ್ಮ ಶಿಷ್ಯರನ್ನು ನವಲಗುಂದಕ್ಕೆ ದೈವಿ ಸಿದ್ದಿ ಪುರುಷರು, ಶುದ್ಧ ಹಸ್ತರೂ ಆಗಿದ್ದ ಹುರಕಡ್ಲಿ ಅಜ್ಜನವರಲ್ಲಿಗೆ ಕಳುಹಿಸಿದರು. ಅವರ ಆಶೀರ್ವಾದದಿಂದ ಶರಣರಿಗೆ ಲಭಿಸಿತು. ನಂತರ ಬಳಗಾನೂರಿಗೆ ಬಂದು ಸಮಾರಂಭವೊಂದನ್ನು ಮಾಡಿದ್ದರು. ಅಂದಿನ ಸಭೆಗೆ ನಾಡಿನ ಅನೇಕ ಹಿರಿಯರೂ, ಶರಣರು, ಪೂಜ್ಯರು ಆಗಮಿಸಿದ್ದರು. ಅಂದಿನಿಂದ ಕಾಯಂ ಆಗಿ ಶಿವಶಾಂತವೀರ ಶರಣರು ಮಠದ ಉಸ್ತುವರಿ ನೋಡಿಕೊಳ್ಳುತ್ತ ಭಕ್ತ ಸಮೂಹವನ್ನು ಆಕಷಿನ ಸುತ್ತ ಚನ್ನವೀರ ಶರಣರ ಪ್ರತಿರೂಪದಿಂದ ಭಕ್ತರಿಗೆ ಆಶೀರ್ವಾದ ನೀಡುತ್ತಿದ್ದಾರೆ.

# ಅಧ್ಯಾಯ –೮

## ಜಾನಪದದಲ್ಲಿ ಗವಿಮಠದ ಸ್ಮರಣೆ:

ಮಾನವನ ಜೀವನದ ಕಷ್ಟಸುಖ ಆಸೆ ಆಕಾಂಕ್ಷೆ ಅದ್ಭುತ ಮುಗ್ಧತೆಗಳಿಂದ ಜನ್ಯವಾದ ನಂಬಿಕೆ ಈ ಎಲ್ಲಾ ಅನುಭವಗಳ ತೀವ್ರತೆಯಿಂದ ಗಂಭೀರವಾಗಿ, ಸಹಜ ಸುಂದರವಾಗಿ ಮೂಡಿ ಬಂದುದೇ ಜನಪದ ಸಾಹಿತ್ಯ ಇದು ಮೌಖಿಕ ಸಂಪ್ರದಾಯದಲ್ಲಿ ಸ್ಥಿರವಾಗಿ ನಿಂತು ಸಮಷ್ಟಿ ಪ್ರತಿನಿಧಿಯೂ ಸಂಸ್ಕೃತಿಯ ತವನಿಧಿಯೂ ಆಗಿದೆ. ಜನಪದ ಸಂಸ್ಕೃತಿಯ ಅಧ್ಯಯನವೆಂದರೆ ಮನುಷ್ಯ ಜೀವನದ ಅಧ್ಯಯನವೇ ಆಗಿದೆ.

ಜನಪದ ಸಾಹಿತ್ಯ ಸಾಮನ್ಯವಾಗಿ ಎರಡು ಸಂದರ್ಭಗಳಲ್ಲಿ ಸೃಷ್ಟಿಯಾಗುತ್ತದೆ.

ಒಂದು – ದುಡಿತದ ಸಂದರ್ಭ

ಎರಡನೇಯ – ಸಾಂಸ್ಕೃತಿಕ ಸಂದರ್ಭ.

ಕಲೆ, ಧರ್ಮ, ಪುರಾಣ, ಐತಿಹ್ಯ, ಗಾದೆ, ಒಗಟು, ಕಥೆ, ಗೀತೆ, ಲಾವಣಿ, ನಂಬಿಕೆ, ಆಚರಣೆ, ಸಂಪ್ರದಾಯ, ನೈತಿಕ ವ್ಯವಸ್ಥೆ, ವಿಧಿ–ವಿಧಾನ, ನಿಷೇಧ ಹೀಗೆ ಎಲ್ಲಾವುಗಳೊಂದಿಗೆ ತಳುಕು ಹಾಕಿಕೊಂಡಿರುವ ಜಾನಪದದ ವಸ್ತು ವಿಷಯ ಮುಖ್ಯವಾಗಿ ಮಾನವ ಹಾಗೂ ಪರಿಸರದ ನಡುವಿನ ಆಪ್ತ ಸಂಬಂಧವನ್ನು ಗುರುತಿಸುವ ಭೌತಿಕ ನೆಲೆಯಪ್ರಕ್ರಿಯೆಯಾಗಿ ಕಂಡು ಬರುತ್ತದೆ.

ನಂಬಿಕೆ, ಸಂಪ್ರದಾಯಗಳೇ ಜನಪದ ಬದುಕಿನ ಬೆನ್ನೆಲುಬು, ಜನಪದರಲ್ಲಿ ಧರ್ಮ ಎನ್ನುವದು ಬದುಕಿನ ರೀತಿಗೆ ಸಂಬಂದಿಸಿದ್ದು, ಜನಪದ ಧರ್ಮದಲ್ಲಿಜೀವನ, ಪ್ರೀತಿ ಕಾಣುತ್ತೇವೆ. ಆದ್ದರಿಂದಲೇ ಅಲ್ಲಿ ಬದುಕನ್ನು ಧಿಕ್ಕರಿಸಿರುವುದು ಕಂಡು ಬರುವುದಿಲ್ಲ. ಬಾಳಿನ ಬಗ್ಗೆ ಜನ ಪದರಿಗಿದ್ದ ಅಪಾರ ಶ್ರದ್ಧೆ ಆಸಕ್ತಿಗಳೇ ಜಾನಪದದ ವಿರಾಟ ಸ್ವರೂಪಕ್ಕೆ ಕಾರಣವಾಯಿತು.

ಭೂಮರೂಪಿಯಾದ ಜಾನಪದ ವ್ಯಾಪ್ತಿಗೆ ಬರಲಾರದ ವಿಷಯಗಳೇ ಇಲ್ಲ. ಅನಕ್ಷರಸ್ಥರ ವಿಶ್ವಕೋಶ ಎನಿಸಿದ ಜನಪದ ಸಂಸ್ಕೃತಿಯ ಅಧ್ಯಯನವೇ ಜಾನಪದ. ಜಾನಪದ ಇಡೀ ಒಂದು ಚಕ್ರವಾದರೆ, ಜನಪದ ಅದರ ಒಂದೊಂದು ಪುಟಗಳು.[1] ಜನಾಂಗಗಳ ಪಳೆಯುಳಿಕೆಗಳನ್ನು ಸಂಗ್ರಹಿಸಿ ಅಧ್ಯಯ ಮಾಡುವ ವಿಜ್ಞಾನವೇ ಜಾನಪದ. ಜನಜೀವನದಲ್ಲಿ ಇಂದಿಗೂ ಕಂಡು ಬರುವ ಆದರೆ, ಈ ಕಾಲದ್ದಲ್ಲದ ಕಥೆಗಳನ್ನು ನಂಬಿಕೆಯನ್ನು, ವಿಚಾರಗಳನ್ನು, ಇದು ಅಧ್ಯಯನ ಮಾಡುತ್ತದೆ. ಸಮಾಜದ ಕೆಳಸ್ಥರದ ಐತಿಹ್ಯಗಳು ಸಂಪ್ರದಾಯಗಳು ನಂಬಿಕೆಗಳು ಮೊದಲಾದುವುಗಳ ಮೊತ್ತವೇ ಜಾನಪದ,[2] ಎನ್ನುವದು, ಸಂಪ್ರದಾಯಗಳ ವಿಜ್ಞಾನ ಎಂದು ಎಡ್ವಿನ ಸಿಡ್ನಿಹಾರ್ಟ್ ಲ್ಯಾಂಡ್ ಅವರ ಅಭಿಪ್ರಾಯವು. ಈ ಮೇಲಿನ ಹೇಳಿಕೆಗಳಲ್ಲಿ ಜಾನಪದ ಸ್ವರೂಪ ಪರಿಣಾಮ ಅಧ್ಯಯನದ ಉದ್ದೇಶಗಳನ್ನು ಕಾಣುತ್ತೇವೆ.

ಕೊಪ್ಪಳ ಗವಿಸಿದ್ದೇಶ್ವರ ದೇವರನ್ನು ಜನಪದ ಭಕ್ತರು ತಮ್ಮದೇ ಆದ ವಾಣಿಯಲ್ಲಿ ಹಾಡುತ್ತ, ಕುಣಿಯುತ್ತಾ, ಡೊಳ್ಳು ಬಾರಿಸುತ್ತ ಹಾಡುವರು. ಹನ್ನೊಂದನೇ ಪೀಠಾಧ್ಯಕ್ಷರಾಗಿದ್ದ ಗವಿಸಿದ್ದೇಶ್ವರರನ್ನು ನೆನೆಸುತ್ತ ಹಾಡಿರುವ ಪದಗಳೇ ಹೆಚ್ಚು. ಕೊಪ್ಪಳದಲ್ಲಿ ಕೌಲೂರವರ ಓಣಿಯಲ್ಲಿಕುರುಬರ ವಂಶದವರು ದೊಳ್ಳು ಬಾರಿಸುತ್ತ ಗವಿಸಿದ್ಧನನ್ನು ನೆನೆದ ಪದ್ಯಗಳನ್ನು ಹಾಡುತ್ತ ಬಂದಿದ್ದಾರೆ. ಹೆಣ್ಣು ಮಕ್ಕಳೂ ಸಹ ಸೂವಿ ಪದ, ಕೋಲಾಟದ ಪದ, ಮಂಗಳಾರತಿ ಪದಗಳನ್ನು ಹಾಡಿದ್ದನ್ನು ಸ್ವತಹ ಹಾಡಿಸಿ, ಕ್ಷೇತ್ರ ಕಾರ್ಯದಲ್ಲಿ ಅದರ ವಿವರವನ್ನು ಇಲ್ಲಿ ಚರ್ಚಿಸಲಾಗಿದೆ.

ದಿ.ಶ್ರೀ ಪವಾಡೆಪ್ಪ ಹಿರೇಹೊಳಿ ಇವರು ಮೊದಲು ಹಾಡುತ್ತ ಬಂದು ತಮ್ಮ ಮಕ್ಕಳಾದ ದಿ.ಶ್ರೀ ಗೋವಿಂದಪ್ಪ ಹಿರೇಹೊಳಿ ಅವರಿಗೆ ಕಲಿಸಿದರು. ನಂತರ ಇವರ ಮಗಳಾದ ಶ್ರೀಮತಿ ನಾಗಮ್ಮ ಮೂಗಿನವರ ವಯಸ್ಸು: ೬೦ ಹಾಗೂ ಶ್ರೀಮತಿ ನೀಲಮ್ಮ ಕುರುಗಡ್ಡೇರ (ವಯಸ್ಸು: ೫೦) ಮನೆತನದಲ್ಲಿಯೂ ಈಗ ಗವಿಸಿದ್ದನನ್ನು ನೆನೆದು ಹಾಡಿದ ಪದ್ಯಗಳನ್ನು ನೋಡಿದಾಗ ಗವಿಮಠದ ಹಿರಿಮೆ ಹಾಗೂ ಜನರ ಬಾಯಿಯಲ್ಲಿ ಉಳಿದುಕೊಂಡು ಬಂದಿರುವದನ್ನು ಕಾಣಬಹುದು.

---

೧. ಗೋ.ರೂ. ಚನ್ನಬಸಪ್ಪ "ಕರ್ನಾಟಕ ಜನಪದ ಕಲೆಗಳು" ಕ.ಸಾ.ಪ. ಪುಟ-೧೦-೧೯೭೭
೨. ಗೋ.ರೂ. ಚನ್ನಬಸಪ್ಪ "ಕರ್ನಾಟಕ ಜನಪದ ಕಲೆಗಳು" ಕ.ಸಾ.ಪ. ಪುಟ-೧೨/೧೪-೧೯೭೭

ಈಗ ಅಂತಹ ಕೆಲವು ಪದಗಳನ್ನು ನೋಡಬಹುದು ಕೋಲಾಟದ ಪದಗಳು (ಇಲ್ಲಿ ಮಠದ ಕಟ್ಟಡದ ರಚನೆ ಬಗ್ಗೆ ನೋಡಬಹುದು).

೧) ಹಳ್ಳಿಯ ಊರಿಗೆ ಕೊಳ್ಳಿರಿವೊಂದ ಇಳೇವೋ
ಕೋಲ ಮುತ್ತಿನ ಕೋಲ ।
ತೆಳ್ಳನ ಕಲ್ಲ ಬರಲೆಂದೆ ಗವಿಸಿದನ
ಒಳ್ಳೆಯವರ ಮಠವ ಮುಗಿಲೆಂದೆ ಕೋಲ
ಮುತ್ತಿನ ಕೋಲ ॥

೨) ಪಟ್ಟಣದೂರಿಗೆ ಕೊಟ್ಟೇರೊಂದ ಇಳೇವೋ
ಬಟ್ಟನ ಕಲ್ಲ ಬರಲೆಂದೆ ಕೋಲ ಮುತ್ತಿನ ಕೋಲ ।
ಬಟ್ಟನ ಕಲ್ಲ ಬರಲೆಂದೆ ಗವಸಿದ್ದನ ದಿಟವ
ನಿನ್ನ ಮಠವ ಮುಗಿಲೆಂದೆ ಕೋಲ ಮುತ್ತಿನ ಕೋಲ ॥

೩) ಅಪ್ಪ ಗವಿಸಿದ್ದನ ನಿನ್ನ ಮಠವನ ಕಟ್ಯಾರ
ಮಾನೆ ಉಣ್ಣೋ ಅಂತಾರ ರೈತರ ಕೋಲ ಮುತ್ತಿನ ಕೋಲ ।
ಅಣ್ಣ ಗವಸಿದ್ದನ ನಿನ್ನ ಮಠವನ ಕಟ್ಯಾರ ಮಾನೆ
ಉಣ್ಣೋ ಅಂತಾರ ॥

೪) ಅಣ್ಣ ನಿನ್ನ ಮಠಕ ಇನ್ನೇನ ಸಿಂಗಾರ
ಸುಣ್ಣನ ತುಂಬ್ಯಾರ ಗೆರಿ ಗೆರಿ ಗೆರಿಗೆ ಕೋಲ ಮುತ್ತಿನ ಕೋಲ ।
ಸುಣ್ಣವ ತುಂಬ್ಯಾರ ಗೆರಿಗೆರೆ ಮ್ಯಾಗಳ
ಹೊನ್ನ ತುಂಬ್ಯಾರ ಕಳಸಕ ಕೋಲ ಮುತ್ತಿನ ಕೋಲ ॥

೫) ಅಪ್ಪ ನಿನ ಮಠಕ ಮತ್ತೇನ ಸಿಂಗಾರ
ಬಣ್ಣ ತುಂಬ್ಯಾರೋ ಗೆರೆಗೆರಿಗೆ ಕೋಲ ಮುತ್ತಿನ ಕೋಲ ।
ಬಣ್ಣ ತುಂಬ್ಯಾರೋ ಗೆರಿಗೆರಿಗೆ ಮ್ಯಾಗಳ
ಮುತ್ತ ತುಂಬ್ಯಾರ ಕಳಸದ ಕೋಲ ಮುತ್ತಿನ ಕೋಲ ॥

೬) ಅಪ್ಪ ನಿನ್ನ ಮಠದಾಗ ಮತ್ತೇನ ಸಿಂಗಾರ
ತುಪ್ಪ ಹಾಲದಲ್ಲಿ ದಾಸೋಹ ಕೋಲ ಮುತ್ತಿನ ಕೋಲ
ತುಪ್ಪ ಹಾಲಿನಲಿ ದಾಸೋಹ ನಡಿಯಹೊತ್ತೀಗೆ
ಅಪ್ಪನಿನ ಗಂಟೆ ಡಣಲ್ಲಂದ ಕೋಲ ಮುತ್ತಿನ ಕೋಲ ।
ಅಣ್ಣ ನಿನ್ನ ಮಠದಾಗ ಇನ್ನೇನ ಸಿಂಗಾರ
ಹಣ್ಣ ಹಾಲಿನಲಿ ದಾಸೋಹ ಕೋಲ ಮುತ್ತಿನ ಕೋಲ ॥

೭) ಉಂಡಾರ ಉಟ್ಟಾರ ಮುಂಗೈಯತೊಳದಾರ
ಮಂಡಲ ಬಿಟ್ಟು ಇಳಿದಾರ ಕೋಲ ಮುತ್ತೀನ ಕೋಲ ।
ಮಂಡಲ ಬಿಟ್ಟು ಇಳಿದಾರೋ ಬಕುತರ
ತೇರಿಗೆ ಸನ್ನಿ ಹಾಕುತಾರ ಕೋಲ ಮುತ್ತೀನ ಕೋಲ ।
ಸಾವಿರ ಮಂದಿಕೂಡ ಸನ್ನಿಯ ಹಾಕಿದರೆ
ಅಣ್ಣ ನಿನ್ನ ತೇರ ಝುಳಕಿಲ್ಲ ಕೋಲ ಮುತ್ತೀನ ಕೋಲ ॥

೮) ಅಣ್ಣ ನಿನ ತೇರ ಝುಳಕ್ಕಿಲ್ಲ ಆಕಾಸದ
ದೇವಿ ತಾ ಬಂದು ಹೇರ್‍ಯಾಳ ಕೋಲ ಮುತ್ತೀನ ಕೋಲ ।
ಆಕಾಸದ ದೇವಿ ತಾ ಬಂದು ಹೇರತಿಗೆ ನಿಂತಂಥ ತೇರ
ಡಣಲ್ ಎಂದು ಕೋಲ ಮುತ್ತೀನ ಕೋಲ
ನಿಂತಂಥ ತೇರು ಡಣಲ್ಲೆಂದು ಸಾಗುತುತೆ
ಬಂದಂತ ಪರಸಿ ಬಯಲಾಗಿ ಕೋಲ ಮುತ್ತೀನ ಕೋಲ ॥

ಈ ಮೇಲಿನ ಪದ್ಯವನ್ನು ವಿಶ್ಲೇಷಿಸಿದಾಗ ತಿಳಿಯುವ ಸಂಗತಿ ಎಂದರೆ ಕೊಪ್ಪಳ ಗವಿಸಿದ್ದನ ಮಠವನ್ನು ಒಳ್ಳೇ ಕಲ್ಲುಗಳಿಂದ ಕಟ್ಟಲು ಹಳ್ಳಿ ಜನರು ಕೂಡಿಕೊಂಡು ಕಟ್ಟಡ ಕಟ್ಟುವ ಬೋವಿ ಜನಾಂಗದವರಿಗೆ ವಿಳ್ಯೇ ಕೊಟ್ಟರಂತೆ. ಅದರಂತೆ ಇದ್ದಲ್ಲಿಂದ ದೊಡ್ಡ ದೊಡ್ಡ ಬಂಡೆಗಳನ್ನು ತರಿಸಿ ಗವಿಮಠವನ್ನು ಕಟ್ಟಿಸಿದ ಬಗ್ಗೆ ತಿಳಿಯುತ್ತದೆ. ಗವಿಮಠವನ್ನು ಕಟ್ಟಿದವರಿಗೆ ಕೂಲಿ ಕುಂಬಳಿಯನ್ನು ಹಣದ ರೂಪದಲ್ಲಿ ಕೊಡದೇ ರೈತರು ದಾನವಾಗಿ ಕೊಟ್ಟ ಹೊಲವನ್ನೇ ಅವರಿಗೆ ಉಡುಗರೆಯಾಗಿ ಕೊಟ್ಟ ಬಗ್ಗೆ ತಿಳಿಯುತ್ತದೆ (ಅದಕ್ಕೆ ಇಂದಿಗೂ ಮಾನೇದ ಹೊಲ ಎನ್ನುತ್ತಾರೆ).

ಗವಿಮಠದ ಮೇಲೆ ಗೋಡೆಗಳಿಗೆ ಸುಣ್ಣವನ್ನು, ಬಣ್ಣವನ್ನು ಹಚ್ಚಿ ಮೇಲೆ ಬಂಗಾರದ ಕಳಸವನ್ನು ಇಡಿಸಿದ್ದಾರೆ. ಅದಕ್ಕೆ ಮುತ್ತಿನ ಸರ ಹಾಕಿದ್ದಾರೆ. ಇಂಥ ಭವ್ಯವಾದ ನಿನ್ನ ಮಠದಲ್ಲಿ ಪ್ರತಿ ದಿನ ತುಪ್ಪ ಹಣ್ಣು ಹಾಲಿನ ದಾಸೋಹ ನಡೆಯುತ್ತದೆ. ಸಾವಿರಾರು ಜನರು ಪ್ರಸಾದ ಪಡೆದು ದೇವರ ದರ್ಶನ ಮಾಡಿ ಢಣ ಢಣ ಗಂಟೆ ಬಾರಿಸಿ ಮಠದಿಂದ ಕೆಳಗಿಳಿದು ಜಾತ್ರಾ ತೇರನ್ನು ಎಳೆಯಲು ಬಂದಿರುವರು ತೇರು ಭಾರವಾದಾಗ ಗಾಲಿಗಳಿಗೆ ಸನ್ನೆ ಹಾಕಿ ಎಳೆಯುವ ದೃಶ್ಯ, ಆಗ ತೇರುಏನೂ ಝುಳಕದೇ (ಅಲುಗಾಡದೆ) ಸರಳವಾಗಿ ಎಳೆಯದಿದ್ದಾಗ ದೇವರನ್ನು ಮೊರೆಹೋಗುವ ಭಕ್ತರ ಮನಸ್ಸಿನಂತೆ ಆಕಾಶದಿಂದ ದೈವಿ ಶಕ್ತಿ ತೇರಿನಲ್ಲಿ ಕುಳಿತಾಳ. ನಿಂತ ತೇರು ಸರಳವಾಗಿ ಆ ಕಡೇ ಈ ಕಡೇ ಒನಪು ಮಾಡುತ್ತ ಬಾಗುತ್ತ ಬಳುಕುತ್ತ ಢಣ ಢಣ ಗಂಟೆಗಳ ನಿನಾದ ಮಾಡುತ್ತಾ ಮುಂದೆ ಸಾಗಿದಾಕ್ಷಣ ಹರ್ಷದಿಂದ ಕೂಡಿದ ಜನರು ( ಪರಸಿ) ಚದುರಿ ಹೊರಟರು ಎಂದು ಹೇಳುತ್ತ ಸಂಕ್ಷಿಪ್ತವಾಗಿ ಗವಿಮಠವನ್ನು ಕಟ್ಟುವಲ್ಲಿಂದ ಮಠದ ಶೃಂಗಾರ, ದಾಸೋಹ, ಜಾತ್ರೆ ತೇರು, ಮುಂತಾಗಿ ಇಡೀ ಸಂಸ್ಕೃತಿಯನ್ನೇ ವರ್ಣಿಸಿದ ಜನಪದರು ಎಷ್ಟು ಜಾಣರೆಂಬುದನ್ನು ನಾವು ಕಾಣಬಹುದು.

ಎರಡನೇ ಜಾನಪದ ಸೋಬಾನದ ಪದವನ್ನು ನೋಡೋಣ.

೧) ಅಕ್ಕ ತಂಗಿರ ನಾವು ಒಂದು ಹೊತ್ತಿಗೆ ಎದ್ದು
ಹೂವಿನ ಸರ ಊದಿನ ಕಡ್ಡಿ ಸೋಬಾನವ ।
ಹೂವಿನ ಸರ ಊದಿನ ಕಡ್ಡಿ ಗವಸಿದ್ದನ
ಪೂಜೆದೊತ್ತಿಗೆ ಒಯ್ದೇವ, ಸೋಬಾನವ ॥

೨) ತಾಯಿ ಮಕ್ಕಳು ನಾವು ಒಂದೊತ್ತಿಗೆ ಎದ್ದು
ಒಡೆಯಕಾಯಿ ಸುಡುವ ಗುಗ್ಗಳ ಸೋಬಾನವ ।
ಒಡೆಯಕಾಯಿ ಸುಡುವ ಗುಗ್ಗಳ ಗವಸಿದ್ದನ
ಪೂಜೆದೊತ್ತಿಗೆ ಒಯ್ದೇವ ಸೋಬಾನವ ॥

೩) ಅಕ್ಕ ತಂಗ್ಯಾರ ನಾವು ಜೊತಿಲಿ ಬರುವಾಗ
ಉತ್ತತ್ತಿ – ಹಣ್ಣು ಉಡುಲಾಗ ಸೋಬಾನವ ।
ಉತ್ತತ್ತಿ ಹಣ್ಣು ಉಡುಲಾಗ ಕಟಗೆಂದು
ಉಚ್ಚಾಯದ ಮೇಲೆ ಒಗೆದೇವ ಸೋಬಾನವ ॥

೪) ತಾಯಿ ಮಕ್ಕಳ ನಾವು ಜೊತಿಲಿ ಬರುವಾಗ
ಬಾಳಿಹಣ್ಣು ಉಡುಲಾಗ ಸೋಬಾನವ ।
ಬಾಳೆ ಹಣ್ಣು ಉಡುಲಾಗ ಗವಸಿದ್ದನ ತೇರಿನ
ಮ್ಯಾಲೆ ಒಗದೇವ ಸೋಬಾನವ ॥

೫) ಅಪ್ಪ ಗವಸಿದ್ದನ ನಿನ ತೇರ್‍ಯಾರ ಕಟ್ಯಾರ
ಇಳಕಲ್ಲ ಬಡಿಗಿ ಲಕ್ಷ್ಮಣ್ಣ ಸೋಬಾನವ ।
ಇಲಕಲ್ಲ ಬಡಿಗಿ ಲಕ್ಷ್ಮಣ್ಣ ಕಟ್ಟಿದ ತೇರ
ಬೇಗಿನ ವೆಳ್ಳ್ಯಾಕ ಎಳೆದಾವ ಸೋಬಾನವ ॥

೬)	ಮಠ ನೋಡ ಮಠ ನೋಡ ಮಠದ
ಬಾಗಿಲ ನೋಡ ಕಟ್ಟಾರೋ ರುದ್ರಾಕ್ಷಿ ಕದಾ
ನೋಡ ಸೋಬಾನವ ।
ಕಟದಾರೋ ರುದ್ರಾಕ್ಷಿ ಕದ ನೋಡ ಗವಿಸಿದ್ದನ
ಮಠವೈತಿ ಬಾಳಿ ವನದಾಗ ಸೋಬಾನವ ॥

೭)	ಹೊನ್ನಿಯ ಹುಳದಂತೆ ಮುನ್ನೂರು ದಿವಟಿಗಿ
ಹೊನ್ನ ಕೊಪ್ಪಳದ ಬಯಲಾಗ ಸೋಬಾವ
ಹೊನ್ನ ಕೊಪ್ಪಳದ ಬಯಲಾಗ ನನ ಗವಿಸಿದ್ದ
ಹೋಗಿ ಬನ್ನಿಯ ಮುಡಿದು ಬರತಾನ, ಸೋಬಾನವ ॥

ಈ ಮೇಲಿನ ಸೋಬಾನದ ಪದವನ್ನು ಓದಿ ವಿಮರ್ಶೆಮಾಡಿದಾಗ ಹೀಗೆ ತಿಳಿಯುತ್ತದೆ–

ಹಿಂದೆ ಒಂದೇ ದೊಡ್ಡ ಅವಿಭಕ್ತ ಕುಟುಂಬ ಇರುತ್ತಿತ್ತು. ಅಕ್ಕ–ತಂಗಿ (ಸಹೋದರರ ಹೆಂಡಂದಿರು) ತಾಯಿ–ಮಕ್ಕಳು ನಸುಕಿನಲ್ಲಿಯೇ ಎದ್ದು ಸ್ನಾನ ಮಾಡಿ, ಮಡಿ ಹುಡಿಯಿಂದ ಅಪ್ಪ–ಅಣ್ಣ ಗವಿಸಿದ್ದನ ಮಠಕ್ಕೆ ಹೂವಿನ ಸರ–ಊದಬತ್ತಿ, ಸುಡುವ ಗುಗ್ಗಳ, ಉತ್ತತ್ತಿ, ಬಾಳೇಹಣ್ಣು ಇತ್ಯಾದಿ ಪೂಜಾದ ಸಾಮಗ್ರಿ ಒಯ್ದು ಪೂಜೆಯ ವೇಳೆಗೆ ಮಠಕ್ಕೆ ಹೋಗುತ್ತಿದ್ದುದನ್ನು ಗಮನಿಸಿದಾಗ ಅಲ್ಲಿ ತ್ರಿಕಾಲ ಪೂಜೆ ನಡೆಯುತ್ತಿತ್ತುಎನ್ನುವುದು ನಮಗೆ ತಿಳಿಯುತ್ತದೆ.

ಒಂದು ತೇರು ಹಾಗೂ ಇನ್ನೊಂದು ಉತ್ಸವ ಮೂರ್ತಿ (ಉಚ್ಚಯ) ಎರಡಕ್ಕೂ ಹಣ್ಣು–ಉತ್ತತ್ತಿ ಒಗೆಯುವುದು ನಿತ್ಯದ ರೂಢಿಯಾಗಿದೆ.

ಗವಿಮಠದ ತೇರನ್ನು ಪ್ರಥಮವಾಗಿ ಇಲಕಲ್ಲಿನ ಬಡಿಗೇರ ಲಕ್ಷ್ಮಣ ಎನ್ನುವವರು ತಯಾರಿಸಿದುದು ಕೂಡಾ ಇಲ್ಲಿ ಕಂಡು ಬರುತ್ತದೆ. ಆತೇರನ್ನು ಜಾತ್ರೆಯಲ್ಲಿ ಅಷ್ಟೆ ಅಲ್ಲ ವಿಶೇಷ ಸಂದರ್ಭದಲ್ಲಿ ಎಳೆಯುತ್ತಿದ್ದರು ಎಂಬುದು ಇಲ್ಲಿ ಗಮನಾರ್ಹ (ಈಗಲೂ ಹರಕೆ ತೇರು ಇದೆ ಇದನ್ನು ಅಮವಾಸ್ಯೆ ದಿನ ಮಾತ್ರ ಭಕ್ತರು ಬೇಡಿಕೊಂಡು ಇದನ್ನು ಎಳೆಯುತ್ತಾರೆ. ದೊಡ್ಡ ತೇರನ್ನು

ಜಾತ್ರಾ ಸಂದರ್ಭದಲ್ಲಿ ಮಾತ್ರ ಎಳೆಯುವ ರೂಡಿ ಆಗಿದೆ. ಅದೇ ಬಡಿಗೇರ ಲಕ್ಷ್ಮಣನು ಮಠದ ಕದಗಳ ಮೇಲೆ ಲಕ್ಷಣವಾಗಿ ರುದ್ರಾಕ್ಷಿ ಸರಗಳನ್ನು ಕೆತ್ತಿದ್ದಾನೆ. ಮತ್ತು ಮಠದ ಸುತ್ತಲೂ ಬಾಳಿ ತೋಟವಿತ್ತು. ಇದರಿಂದ ಮಠದ ದೃಶ್ಯ ರಮಣೀಯವಾಗಿ ಕಾಣುವ ಅಂಶ ತಿಳಿಯುತ್ತದೆ.

ತೇರು ಎಳೆಯುವಾಗ ಹೊನ್ನಿ ಹುಳಗಳಂತೆ ಮುನ್ನೂರು (ಆವಾಗ್ಗೆ)ದೀವಟಗಿಗಳನ್ನು ಹಚ್ಚಿಕೊಂಡು ಬಯಲಲ್ಲಿ ತೇರು ಎಳೆಯುತ್ತಿದ್ದರು, ಹಾಗೂ ದೀವಟಗಿಗಳನ್ನು ಹಚ್ಚಿಕೊಂಡು ಬಯಲಲ್ಲಿ ಬನ್ನಿ ಮರಕ್ಕೆ ಹೋಗಿ ದಸರಾ ಸಂದರ್ಭದಲ್ಲಿ ಬನ್ನಿ (ಬಂಗಾರ) ಮುಡಿದು ಗವಿಸಿದ್ಧ ದೇವರು ಎಲ್ಲಾ ಭಕ್ತರಿಗೂ ಆಶೀರ್ವಾದ ನೀಡುತ್ತಿದ್ದರೆಂದು ತಿಳಿದು ಬರುತ್ತದೆ. ಇಂದಿಗೂ ಅದೇ ಸಂಪ್ರದಾಯ ಸಂಸ್ಕೃತಿಯನ್ನು ಗವಿಮಠದಲ್ಲಿ ದಸರಾ ಉತ್ಸವದಲ್ಲಿ ಕಾಣಬಹುದು

ಇನ್ನೊಂದು ಪದ್ಯವನ್ನು ನೋಡೋಣ:

೧) ಗುಂಡ ಗುಂಡಂದರ ಇದಏನ ಸೋಜಿಗ
ಗುಂಡಿನಾಗಿ ದಿಂಡಾಲದ ಮರ ಹುಟ್ಟಿ ಸೂವಯ್ಯ ।
ಗುಂಡಿನಾಗ ದಿಂಡಾಲದ ಮರ ಹುಟ್ಟೀ ಗವಸಿದ್ದ ವರವ
ಪಡೆದಾನ ಸೂವಿ ಸೂವಲಾಲಿ ॥

೨) ಕಲ್ಲ ಕಲ್ಲಂದರ ಇದಏನ ಸೋಜೀಗ
ಕಲ್ಲಿನಾಗ ನೆಲ್ಲಿಯ ಮರಹುಟ್ಟೀ ಸೂವಯ್ಯ
ಕಲ್ಲಿನಾಗ ಮರಹುಟ್ಟಿ ಗವಸಿದ್ದ ಕಲ್ಲಿನಲ್ಲಿ
ವರವ ಪಡದಾನ ಸೂವಯ್ಯ ॥

೩) ಅಣ್ಣ ನಿನ್ನ ಮಠವ ಹನ್ನೊಂದು ಗಾವೂದ
ಎಣ್ಣೀಯ ಕೊಡವ ಹೊರಲಾರೆ ಸೂವಯ್ಯ
ಎಣ್ಣೀಯ ಕೊಡವ ಹೊರಲಾರೆ ಬೆಲ್ಲದಚ್ಚ
ಈಡ್ಯಾಡಿ ಮಠಕ ಇಳವೇನ ಸೂವಯ್ಯ ॥

೪) ಅಪ್ಪ ನಿನ್ನ ಮಠವ ಇಪ್ಪತ್ತೆಗಾವದ
ತುಪ್ಪದ ಕೊಡವ ಹೊರಲಾರೆ ಸೂವಯ್ಯ
ತುಪ್ಪದ ಕೊಡವ ಹೊರಲಾರೆ ಅಕ್ಕಿ ಪಡಿಯ
ಈಡ್ಯಾಡಿ ಮಠಕ ಇಳಿವೇನೆ ಸೂವಯ್ಯ ॥

೫) ಅಪ್ಪ ನಿನ್ನ ಮಠವ ಮತ್ಯಾರು ಕಟಿಸಾರೋ
ಮ್ಯಾಲೆ ಕೊರವಂಜಿ ತಿರುವ್ಯಾರೋ ಸೂವಯ್ಯ
ಮ್ಯಾಲೆ ಕೊರವಂಜಿ ತಿರುವ್ಯಾರೋ ಕೊಪ್ಪಳದ
ಮಾನೆ ಉಣ್ಣಂತಾರ ರೈತರು ಸೂವಯ್ಯ ॥

೬) ಅಂದ ಕಟ್ಟೇವ ಗುಡಿಯ ಮುಂದಬಾಗ್ಯಾವ ಚಕ್ರ
ಯಾರು ಕಟಿಶ್ಯಾರ ಹೊಸ ಗುಡಿಯ ಸೂವಯ್ಯ
ಯಾರನ ಕಟಿಶ್ಯಾರ ಹೊಸ ಗುಡಿಯ ಕೊಪ್ಪಳ ಮಾನೆ
ಉಣ್ಣಂತಾರ ಭಕ್ತರ ಸೂವಯ್ಯ ॥

೭) ಅಪ್ಪವಿನ ಮಠದಾಗ ಮತ್ತೇನ ಬೆಳೆದಾವ
ಸಾಲ ರುದ್ರಾಕ್ಷಿ ಜಪಮಾಲೆ ಸೂವಯ್ಯ
ಸಾಲನ ರುದ್ರಾಕ್ಷಿ ಜಪ ಮಾಲಿ ಗವಸಿದ್ದನ ತೇರಿಗೆ
ಓಲ್ಯಾಡಿ ಬೆಳೆದಾವ ಸೊವಯ್ಯ ॥

೮) ಅಣ್ಣ ನಿನ ಮಠದಾಗ ಮತ್ತೇನ ಬೆಳೆದಾವ
ಸಣ್ಣ ಸಣ್ಣ ರುದ್ರಾಕ್ಷಿ ಜಪಮಾಲಿ ಸೂವಯ್ಯ
ಸಣ್ಣನ ರುದ್ರಾಕ್ಷಿ ಜಪಮಾಲಿ ಗವಸಿದ್ದನ
ಉಚ್ಚಯಕ ಓಲಾಡಿ ಬೆಳದಾವ ಸೂವಯ್ಯ ॥

ಈ ಮೇಲಿನ ಸೂವಲಾಲಿ ಪದವನ್ನು ವಿಮರ್ಶಿಸಿ ನೋಡಿದಾಗ ಈ ಕೆಳಗಿನಂತೆ ತಿಳಿದು ಬರುತ್ತದೆ.

ಗವಿಮಠವು ಪೂರ್ವದಲ್ಲಿ ಇಡೀ ಗುಡ್ಡದಲ್ಲಿಯ ಒಂದೇ ಗುಂಡಲ್ಲಿ ಹುಟ್ಟಿ ಗವಿಯಾಗಿ ಆ ಗವಿಗೆ ಛತ್ತು, ಆಲದ ಮರವಾಗಿ ಅಲ್ಲಿ ಗವಿಸಿದ್ದನು ಇರುವ ವರವನ್ನು ಪಡೆದಿದ್ದಾನೆಂದು ಜನಪದದ ನಂಬಿಕೆ ಮತ್ತು ಕಲ್ಲಿನೊಳಗ ನೆಲ್ಲಿ ಮರ ಹುಟ್ಟಿ ಗುಡಿಗೆ, ನೆರಳು ಶೋಭೆ ತರುವಂತೆ ಇರುತ್ತದೆ. ಗವಿಸಿದ್ಧನನ್ನು ಅಪ್ಪ-ಅಣ್ಣ ಎಂದು ಭಕ್ತ ಜನ ನಂಬಿದ್ದಾರೆ. ಆತನ ಮಠದ ಖ್ಯಾತಿ ಹನ್ನೊಂದು ನಾವುದ (ಹರದಾರಿ) ಅಂದರೆ ಸುಮಾರು ಐವತ್ತು ಕಿಲೋ ಮೀಟರ ಪ್ರದೇಶದ ಜನರಿಗೆ ಹರಡಿದೆ ಎಂದು ಹಾಡುತ್ತ ಆ ಭಕ್ತರು ಎಣ್ಣೆಯನ್ನು ಕೊಡಗಟ್ಟಲೆ ತುಂಬಿಕೊಂಡು ಮಠಕ್ಕೆ ಕೊಡುತ್ತಿದ್ದರು ಎಂದು ಭಕ್ತಿಯನ್ನು ತೋರಿಸುತ್ತಾರೆ. ಜೊತೆಗೆ ದಾಸೋಹಕ್ಕೆ ಬೆಲ್ಲದ ಅಚ್ಚು ( ಹಲಪಿ) ಗಳನ್ನು ಭಕ್ತರು ಕೊಡುತ್ತಿದ್ದರು ತುಪ್ಪವನ್ನು ಕೊಡ ತುಂಬಿ ಕೊಡುತ್ತಿದ್ದರು. ಅಷ್ಟು ಸಮೃದ್ಧಿಯ ಸಮಯ ಆಗ ಇತ್ತು ಎನ್ನುವನ್ನು ಇಲ್ಲಿ ಗಮನಿಸಬಹುದು. ಮಠವನ್ನು ಕಟ್ಟಿಸಿದವರಿಗೆ ರೈತರು ಹೊಲವನ್ನು ಉಣ್ಣಲು ಕೊಟ್ಟದ್ದನ್ನು (ಮಾನೇದ ಹೊಲ) ಇಲ್ಲಿ ಕಾಣಬಹುದು. ಮಠವನ್ನು ಕಟ್ಟಿಸಿದ ಕಾಲಕ್ಕೆ ಪವಿತ್ರ ಸ್ಥಾನವಾಗಿದ್ದರಿಂದ ಗವಿಮಠದಲ್ಲಿ ರುದ್ರಾಕ್ಷಿಯ ಗಿಡಗಳು ಬೆಳೆದಿದ್ದವು, ಸಣ್ಣ ದೊಡ್ಡ ಅಕಾರದಲ್ಲಿ ಭಕ್ತರಿಗೆ ಸಿಗುತ್ತಿದ್ದವು ಎಂಬುದನ್ನು ನಾವು ಕಾಣಬಹುದು.

ಇದನ್ನು ನೋಡಿದಾಗ ಇದು ಜನರ ಉತ್ಪ್ರೇಕ್ಷೆ ಅಲ್ಲ ನೈಜ ಸ್ಥಿತಿ ಎನ್ನುವದನ್ನು ನಾವು ಕಾಣಬಹುದು ಎಂದು ೧೭ನೇ ಸ್ವಾಮೀಜಿ ಅವರು ಅವರೋಂದಿಗೆ ವಿಚಾರ ವಿನಿಮಯುದಲ್ಲಿ ನಮಗೆ ತಿಳಿಸಿದ್ದು, ದೊಡ್ಡ ದೊಡ್ಡ ಚೀಲದಲ್ಲಿ ರುದ್ರಾಕ್ಷಿಗಳನ್ನು ತುಂಬಿಟ್ಟರುತ್ತಿದ್ದರು ಎಂದು ಹೇಳಿದ್ದುಂಟು, ಅದೇ ಮಾತಿಗೆ ಪುಷ್ಟಿ ಎನ್ನುವಂತೆ ಚಿಕೇನಕೊಪ್ಪದ ಶರಣರ ಮನೆಗೆ ಕ್ಷೇತ್ರ ಕಾರ್ಯಕ್ಕೆ ಹೋದಾಗ ಅವರ ಪೂಜಾ ಮನೆಯಲ್ಲಿ ಎರಡು ಗೋಣಿ ಚೀಲದಷ್ಟು ರುದ್ರಾಕ್ಷಿಯ ಮಾಲೆಗಳನ್ನು ತೂಗುಹಾಕಿದ್ದು ನೋಡಿ ವಿಚಾರಿಸಿದಾಗ, ಇವು ಗವಿಮಠದಲ್ಲಿ ಬೆಳೆದಿದ್ದು ಹಿಂದಿನ ಪೂಜ್ಯರು ಆಶೀರ್ವಾದವಾಗಿ ಕೊಟ್ಟಿದ್ದರು ಎಂದು ತಿಳಿದು ಬಂದ ಸಂಗತಿಯಾಗಿದೆ.

# ಜನರ ಪರ ಕಾಳಜಿಗಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗವಿಮಠದ ಪಾತ್ರ.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷರ ವಿರುದ್ಧ ಭಾರತೀಯರು ಸ್ವಾತಂತ್ರ್ಯ ಪಡೆಯಲು ಸಂಗ್ರಾಮ ಸಾರಿದ್ದರು. ಮಹಾರಾಷ್ಟ್ರದ ಛತ್ರಪತಿ ಶಿವಾಜಿ ಮಹಾರಾಜರಿಗೆ ಸ್ವಾಮಿ ರಾಮತೀರ್ಥರು, ರಾಣಿ ಕಿತ್ತೂರು ಚೆನ್ನಮ್ಮಾಜಿಗೆ ಮಹಾತ್ಮಾ ಗಾಂಧೀಜಿ, ಸಶಸ್ತ್ರ ಹೋರಾಟ ನಡೆಸಿದ ಹೈದ್ರಾಬಾದ ಜನತೆಗೆ ಸ್ವಾಮಿ ರಮಾನಂದ ತೀರ್ಥರು, ಇದ್ದಂತೆ ಸ್ವಾತಂತ್ರ್ಯ ಬಂಡಾಯ ಸಾರಿದ ಭೀಮರಾವ, ಹಮ್ಮಿಗಿ ಕೆಂಚನಗೌಡ ಹಾಗೂ ಮುಂಡರಗಿ ಶಿಬಿರದ ಭೂಗತ ಸಶಸ್ತ್ರ ಸ್ವಯಂ ಸೇವಕ ಸೈನಿಕರಿಗೆ ಕೊಪ್ಪಳ, ಬಹದ್ದೂರ ಬಂಡಿ, ಮುಂಡರಗಿ ಧರ್ಮ ದೇವತೆಗಳುಳ್ಳ ಕೊಟೆ ಹಾಗೂ ಕೊಪ್ಪಳ ಗವಿಮಠ ಹಾಗೂ ಮುಂಡರಗಿ ಅನ್ನದಾನಿಶ್ವರ ಮಠಗಳು ಎಲ್ಲ ದಿವ್ಯ ಶಕ್ತಿಗಳ ತಪ್ಪೋಬಲದ ಬೆಂಬಲ ಆಶ್ರಯ ಹಾಗೂ ಆಶೀರ್ವಾದವು ಇತ್ತು.

೧೮೫೯ ರಲ್ಲಿ ಆಗಿನ ಆಳರಸರನ್ನು ಪ್ರತಿಭಟಿಸಿದ ಜಮೀನದಾರ ವೀರಪ್ಪನು ಕೊಪ್ಪಳ ಬಹದ್ದೂರ ಬಂಡಿಯ ಕೋಟೆಗಳನ್ನು ಕೈವಶಪಡಿಸಿಕೊಂಡಿದ್ದು, ಈ ನಾಡಿನ ಅಧಿದೈವತವಾದ ಗವಿಸಿದ್ಧೇಶ್ವರನ ಕೃಪೆಯಿಂದ. ಕೊಪ್ಪಳ ನಾಡಿನಲ್ಲಿ ೧೮೫೮ ರ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಡರಗಿ ಭೀಮರಾಯ, ಹಮ್ಮಿಗಿ ಕೆಂಚನಗೌಡರು ಹೋರಾಡಿ ವೀರ ಸ್ವರ್ಗ ಸೇರಿದರು ಸುಮಾರು ೨೦೦ ಕ್ಕೂ ಹೆಚ್ಚು ಜನ ಮುಸ್ಲಿಂ ಬಂಧುಗಳು ಬ್ರಿಟಿಷರ ವಿರುದ್ಧ ಸಮರಸಾರಿ, ಹೋರಾಡಿ ವೀರ ಸ್ವರ್ಗ ಸೇರಿದ್ದಾರೆ ಹಾಗೂ ಗಲ್ಲಿಗೇರಿಸಲ್ಪಟ್ಟಿದ್ದಾರೆ ಎಂಬುದು ಐತಿಹಾಸಿಕ ಸತ್ಯವಾಗಿದೆ. ಹೈದ್ರಾಬಾದ ವಿಮೋಚನಾ ಚಳುವಳಿಯಲ್ಲಿ ಸತ್ಯಾಗ್ರಹಿಗಳಾದ ಸರ್ವ ಶ್ರೀ ವೀರಭದ್ರಪ್ಪ ಶಿರೂರ, ಶಂಕ್ರಪ್ಪ ಬಂಗಾರಶೆಟ್ಟರ, ಲಕ್ಷ್ಮಣಾಚಾರ ಅಗ್ನಿಹೋತ್ರಿ, ಜನಾರ್ಧನರಾವ ಸುರಪುರ, ಇಟಗಿ ರಾಘವೇಂದ್ರರಾವ, ಚಾಕಲಬ್ಬಿ ವಕೀಲರು, ಮುಂತಾದವರು ಜೈಲು ಸೇರಿದರು. ಅದರಂತೆ ಶಿಬಿರ ರಚಿಸಿಕೊಂಡು ರಜಾಕಾರರ ವಿರುದ್ಧ ಹೋರಾಡುತ್ತಿದ್ದ ಭೂಗತ ಕಾರ್ಯಕರ್ತರಿಗೆ ಸಶಸ್ತ್ರ ಸೈನಿಕರಿಗೆ ಗವಿಮಠವು ಆಶ್ರಯತಾಣವಾಗಿತ್ತು. ಎಂತಲೆ ಮಠದಲ್ಲಿ ಅಡಗಿ ಕುಳಿತದ್ದು ರಜಾಕಾರರ ಸೈನಿಕರಿಗೆ ರಹಸ್ಯವಾಗಿತ್ತು ಎಂದು ಆ ಚಳುವಳಿಯಲ್ಲಿ ಭಾಗವಹಿಸಿದ್ದ ಸ್ವಾತಂತ್ರ ಸೇನಾನಿ ಹಿರಿಯರಾದ ಶ್ರೀ ಬಂಗಾರ ಶೆಟ್ರ ಶಂಕ್ರಪ್ಪ ಅವರಿಂದ ತಿಳಿದು ಬಂದ ಸಂಗತಿಯಿದಾಗಿದೆ.

## ಅಧ್ಯಾಯ – ೯

# ಸಮಾರೋಪ

### ಅಧ್ಯಾಯ – ೧ : ಮಹಾಪ್ರಬಂಧದ ಉದ್ದೇಶ, ವ್ಯಾಪ್ತಿಯ ಬಗೆಗೆ

ಪ್ರಾಚೀನ ಕಾಲದಿಂದಲೂ ದೇವಾಲಯಗಳು ಹಾಗೂ ಅದಕ್ಕೆ ಹೊಂದಿಕೊಂಡೇ ಇದ್ದ ಮಠಗಳು ಸಂಘ ಜೀವನದ ಕೇಂದ್ರಗಳಾಗಿದ್ದವು. ಜೈನ-ಬೌದ್ಧರಂತೆ ಹಿಂದೂ ಧರ್ಮೀಯರಲ್ಲಿ, ನಾವೂ ಕೂಡಾ ಅಂತಹುದೇ ಸಾರ್ವಜನಿಕ-ಉಪಾಸನಾ ಕೇಂದ್ರಗಳನ್ನು ಕಟ್ಟಸಬೇಕೆಂಬ ಸಧಿಚ್ಛೆಯೇ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಗಿ ಈ ಮಠಾಧಿಪತಿಯ ಆಧೀನದಲ್ಲೇ ಇರುತ್ತಿದ್ದವು. ಲಾಕುಳ ಶೈವ ಧರ್ಮದ ಪ್ರಭಾವದಿಂದ ಕ್ರಿ.ಶ. ೭ನೇ ಶತಮಾನದಿಂದಲೇ ದೇವಾಲಯ, ಮಠಗಳ, ಪರಂಪರೆ ಪ್ರಾರಂಭವಾಯಿತೆಂದು ತಜ್ಞರ ಅಭಿಪ್ರಾಯವಿದೆ.

ಇಂದಿನ ಕೊಪ್ಪಳಕ್ಕೆ ಐತಿಹಾಸಿಕ ಹಿನ್ನೆಲೆ ಇದೆ. ಅಶೋಕನ ಕಾಲದಿಂದಲೇ ಕೊಪ್ಪಳ ನಗರವು ಪ್ರಸಿದ್ಧ ಕೇಂದ್ರವಾಗಿತ್ತು ಎಂಬುದು ತಿಳಿಯುತ್ತದೆ. ೯ನೇ ಶತಮಾನದಲ್ಲಿ ರಚಿತವಾದ ಕವಿರಾಜ ಮಾರ್ಗದಲ್ಲಿ ಇದಕ್ಕೆ ತಿರುಳ್ಗನ್ನಡ ನಾಡು, ವಿದಿತ ಮಹಾಕೊಪಣನಗರ ಎಂದು ಉಲ್ಲೇಖವಿದೆ. ನಂತರ ಜೈನಧರ್ಮವು ಪ್ರಚಾರವಾಗಹತ್ತಿತು. ಹೀಗೆ ಅನೇಕ ಆಳರಸರ ಕಾಲದಲ್ಲಿ ಆಯಾ ಧರ್ಮಕ್ಕೆ ಅನುಸಾರ ಧಾರ್ಮಿಕ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದುದರಿಂದ ಶಿವದೇವಾಲಯಗಳು, ಮಠಮಾನ್ಯಗಳು ನಿರ್ಮಾಣವಾದವು. ಕೊಪ್ಪಳ ನಾಡಿಗೆ ಅಪೂರ್ವ ಇತಿಹಾಸವಿದ್ದಂತೆ, ಅಷ್ಟೇ ಹಿರಿದಾದ ಇತಿಹಾಸವು ಕೊಪ್ಪಳದ ಗವಿಮಠಕ್ಕೂ ಇದೆ. ಇಲ್ಲಿ ಆಗಿಹೋದ ಶಿವಯೋಗ ಪುಂಗವರು, ಮಹಾಸ್ವಾಮಿಗಳು ಈ ನಾಡಿನ ಜನತೆಗೆ. ಮಾರ್ಗದರ್ಶನ ನೀಡಿದ್ದಾರೆ. ವೀರಶೈವ ಧರ್ಮದ ತಿರುಳನ್ನು ನಾಡ ಜನರಿಗೆ ಅರುಹಿದ್ದಾರೆ. ಈ ಹಿನ್ನಲೆ ಯಲ್ಲಿ "ಕೊಪ್ಪಳ ಗವಿಮಠದ ಸಾಂಸ್ಕೃತಿಕ ಅಧ್ಯಯನವನ್ನು ನಡೆಸುವದು ಪ್ರಸ್ತುತ-ಮಹಾಪ್ರಬಂಧದ ಮೂಲ ಉದ್ದೇಶವಾಗಿದೆ.

ಗವಿಮಠವು ಐತಿಹಾಸಿಕವಾಗಿ ಭವ್ಯ ಪರಂಪರೆಯನ್ನು ಹೊಂದಿದೆ. ಇದರ ಸಾಂಸ್ಕೃತಿಕ ಪ್ರವರ್ಧಮಾನಕ್ಕಾಗಿ ರಾಜಮಹಾರಾಜರು, ಅನೇಕ ಧನಿಕರು, ವರ್ತಕರು, ಭಕ್ತಜನರು ಉದಾರ ದಾನ ಕೊಟ್ಟಿದ್ದಾರೆ. ಕೆಲವು ಗ್ರಾಮಗಳನ್ನು ದತ್ತು ಕೊಟ್ಟಿದ್ದಾರೆ. ಗವಿಮಠದ ಸ್ಥಾಪನೆ, ಬೆಳೆದ ಪರಂಪರೆ ಮಠದ ಧಾರ್ಮಿಕ, ಸಾಮಾಜಿಕ, ಸಾಹಿತ್ತಿಕ ಹಾಗೂ ಶೈಕ್ಷಣಿಕ ಪ್ರಗತಿಯ ಮಾಹಿತಿಗಳನ್ನು ದಾಖಲಿಸಲಾಗಿದೆ.

ಈ ಮಠವು ವೀರಶೈವ ವಿರಕ್ತಮಠವಾಗಿದ್ದು ಇದರ ಪ್ರಸ್ತುತತೆ, ಪ್ರಾಚೀನತೆ ಹಾಗೂ ಗುರು ಪರಂಪರೆಯ ಜೊತೆಗೆ ಸಾಮಾಜಿಕ ಕಾರ್ಯಕ್ರಮ ಇವುಗಳ ಬಹುಮುಖ ಸ್ಪಂದನೆಯನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಜೊತೆಗೆ ಗವಿಮಠದ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಮಠಗಳ ಅರ್ಥ, ಹಿನ್ನೆಲೆ, ಅವುಗಳ ಭೇದ–ಪ್ರಭೇದಗಳನ್ನು ಕುರಿತು ವ್ಯಾಪಕವಾದ ಚರ್ಚೆಗೆ ಅವಕಾಶ ಮಾಡಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಸುಮಾರು ಎಂಟುನೂರು ವರ್ಷದಿಂದ ಈ ವೀರಶೈವ ವಿರಕ್ತಮಠವು ಜನಪರವಾದ ಸೇವೆಯನ್ನು ಸಲ್ಲಿಸುತ್ತ ಬಂದಿರುತ್ತದೆ. ಇದು ಧರ್ಮ ಶಾಲೆಯಾಗಿ ಅನ್ನದಾನ, ಜ್ಞಾನದಾನಗಳು ಅವಿಸ್ಮರಣೀಯವಾದುದು. ಹಾಗೆಯೇ ಈ ಮಠವು ಕಲ್ಯಾಣ ಕ್ರೇಂದ್ರವಾಗಿ, ಆರೋಗ್ಯ ಕೇಂದ್ರವಾಗಿ, ಸೇವಾನಿರತವಾಗಿದ್ದ ವಿಚಾರಗಳನ್ನು ಸಮಾಜವು ಸ್ಮರಿಸಲೇಬೇಕಾಗಿದೆ. ಇದರ ಜೊತೆಗೆ ಗವಿಮಠದಲ್ಲಿ ಲಭ್ಯ ದಾಖಲೆ ಪತ್ರಗಳನ್ನು ಸಮಾಜದ ಭಕ್ತಜನರಿಗೆ ಪರಿಚಯಿಸಿ, ವಿಶ್ವವಿದ್ಯಾಲಯ ಮಟ್ಟದಲ್ಲಿ ಬೃಹತ್ ಗ್ರಂಥವೊಂದು ಲಭ್ಯವಾಗುವಂತೆ ಇಲ್ಲಿ ಪ್ರಯತ್ನಿಸಲಾಗಿದೆ.

ಅಧ್ಯಾಯ ೨ ರಲ್ಲಿ ಕೊಪ್ಪಳದ ಪ್ರಾಚೀನತೆ : ವಿಭಿನ್ನ ಸಾಮ್ರಾಟರ ಆಡಳಿತದ ಬಗ್ಗೆ ಐತಿಹಾಸಿಕ ಅಧ್ಯಯನಮಾಡಿದ್ದು, ನಗರದ ಹಿನ್ನಲೆಯ ಬಗ್ಗೆ ವಿಷಯವನ್ನು ಸಂಗ್ರಹಿಲಾಗಿದೆ.

ಅಶೋಕ ಚಕ್ರವರ್ತಿಯ ಶಾಸನವಿರುವ ಪಾಲ್ಕಿಗುಂಡಿನ ಮುಂದೆ ಮನೆಗಳು ಇದ್ದ ಬಗ್ಗೆ ಶೋಧಿಸಲ್ಪಟ್ಟದೆ. ಅಡಿಪಾಯದಲ್ಲಿ ಸುಟ್ಟ ಇಟ್ಟಿಗೆಗಳು ಪತ್ತೆ ಆಗಿರುವದರಿಂದ ಆದಿ ಇತಿಹಾಸದ ಮಾನವನು ನೆಲೆಸಿದ್ದುದನ್ನು ತಿಳಿಸುತ್ತದೆ. ಪ್ರಾಚೀನ ಇತಿಹಾಸದಲ್ಲಿ ಈ ಪ್ರದೇಶವು ಅಶೋಕನ ದಕ್ಷಿಣ

ಭಾರತದ "ಇಸಿಲ' ಪ್ರಾಂತಕ್ಕೆ ಸೇರಿದುದನ್ನು ಬ್ರಹ್ಮಗಿರಿ, ಮಸ್ಕಿ ಮತ್ತು ಕೊಪ್ಪಳದಲ್ಲಿಯ ಅಶೋಕನ ಕಿರುಬಂಡೆ ಶಾಸನಗಳು ತಿಳಿಸುತ್ತವೆ.

ಶಾತವಾಹನರು ಅಲ್ಲಲ್ಲಿ ಈ ಪ್ರದೇಶದ ಒಡೆಯರಾಗಿದ್ದ ಬಗ್ಗೆ ಉಲ್ಲೇಖವಿದೆ. ಆ ಕಾಲದಲ್ಲಿ ಮೂರ್ತಿ, ಶಿಲ್ಪಗಳಿಗೆ ಬಳಸಿದ ಕಲ್ಲನ್ನು ಡಾ|| ಅ. ಸುಂದರ ಅವರು ಸಂಶೋಧಿಸಿದ್ದಾರೆ ಮತ್ತು ಸನ್ನತಿ ಹಂಪೆಯಲ್ಲಿ ದೊರೆತ ಶಾತವಾಹನರ ಕಾಲದ ಶಿಲ್ಪಗಳಿಂದ ಈ ಕುಪಣ ಈ ಕಲಾ ಸಂಪ್ರದಾಯಕ್ಕೆ ಸೇರಿದೆ ಎಂದು ತಿಳಿಸಿದ್ದಾರೆ.

ಕದಂಬರು ಶಾತವಾಹನರ ತರುವಾಯ ಕೊಪ್ಪಳ ನಾಡನ್ನು ಆಳಿದ ಬಗ್ಗೆ ಚಂದ್ರವಳ್ಳಿ ಶಾಸನದಿಂದ ತಿಳಿಯುತ್ತದೆ. ನಂತರ ಬಾದಾಮಿಯ ಚಾಲುಕ್ಯರು ಆಳಿದ್ದನ್ನು ಹಾಗೂ ಈ ಕೊಪ್ಪಳದಲ್ಲಿ ವಿಜಯಾದಿತ್ಯನ ಕಾಲದಲ್ಲಿ ರಾಜ್ಯಪಾಲ ಗರೋಜನು ಇದ್ದುದನ್ನು ಹಲಗೇರಿ ಶಾಸನವು ಖಚಿತಪಡಿಸುತ್ತದೆ. ನಂತರ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು ಕೊಪ್ಪಳ ನಾಡನ್ನು ಆಳಿದರು.

ನಂತರ ಶಿಲಾಹಾರರು ಆಳಿದ ಬಗ್ಗೆ ಹಾಗೂ ಕುಮಾರ ರಾಮನ ಸಾಂಗತ್ಯದಲ್ಲಿ ಕೊಪಣವೊಂದು ಬಲಾಢ್ಯ ದುರ್ಗವಾಗಿತ್ತೆಂದು, ಕುಮ್ಮಟ ದುರ್ಗದ ಶೂಲದ ಹಬ್ಬದಲ್ಲಿ ಕೊಪಣದ ತಿಮ್ಮರಾಜನ ಮಗ ಕುಮಾರ ರಾಮನು ಭಾಗವಹಿಸಿದ ಬಗ್ಗೆ ಡಾ|| ಚೆನ್ನಕ್ಕ ಪಾವಟೆ ಅವರ ಸಂಸ್ಕೃತಿ ಸಂಶೋಧನ ಗ್ರಂಥದಿಂದ ತಿಳಿಯುತ್ತದೆ.

ಕಾಲಾನಂತರ ಬಿಜಾಪುರದ ಅರಸು ಕೊಪ್ಪಳವನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡದ್ದು, ಕ್ರಿ.ಶ. ೧೭೨೪ ರಲ್ಲಿ ಹೈದ್ರಾಬಾದ್ ನಿಜಾಮನ ಆಡಳಿತದಲ್ಲಿ ಕೊಪ್ಪಳವು ಅವರ ಆಡಳಿತಕ್ಕೆ ಸೇರಿತ್ತು. ಹೀಗೆ ಐತಿಹಾಸಿಕ ಹಿನ್ನೆಲೆವುಳ್ಳ ಈ ಕೊಪ್ಪಳದ ಹಾಗೂ ಕೊಪ್ಪಳ ನಾಡಿನ ಹಿನ್ನೆಲೆಯನ್ನು ಕಾಣಬಹುದಾಗಿದೆ.

ಕೊಪ್ಪಳ ಹೆಸರಿನ ಹಿನ್ನೆಲೆಯನ್ನು ನಾವು ಅವಲೋಕಿಸಿದಾಗ ಕ್ರಿ.ಶ.ಪೂ. ೩ ನೇ ಶತಮಾನದಷ್ಟು ಪ್ರಾಚೀನ ಇತಿಹಾಸ ಹೊಂದಿದ್ದು, ಜೈನ ಧರ್ಮದ ಮಹಾತೀರ್ಥ, ಶೈವ ಧರ್ಮದ ಪ್ರಸಿದ್ಧ ನೆಲೆಯಾಗಿ, ಸಾಹಿತ್ತಿಕ, ಸಾಮಾಜಿಕ ಮೇಲ್ಮೆ ಮೆರೆದದ್ದು ತಿಳಿಯುತ್ತದೆ. ಕೊಪ್ಪಳಕ್ಕೆ ತಪ್ಪಲ, ತೊಪ್ಪಲು, ತೊಪ್ಪಲ್ ಎಂದು ಶಾಸನಗಳು ತಿಳಿಸುತ್ತವೆ. ಅಶೋಕನ ಶಾಸನವೊಂದು ಗವಿಮಠದ ಕಿರು ಬಂಡೆಯಲ್ಲಿ ಕೆತ್ತಲಾಗಿದೆ.

ಸಾಹಿತ್ಯದಲ್ಲಿ ಕೊಪ್ಪಳ ಎನ್ನುವ ಭಾಗದಲ್ಲಿ – ಕೊಪ್ಪಳನಾಡು ಕನ್ನಡ ನಾಡಿನಲ್ಲಿ ಅದರ ವಿಸ್ತಾರವನ್ನು ಕವಿರಾಜ ಮಾರ್ಗ ಹಾಗೂ ನೃಪತುಂಗನು ಬಣ್ಣಿಸಿದ್ದು, ಅತ್ತಿಮಬ್ಬೆಯನ್ನು ವರ್ಣಿಸಿದ್ದು ಕವಿ ರನ್ನನು ಮನತುಂಬಿ ವರ್ಣಿಸಿದ್ದಾನೆ. ಕೊಪ್ಪಳದ ಕೋಟೆಯ ಬಗ್ಗೆಯೂ ವರ್ಣನೆ ಸಿಕ್ಕುತ್ತದೆ. ಹೈದ್ರಾಬಾದ್ ಕನ್ನಡ ಪ್ರದೇಶವನ್ನು ಆಳಿದ ಬಗ್ಗೆ ಉಲ್ಲೇಖ ಬರುತ್ತದೆ. ಗಂಗರು ಆಳಿದ ಬಗ್ಗೆ ಶಾಸನ ಉಲ್ಲೇಖವಿದೆ.

ಇನ್ನು ೩ ನೇ ಅಧ್ಯಾಯದಲ್ಲಿ ಮಠಗಳ ಬಗ್ಗೆ ವರ್ಣನೆ ಮಾಡಲಾಗಿದೆ ಹಾಗೂ ಮಠಗಳ ಪರಂಪರೆ ಬೆಳೆದು ಬಂದ ಬಗ್ಗೆ ವಿವರಣೆ ನೀಡಲಾಗಿದೆ. ಮಠದ ಅರ್ಥ, ಹಿನ್ನೆಲೆಗಳ ಬಗ್ಗೆ ವಿವರಿಸಲಾಗಿದೆ.

ಧರ್ಮಕ್ಕೆ ಸಂಘಟನಾ ಸ್ವರೂಪ ಬಂದದ್ದೇ ಬೌದ್ಧ, ಜೈನ ಧರ್ಮಗಳ ಕಾಲದಲ್ಲಿ. ಮಠಗಳಂತಹ ಧಾರ್ಮಿಕ ಕೇಂದ್ರಗಳು ಆಗ್ಗೆ ಪ್ರಾರಂಭವಾದುದಕ್ಕೆ ಉಲ್ಲೇಖ ಇವೆ. ಮಠಗಳ ಇತಿಹಾಸವನ್ನು ಗುರುತಿಸುವಾಗ ಕ್ರಿ.ಶ. ೮ ನೇ ಶತಮಾನವು ಮಹತ್ವದ ಘಟ್ಟವಾಗಿದೆ.

ಶೈವ ಅಥವಾ ಲಾಕುಳ ಶೈವರಲ್ಲಿ ಮಠಗಳಿದ್ದುದ್ದಕ್ಕೆ ಸಾಕಷ್ಟು ಆಧಾರಗಳಿವೆ. ಇದಕ್ಕೆ ಸಾಕ್ಷಿ ಬಾದಾಮಿಯ ಹತ್ತಿರ ಮಹಾಕೂಟೇಶ್ವರ ದೇವಾಲಯವು ಉಲ್ಲೇಖನೀಯ. ಶೈವ ಗುರುಗಳು ವಾಸವಾಗಿದ್ದ ದೇವಸ್ಥಾನಗಳೇ "ಸ್ಥಾನ"ಗಳಾಗಿದ್ದವು ಎಂದು ವರ್ಣಿಸಿದ್ದಾರೆ. ಪ್ರಾಚೀನ ದೇವಾಲಯ ಹಾಗೂ ಮಠಗಳು ಏಕಕಾಲಕ್ಕೆ ಸಮಾಜೋಧಾರ್ಮಿಕ ಸೇವಾ ಕ್ಷೇತ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದುದು ಸಾಮಾನ್ಯವಾಗಿತ್ತು. ಕರ್ನಾಟಕದಲ್ಲಿ ಸುಮಾರು ೧೦ ನೇ ಶತಮಾನದಿಂದ ೧೪ ನೇ ಶತಮಾನದವರೆಗೆ

ಶೈವ ಮಠಗಳು ಉತ್ತುಂಗ ಸ್ಥಿತಿಯಲ್ಲಿದ್ದವು ಎಂದು ಮಠಗಳ ಪರಂಪರೆಯಲ್ಲಿ ತಿಳಿಯುತ್ತದೆ. ಈ ಮಧ್ಯೆ ಬಸವಾದಿ ಪ್ರಮಥರ ಉತ್ಕರ್ಷದ ಫಲವಾಗಿ ವೀರಶೈವ ಧರ್ಮದೊಂದಿಗೆ ಸರಿಸಾಟಿಯಾಗಿ ನಿಂತಿದ್ದು ತಿಳಿಯುತ್ತದೆ. ೧೨ ನೇ ಶತಮಾನದ ಪ್ರಸಿದ್ಧ ವಚನಕಾರ ಸಿದ್ಧರಾಮನು ಮೊದಲು ಲಾಕುಳ ಪಾಶುಪತ ಶೈವ ಪಂಥಕ್ಕೆ ಸೇರಿದವನಾಗಿದ್ದು, ಮುಂದೆ ಚನ್ನಬಸವಣ್ಣನಿಂದ ದೀಕ್ಷೆ ಪಡೆದು ವೀರಶೈವನಾಗುತ್ತಾನೆ. ಈ ಕಾರಣವಾಗಿ ವೀರಶೈವ ಜಂಗಮರಿಗೆ ಕಾಳಾಮುಖ ಗುರುಗಳೇ ಪೂರ್ವಜರು ಎಂದು ಕಪಟರಾಳ ಕೃಷ್ಣರಾಯರು ಉಲ್ಲೇಖಿಸುತ್ತಾರೆ. ವೀರಶೈವರ ಗುರು ಮತ್ತು ವಿರಕ್ತ ಮಠಗಳಿಗೆ ಎಲ್ಲಾ ವಿಷಯಗಳಿಗೂ ಹಿಂದಿನ ಶೈವ ಮಠಗಳೇ ಮಾದರಿ ಎಂಬುದನ್ನು ಹೇಳಬಹುದು.

ವೀರಶೈವ ಧರ್ಮದ ಹಿನ್ನೆಲೆಯನ್ನು ವಿಚಾರಿಸುವಾಗ, ಇದು ಶೈವಧರ್ಮದ ವಿಕಸಿತ ರೂಪವು ಎಂಬುದು ತಿಳಿಯುತ್ತದೆ. ವೀರಶೈವ ಧರ್ಮದ ಪ್ರಾರಂಭಿಕ ಇತಿಹಾಸವು ಸ್ವಲ್ಪ ಮಸುಕಾಗಿಯೇ ಉಳಿದಿದ್ದರೂ, ಅದು ಸುಸಂಘಟಿತವಾಗಿ ಹಾಗೂ ವ್ಯವಸ್ಥಿತ ರೂಪದಲ್ಲಿ ಪ್ರಚಾರಕ್ಕೆ ಬಂದದ್ದು ಬಸವಣ್ಣನವರ ಕಾಲವೆಂದು ವಿದ್ವಾಂಸರ ಅಭಿಪ್ರಾಯವಿದೆ.

ಮುಂದೆ ವೀರಶೈವ ಧರ್ಮಕ್ಕೆ ಮಹತ್ವದ ತಿರುವು ದೊರೆತದ್ದು ತೋಂಟದ ಸಿದ್ಧಲಿಂಗಯತಿಗಳ ಕಾಲವು (ಕ್ರಿ.ಶ. ೧೫೫೦).

ಈಗಿನ ೨೧ ನೇ ಶತಮಾನದಲ್ಲೂ ವೀರಶೈವ ಧರ್ಮವು ನಾಡಿನ ಪ್ರಮುಖ ಧರ್ಮಗಳಲ್ಲಿ ಒಂದಾಗಿ ಉಳಿದಿದೆ. ಇದು ಬಹುಮಟ್ಟಿಗೆ ೧೫-೧೬ ನೇ ಶತಮಾನಗಳಲ್ಲಿ ನಡೆಸಿದ ವೀರಶೈವ ಧಾರ್ಮಿಕ ನಾಯಕರ ಪ್ರಯತ್ನಗಳೇ ಕಾರಣವೆನ್ನಬಹುದು.

ವೀರಶೈವ ಮಠಗಳ ಉಗಮದ ಬಗ್ಗೆಯೂ ವಿಸ್ತಾರವಾಗಿ ಚರ್ಚಿಸಲಾಗಿದೆ. ಮೊದಲನೇದ್ದು ಪಂಚಾಚಾರ್ಯರು ಸ್ಥಾಪಿಸಿದ ಸಾಂಪ್ರದಾಯಕ ನಂಬಿಕೆಯ ಮಠಗಳು, ಎರಡನೇದ್ದು ಕ್ರಿ.ಶ. ೧೧೫೬ ರಲ್ಲಿ

ಕಲ್ಯಾಣದಲ್ಲಿ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ ಶೂನ್ಯ ಸಿಂಹಾಸನದ ಪೀಠಕ್ಕೆ ಅಲ್ಲಮ ಪ್ರಭುವು ಪ್ರಥಮ ಗುರುವಾಗಿದ್ದು ಐತಿಹಾಸಿಕ ಸಂಗತಿಯಾಗಿದೆ.

೧೨ ನೇ ಶತಮಾನದಲ್ಲಿ ಜಂಗಮತ್ವಕ್ಕೆ ಹೆಚ್ಚಿನ ಮಾನ್ಯತೆ ಇತ್ತು. ಇದು ವಿರಕ್ತತ್ವದ ಹಿಂದಿನ ಹೆಜ್ಜೆಯಾಗಿತ್ತು. ವಿರಕ್ತ ಪರಮ ಗುರು ಅಲ್ಲಮ ಪ್ರಭು ನಿರಾಭಾರಿ ಜಂಗಮರ ರೀತಿ–ನೀತಿಗಳನ್ನು ಕುರಿತು ಹೇಳಿದ್ದಾರೆ.

ನಂತರ ಸಮಯ ಬೇಧಗಳು ಹುಟ್ಟಿಕೊಂಡವು. ವೀರಶೈವ ವಿರಕ್ತ ಪೀಠದಲ್ಲಿ ಐದು ಸಮಯ ಪರಂಪರೆಗಳು ಜನ್ಮ ತಾಳಿದವು ಎಂಬುದನ್ನು ಹಾಗೂ ೧೬ನೇ ಶತಮಾನದ ನಂತರ ಚೀಲಾಳ ಸಮಯವು ಬೆಳೆದು ಬಂದಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಿದೆ. ಆದಕ್ಕೆ ಆಧಾರಗಳು ೧೨ನೇ ಶತಮಾನದ ಚೌಡದಾನ ಪುರದ ಶಾಸನಗಳು (೧೧೨೫ರ ಶಾಸನವು ಅತೀ ಮುಖ್ಯವಾದದು).

ಈ ಮಠಗಳಲ್ಲಿ ಧಾರ್ಮಿಕ, ಸಾಮಾಜಿಕ, ಹಾಗೂ ಅಭಿವೃದ್ಧಿ ಕಾರ್ಯಗಳು ಬಹಳೇ ತ್ವರಿತಗತಿಯಲ್ಲಿ ಸಾಗಿಬಂದ ಬಗ್ಗೆ ಉಲ್ಲೇಖಗಳು ಸಿಗುತ್ತವೆ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

೪ನೇ ಅಧ್ಯಾಯದಲ್ಲಿ ಕೊಪ್ಪಳದ ಗವಿಮಠದ ಪರಂಪರೆಯ ಬಗ್ಗೆ ವಿಸ್ತಾರವಾಗಿ ಚರ್ಚಿಸಲಾಗಿದೆ. ಸಂಸ್ಥಾನ ಗವಿಮಠವು ಪೂಣ್ಯ ಕ್ಷೇತ್ರವಾಗಿ ಬೆಳೆದು ಬಂದುದು ಸಾವಿರ ವರ್ಷಗಳ ಭವ್ಯ ಪರಂಪರೆಯನ್ನು ಹೊಂದಿದ ಬಗ್ಗೆ ಸಂಬಂದ ಪಟ್ಟ ದಾಖಲೆಗಳನ್ನು ಗಮನಿಸಿದಾಗ ಪೂಜ್ಯ ರುದ್ರಮುನಿ ಶಿವಾಚಾರ್ಯರು ಕಾಶೀ ಜಂಗಮ ವಾಡಿ ಮಠದಿಂದ ಲೋಕೋದ್ಧಾರಕ್ಕಾಗಿ ಸಾಗಿ ಬಂದವರು ಎಂಬುದು ತಿಳಿದು ಬರುತ್ತದೆ. ಕಾಶೀ ಕರಬಸವಸ್ವಾಮಿಗಳು, ಕಾಶೀ ಹುಚ್ಚಪ್ಪಸ್ವಾಮಿಗಳೆಂದು ಹೆಸರುಗಳು ಮೇಲಿಂದ ಮೇಲೆ ಬರುವ ರೀತಿಯನ್ನು ಗಮನಿಸಿದರೆ, ಒಟ್ಟು ಇಲ್ಲಿಯವರೆಗೆ ೧೮ ಜಗದ್ಗುರುಗಳನ್ನು ಈ ಮಠವು ಹೊಂದಿದೆ ಎಂಬುದು ತಿಳಿಯುತ್ತದೆ. ಪರಂಪರೆಯಲ್ಲಿ ಈ ಕೆಳಗಿನಂತೆ ಪ್ರಾಥಸ್ಮರಣೀಯ ರುದ್ರಮುನಿ ಸ್ವಾಮಿಗಳ

ನಂತರ ಜ. ಸಂಗನಬಸವ ಸ್ವಾಮಿಗಳು, ಪೂಜ್ಯ ಶಿವಲಿಂಗ ಸ್ವಾಮಿಗಳು, ಜ. ಚನ್ನವೀರ ಸ್ವಾಮಿಗಳು, ಜ. ಕಾಶಿ ಕರಿಬಸವಸ್ವಾಮಿಗಳು, ಜ. ಶಿವಲಿಂಗಸ್ವಾಮಿಗಳು, ಜ. ಪುಟ್ಟ ಸುಚನ್ನವೀರ ಸ್ವಾಮಿಗಳು, ಜ. ಚನ್ನಮಲ್ಲಿಕಾರ್ಜುನ ಸ್ವಾಮಿಗಳು, ಜ. ಸಂಗನಬಸವ ಸ್ವಾಮಿಗಳು, ಜ.ಗವಿಸಿದ್ಧೇಶ್ವರ ಸ್ವಾಮಿಗಳು, ಜ. ಹಿರಿಯಶಾಂತವೀರ ಸ್ವಾಮಿಗಳು, ಜ. ಶಿವಶಾಂತವೀರ ಸ್ವಾಮಿಗಳು, ಜ. ಮರಿಶಾಂತವೀರ ಸ್ವಾಮಿಗಳು, ಜ. ಶಿವಶಾಂತವೀರ ಸ್ವಾಮಿಗಳು, ಜ. ಮರಿಶಾಂತವೀರ ಸ್ವಾಮಿಗಳು, ಜ. ಶಿವಶಾಂತವೀರ ಸ್ವಾಮಿಗಳು, ಜ. ಅಭಿನವ ಗವಿಶಿದ್ಧೇಶ್ವರ ಸ್ವಾಮಿಗಳು, ಹೀಗೆ ಹದಿನೆಂಟು ಜನ ಮಹಾಸ್ವಾಮಿಗಳು ಈ ಸಂಸ್ಥಾನ ಮಠಕ್ಕೆ ಜಗದ್ಗುರುಗಳಾಗಿ ನಾಡಿನ ಭಾಗ್ಯವನ್ನು ಹೆಚ್ಚಿಸಿದ್ದಾರೆಂದು ತಿಳಿಯುತ್ತದೆ. ಹಿಂದಿನಿಂದಲೂ ಗುರುಮಠವು ಅನ್ನದಾಸೋಹಕ್ಕೆ ಹೆಸರುವಾಸಿಯಾಗಿದೆ. ಜೊತೆಗೆ ವೀರಶೈವ ಧರ್ಮದ ಪ್ರಚಾರಕಾರ್ಯವೂ ಸಾಗಿದೆ. ಪ್ರತೀ ಸ್ವಾಮಿಜೀ ಅವರ ಕಾಲಕ್ಕೆ ಅವರ ಪಾಂಡಿತ್ಯ, ತಪೋಬಲಗಳು, ಜನಹಿತ ಕಾರ್ಯಗಳು ಭಕ್ತರನ್ನು ಆಕರ್ಷಿಸುತ್ತಲೇ ಬಂದಿವೆ, ಜೊತೆಗೆ ಆಯುರ್ವೇದ, ಸಂಸ್ಕೃತ, ವೈದಿಕ ಅಭ್ಯಾಸಗಳೂ ಸಂಗೀತ, ಸಾಂಸ್ಕೃತಿಕ ಕಾರ್ಯಗಳು, ಆರೋಗ್ಯಕಾರ್ಯಗಳು, ಸಾಹಿತ್ಯಕ ಚಟುವಟಿಕೆಗಳು, ಶಿವಾನುಭವ ಕಾರ್ಯಕ್ರಮಗಳು, ಜಾತ್ರೆ, ಉತ್ಸವಗಳು, ಹಬ್ಬ ಹರಿದಿನಾಚರಣೆಗಳು, ಜಾನಪದ ಕಾರ್ಯಕ್ರಮಗಳು ಮಠದಲ್ಲಿ ಸಾಗಿ ಬಂದ ಬಗ್ಗೆ ಚರ್ಚಿಸಲಾಗಿದೆ.

ಸಂಸ್ಥಾನ ಗವಿಮಠವು ಆಸ್ಥಾನ ಪಂಡಿತರುಗಳಿಗೆ, ಕವಿಗಳಿಗೆ, ವೈದ್ಯರುಗಳಿಗೆ, ಶಾಸ್ತ್ರಿಗಳಿಗೆ, ಆಶ್ರಯನೀಡಿದ ಉದಾಹರಣೆಗಳು ಇತಿಹಾಸದಿಂದ ತಿಳಿಯುತ್ತದೆ. ಪಂಡಿತರಾದ ಡಾ|| ವೈ.ನಾಗೇಶ ಶಾಸ್ತ್ರಿಗಳಂಥವರು, ಕೊಂಗವಾಡದ ವೀರಭದ್ರಶಾಸ್ತ್ರಿಗಳು ಮಠದಲ್ಲಿದ್ದು ಶಾಸ್ತ್ರ, ಶಿಕ್ಷಣ ಕ್ಷೇತ್ರಕ್ಕೆ ಅಪಾರ ಬೆಲೆಯನ್ನು ತಂದುಕೊಟ್ಟಿದ್ದಾರೆ.

ಕರ್ತೃಗದ್ದುಗೆ ಎಂದು ಖ್ಯಾತಿಯನ್ನು ಪಡೆದ ಹನ್ನೊಂದನೇ ಜಗದ್ಗುರು ಗವಿಶಿದ್ಧೇಶ್ವರರ ಮಹಿಮೆ, ಲೀಲೆಗಳನ್ನು ಭಕ್ತಜನರು ಇಂದಿಗೂ ಮನಸಾರೆ ಸ್ಮರಿಸುತ್ತಾರೆ. ಜೊತೆಗೆ ಎಲ್ಲಾ ಸ್ವಾಮಿಗಳೂ ಸಹ ತಮ್ಮ ಕಾಲಕ್ಕೆ ಲೀಲಾಮೂರ್ತಿಗಳಾಗಿ, ಅಸಾಮಾನ್ಯ ಕೃತಿಗಳನ್ನು ತೋರಿಸಿ ಮೆರೆದಿದ್ದುದು ಪರಂಪರೆಯಿಂದ ತಿಳಿಯುತ್ತದೆ.

ಜ. ಮರಿಶಾಂತವೀರ ಮಹಾಸ್ವಾಮಿಗಳು ಹಾಗೂ ನಂತರದ ಜ. ಶಿವಶಾಂತವೀರ ಸ್ವಾಮಿಗಳು ಶಿಕ್ಷಣ ಕ್ಷೇತ್ರ, ಆಯುರ್ವೇದ ಕ್ಷೇತ್ರಗಳನ್ನು ಹೆಚ್ಚು ಊರ್ಜಿತಗೊಳಿಸಿದ್ದು ತಿಳಿಯುತ್ತದೆ.

ಜ. ಶಿವಶಾಂತವೀರ ಸ್ವಾಮಿಗಳು ಹೆಚ್ಚು ಸಾಹಿತ್ಯಕ ಕೃತಿಗಳನ್ನು ರಚಿಸಿಲ್ಲವೆಂದರೂ ಮೂರು-ನಾಲ್ಕು ಕೃತಿಗಳಲ್ಲೇ ಅವರ ಪಾಂಡಿತ್ಯವನ್ನು ಕಾಣಬಹುದು. ಅನುಷ್ಠಾನ ಕಾಲಕ್ಕೆ ಆಗಾಗ್ಗೆ ಮೂಡಿ ಬಂದ ಪದ್ಯಗಳು ಮನನೀಯವಾಗಿವೆ.

ಗವಿಸಿದ್ದೇಶ್ವರ ಸುಪ್ರಭಾತ, ಮಂಗಳಾರತಿ ಪದಗಳು, ಸ್ತುತಿಪದ್ಯಗಳನ್ನು ರಚಿಸಿದ್ದಾರೆ. ಅವೆಲ್ಲವೂ ಬಹಳ ಅರ್ಥಪೂರ್ಣ ಪದ್ಯಗಳಾಗಿದ್ದುದನ್ನು ನಾವು ಓದಿದ್ದೇವೆ.

ಇವರ ನಂತರ ಜ. ಅಭಿನವ ಗವಿಸಿದ್ದೇಶ್ವರ ಮಹಾಸ್ವಾಮಿಗಳು ಈಗಿನ ಪೀಠಾಧಿಕಾರಿಗಳಾಗಿದ್ದಾರೆ ಚಿಕ್ಕವಯಸ್ಸಿನಲ್ಲಿಯೇ ಹಿರಿಯತ್ವದ ಗುಣಗಳನ್ನು ಹೊಂದಿದ ಪೂಜ್ಯರು ಹನ್ನೊಂದನೇ ಜಗದ್ಗುರುಗಳ ಪ್ರತಿರೂಪವಾಗಿಯೇ ಗವಿಮಠದ ಸಲುವಾಗಿಯೇ ಜನ್ಮತಾಳಿ ಬಂದಿದ್ದಾರೆ. ಎರಡು ಸ್ನಾತಕೋತ್ತರ ಪದವಿಯನ್ನು ಗಳಿಸಿಕೊಂಡ ಪೂಜ್ಯರು ಪ್ರಖಾಂಡ ಪಾಂಡಿತ್ಯವನ್ನು ಹೊಂದಿದ್ದಾರೆ. ಪೂಜಾ ನಿಷ್ಠೆ, ಮಠದ ಏಳಿಗೆಗೆ ಮನಸಾ ಕಾಳಜಿ, ಜನಪರ ಕಾರ್ಯಗಳನ್ನು ಮಾಡುವ ಹುಮ್ಮಸ್ಸು ಭಕ್ತಜನರನ್ನು ಆಕರ್ಷಿಸುತ್ತವೆ ಹಿಂದಿನ ಪೂಜ್ಯರ ಎಲ್ಲ ಸಂಕಲ್ಪ ವಿಚಾರಗಳನ್ನು ಇವರು ಕಾರ್ಯಗತಮಾಡುತ್ತಲಿದ್ದಾರೆ.

೫ನೇ ಅಧ್ಯಾಯದಲ್ಲಿ :- ಗವಿಮಠದ ಶಾಖಾಮಠಗಳ ಬಗೆಗೆ ವಿಷಯಗಳನ್ನು ಸಂಗ್ರಹಿಸಲಾಗಿದೆ. ಭವ್ಯ ಪರಂಪರೆಯನ್ನು ಹೊಂದಿದ ಈ ಗವಿಮಠದ ಶಾಖೆಗಳು ಈ ಮೊದಲು ೬೩ ಇದ್ದ ಬಗ್ಗೆ ಉಲ್ಲೇಖ ಇದೆ. ಆದರೆ ಕೆಲವು ಗ್ರಾಮಗಳಲ್ಲಿ ಭಕ್ತರ ಆಸಕ್ತಿ ಕಡಿಮೆ ಆಗಿದ್ದರಿಂದ, ಕೆಲವು ಶಾಖಾ ಮಠಗಳು ನಸಿಸಿ ಹೋಗಿವೆ. ಇನ್ನೂ ಕೆಲವು ಸಾಧಾರಣ ರೀತಿಯಲ್ಲಿವೆ. ೮-೧೦ ಶಾಖಾಮಠಗಳು ಒಳ್ಳೇ ಉತ್ತಮ ಮಟ್ಟದಲ್ಲಿದ್ದು, ಎಲ್ಲಾ ಕ್ಷೇತ್ರಗಳಲ್ಲೂ ಬೆಳವಣಿಗೆ ಹೊಂದಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿರುವ ಸಂಗತಿ. ಹೂವಿನಹಡಗಲಿ, ಕಡ್ಲಬಾಳು, ಹರಪನಹಳ್ಳಿ, ಗಜೇಂದ್ರಗಡ, ಬಗನಾಳ, ಇಟಗಿ (ರೋಣ ತಾಲೂಕ) ಹಾಗೂ ಹುಲಗಿ ಮುನಿರಾಬಾದ್, ಇಲ್ಲಿರುವ ಶಾಖಾ ಮಠಗಳು ಅಭಿವೃದ್ಧಿ ಹೊಂದಿರುತ್ತವೆ. ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಒಳ್ಳೇ ಬೆಳವಣಿಗೆಯನ್ನು ಕಾಣುತ್ತೇವೆ.

ನಂತರ ೬ ನೇ ಅಧ್ಯಾಯದಲ್ಲಿ :- ಗವಿಮಠದ ಧಾರ್ಮಿಕ, ಆಧ್ಯಾತ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ದಾಸೋಹ ಕೇಂದ್ರವಾಗಿ, ಶೈಕ್ಷಣಿಕ ಸಾಧನೆಗಳನ್ನು ಹಾಗೂ ಜನಪರ ಕಾರ್ಯಕ್ರಮಗಳನ್ನು ಚರ್ಚಿಸಲಾಗಿದೆ. ಕ್ಷೇತ್ರದ ಹಬ್ಬ-ಹರಿದಿನಗಳ ಆಚರಣೆ, ಜಾತ್ರೆ, ಶಿವಾನುಭವ ಕಾರ್ಯಕ್ರಮ, ಜಾನಪದಗಳಲ್ಲಿ ಗವಿಮಠದ ಸ್ಮರಣೆ, ಪ್ರಸಾದ ನಿಲಯಗಳ ಬಗ್ಗೆ, ಸಾಹಿತ್ತಿಕವಾಗಿ ಸಾಧನೆ ಇತ್ಯಾದಿ ವಿಷಯಗಳನ್ನು ಪ್ರತ್ಯೇಕ ಘಟಕಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ.

೭ ನೇ ಅಧ್ಯಾಯದಲ್ಲಿ :- ಗವಿಮಠವು ಇತರೆ ಮಠಗಳೊಂದಿಗಿರುವ ಸೌಹಾರ್ದತೆ, ಅನ್ಯೋನ್ಯತೆಯ ಬಗ್ಗೆ ವಿವರಿಸಲಾಗಿದೆ. ಮುಂಡರಗಿಯ ಜ. ಅನ್ನದಾನೀಶ್ವರಮಠ, ಗಂಗಾವತಿಯ ಕಲ್ಮಠ, ಹೆಬ್ಬಾಳದ ಬೋಳೋಡಿ ಬಸವೇಶ್ವರ ಮಠ, ಚಿಕೇನಕೊಪ್ಪದ ಚನ್ನವೀರ ಶರಣರ ಮಠ, ಬೆದವಟ್ಟಿಯ ಹಿರೇಮಠ ಮುಂತಾದ ಮಠಗಳೊಡನೆ ಒಳ್ಳೆಯ ಅನ್ಯೋನ್ಯತೆ ಹೊಂದಿದ್ದು, ಗವಿಮಠದ ಪರಂಪರೆಯಲ್ಲಿಯ ಎಲ್ಲ ಸ್ವಾಮಿಜೀ ಅವರ ವಿಶಾಲ ಭಾವನೆಯನ್ನು ಕಾಣಬಹುದು.

೮ ನೇ ಅಧ್ಯಾಯದಲ್ಲಿ :- ಜಾನಪದದಲ್ಲಿ ಗವಿಮಠದ ಸ್ಮರಣೆಯನ್ನು ನೋಡುತ್ತೇವೆ. ಕೊಪ್ಪಳ ಹಾಗೂ ಸುತ್ತಲಿನ ಗ್ರಾಮದ ಹಿರಿಯ ಜನತೆಯಲ್ಲಿ ಉಳಿದುಕೊಂಡಿರುವ ಜಾನಪದಗಳಾದ ಹಂತಿಯಪದ, ಡೊಳ್ಳಿನಪದ, ಲಾವಣಿ ಪದಗಳಲ್ಲಿ ಗವಿಮಠದ ಅನೇಕ ಪೂಜ್ಯರ ಸ್ಮರಣೆಯ ಹಾಡುಗಳನ್ನು, ಕಟ್ಟಿ ಸ್ವತಹ ಜನರೇ ಹಾಡಿದ್ದನ್ನು ದಾಖಲಿಸಲಾಗಿದೆ.

## ಗ್ರಂಥಋಣ

1) ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಡಾ॥ ಎಂ. ಚಿದಾನಂದ ಮೂರ್ತಿ. ಮೈಸೂರು ವಿ.ವಿ. ಪ್ರಥಮ ಮುದ್ರಣ. ೧೯೬೬

2) ಕನ್ನಡ ಸಾಹಿತ್ಯ ಚರಿತ್ರೆ – ರಂ. ಶ್ರೀ ಮುಗಳಿ. ಉಷಾ ಸಾಹಿತ್ಯ ಮಾಲೆ ಮೈಸೂರು. ೧೯೫೩

3) ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ – ಡಾ॥ ತಿಪ್ಪೇರುದ್ರಸ್ವಾಮಿ. ಪ್ರ. ಡಿ.ವಿ.ಕೆ. ಮೂರ್ತಿ – ಮೈಸೂರು.೧೯೮೫

4) ಕರ್ನಾಟಕ ಲಾಕುಳ ಶೈವರ ಇತಿಹಾಸ – ಶ್ರೀ ಕಪಟರಾಳ ಕೃಷ್ಣರಾಯ . ಕರ್ನಾಟಕ ಸಂಶೋಧನಾ ಸಂಸ್ಥೆ. ಧಾರವಾಡ. – ೧೯೫೫

5) "ಧರ್ಮ ದೀಪ್ತಿ" – ಸಂ. ಟಿ.ಆರ್. ಮಹಾದೇವಯ್ಯ. ಪ್ರ : – ನರಗುಂದದೇವರ ಮಠ, ಬೆಂಗಳೂರು. ೧೯೮೨.

6) ಕೊಪ್ಪಳ ಜಿಲ್ಲಾ ಶಾಸನಗಳು – ಪಿ.ಬಿ.ದೇಸಾಯಿ. ೧೯೫೪

7) ಲಿಂಗಾಯತ ಸಂಸ್ಕಾರಗಳು – ಡಾ॥ ಶಿವಾನಂದ ಗುಬ್ಬಣ್ಣವರ ಪ್ರ:– ಕವಿ.ವಿ.ಧಾರವಾಡ.೧೯೮೪

8) ಲಿಂಗಾಯತ ಅಧ್ಯಯನಗಳು – ಡಾ॥ ಎಂ. ಚಿದಾನಂದಮೂರ್ತಿ. ಪ್ರ:– ವಾಗ್ದೇವಿ ಪುಸ್ತಕಗಳು– ಮೈಸೂರು. ೧೯೮೬

9) ವೀರಶೈವ ತತ್ವ ಮತ್ತು ಆಚರಣೆ – ಸಂ. ಡಾ॥ ಎಲ್. ಬಸವರಾಜ ಪ್ರ:– ಶ್ರೀ ಬೃಹನ್ಮಠ ಸಂಸ್ಥಾನ – ಚಿತ್ರದುರ್ಗ – ೧೯೮೨

10) ವೀರಶೈವ ತಾರಾವಳಿ. ಸಂಪುಟ – ಸಂ. ಡಾ॥ ವೀರಣ್ಣ ರಾಜೂರ ಪ್ರ:– ವೀ,ಅ.ಸಂ. ಗದಗ – ೧೯೯೪

11) ಕರ್ನಾಟಕದ ವೀರಶೈವ ಮಠಗಳು – ಚಂದ್ರಶೇಖರ ನಾರಣಾಪುರ. ೨೦೦೨ ಗೆಳೆಯ ಪ್ರಕಾಶನ ಚಿಕ್ಕಮಗಳೂರು.

12) ಶೂನ್ಯ ಸಂಪಾದನೆ :- ಒಂದು ಅಧ್ಯಯನ - ಡಾ॥ ಸಾ.ಸಿ. ಮರುಳಯ್ಯ ಸಂ. ಮೂರುಸಾವಿರ ಮಠ ಹುಬ್ಬಳ್ಳಿ. ೧೯೮೯

13) ಶಾಸನಗಳಲ್ಲಿ ಶಿವಶರಣರು-ಡಾ॥ ಎಂ.ಎಂ.ಕಲಬುರ್ಗಿ. ಸಂ.ವೀ.ಅ.ಕೇಂದ್ರ, ಗದಗ-೧೯೭೮

14) ಹೊಸತು ಹೊಸತು. ಡಾ॥ ಎಮ್. ಚಿದಾನಂದ ಮೂರ್ತಿಪ್ರ:-ಕ.ವಿ.ವಿ.ಹಂಪಿ- ೧೯೯೩

15) ಬೆಂಗಳೂರು ನಗರದ ವೀರಶೈವ ಮಠಗಳ ಅಧ್ಯಯನ- ಡಾ॥ ಬಿ.ಸಿ.ವೀರಪ್ಪ, ಪ್ರ, ಅಖಿಲ ಭಾರತ ಶರಣ ಸಾ. .ಪ. ಮೈಸೂರು - ೨೦೦೧

16) ಆದಿ ಚುಂಚನಗಿರಿ - ಒಂದು ಸಾಂಸ್ಕೃತಿಕ ಅಧ್ಯಯನ. ಡಾ॥ ಕೆ.ರಾಜೇಶ್ವರಿಗೌಡ ೨೦೦೧

17) ಸಂಸ್ಕೃತಿ - ಸಂಶೋಧನ - ಡಾ॥ ಚೆನ್ನಕ್ಕ ಪಾವಟೆ-೧೯೯೫ ಚನ್ನಗಂಗಾ ಪ್ರಕಾಶನ ಧಾರವಾಡ.

18) ವಚನ ಸನ್ನಿಧಿ - ಡಾ॥ ಚೆನ್ನಕ್ಕ ಪಾವಟೆ-೧೯೯೩ ಚನ್ನಗಂಗಾ ಪ್ರಕಾಶನ ಧಾರವಾಡ.

19) ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ ಡಾ॥ ಎಂ. ಚಿದಾನಂದಮೂರ್ತಿ ೨೦೦೦

20) ಬೆಂಗಳೂರು ನಗರದ ವೀರಶೈವ ಮಠಗಳ ಒಂದು ಸಾಂಸ್ಕೃತಿಕ ಅಧ್ಯಯನ ಡಾ॥ ಬಿ. ಸಿ. ವೀರಪ್ಪ ೨೦೦೧

21) ಗವಿದಿಪ್ತಿ : ಗ.ವಿ. ಬಳಗ ಗವಿಮಠ, ಕೊಪ್ಪಳ ೧೯೭೬

22) ಶಾಂತಪ್ರಭೆ : ಗ.ವಿ. ಬಳಗ ಗವಿಮಠ, ಕೊಪ್ಪಳ ೧೯೯೩

23) ಶ್ರೀ ಶರಣ ಬಸವೇಶ್ವರ ಪುರಾಣ -ಲೇ- ಮಾವನೂರು ಚೆನ್ನಕವಿ ೧೯೧೯

24) ದಾಸೋಹ ದರ್ಶನ : ಡಾ॥ ಎಸ್. ಎಂ. ಹಿರೇಮಠ ವಿದ್ಯಾನಿಧಿ ಪ್ರ. ಗದಗ ೧೯೯೩

25) ಕರ್ನಾಟಕ ಸಂಸ್ಕೃತಿಯ ಪರಂಪರೆ-ಡಾ॥ರಂ ಶ್ರೀ ಮುಗಳಿ ಅನುವಾದ ಶ್ರೀ ಕೆ.ಜಿ.ಶಾಸ್ತ್ರಿ ಧಾರವಾಡ ೧೯೭೬

26) ಕೈವಲ್ಯ ಕಲ್ಪವಲ್ಲರಿ : ಸಂ. ಪಂ. ನಾಗಭೂಷಣ ಶಾಸ್ತ್ರಿ, ಶ್ರೀ ಸರ್ಪಭೂಷಣ ಶಿವಯೋಗಿಶ್ವರಮಠ, ಬೆಂಗಳೂರು ೧೯೭೩

27) ಕನ್ನಡ ಜಾನಪದ ಗೀತೆಗಳು-ಡಾ॥ ಬಿ.ಎಸ್. ಗದ್ದಿಗಿಮಠ ಕ.ವಿ.ವಿ. ಧಾರವಾಡ ೧೯೬೩

28) ಮಗ್ಗೆಯ ಮಾಯಿದೇವಿ ಪ್ರಭು ವಿರಚಿತ ಶತಕತ್ರಯ ಶಿವಧರ್ಮ ಶತಕಂ–ಸಂ.ಪಂ.ವೈ ನಾಗೇಶಶಾಸ್ತ್ರಿಗಳು ಪ್ರ. ಮುರುಘಾಮಠ ಧಾರವಾಡ. ೧೯೬೪

29) ವೀರಶೈವ ಮಹಾಪುರುಷರು–ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಬೆಂಗಳೂರು. ೧೯೬೧

30) ಜೈನಧರ್ಮ – ವಿರ್ಜಿ ಅಣ್ಣಾರಾಯ – ೧೯೫೨

31) ಕೊಪಣ – ಕೊಪ್ಪಳ (ಲೇಖನ) ಕ.ಸಾ.ಪ.ಪ. XIII-3–೧೯೩೮

32) Karnataka Inscription of Andhra Pradesh (1961) Hyderabad Archacological Series No-12-P.S. Achar and P.B.Desai-1961

33) ಕೊಪ್ಪಳ ಶಾಸನಗಳು : ಹಂ. ಪ. ನಾಗರಾಜಯ್ಯ ೧೯೯೮

34) ಶರಣ ಸಂಸ್ಕೃತಿ : ಮುಖಾಮುಖಿ – ಡಾ॥ ಚೆನ್ನಕ್ಕ ಪಾವಟೆ–೨೦೦೪ ಚನ್ನಗಂಗಾ ಪ್ರಕಾಶನ ಧಾರವಾಡ.

35) ಶಾಸನ ಸಂಜೀವಿನಿ – ಡಾ॥ ಚೆನ್ನಕ್ಕ ಪಾವಟೆ–೨೦೦೩ ಚನ್ನಗಂಗಾ ಪ್ರಕಾಶನ ಧಾರವಾಡ.

36) ಮೌನಯೋಗಿ ಚಿಕ್ಕೇನಕೊಪ್ಪದ ಶ್ರೀ ಚನ್ನವೀರ ಶರಣರ ಲೀಲಾಮೃತ–ಶ್ರೀ ಕೆ. ಬಿ. ಕಂಬಳಿ–೨೦೦೫

37) ಕೊಪ್ಪಳ : ಸಾಂಸ್ಕೃತಿಕ ಪರಂಪರೆ – ಶ್ರೀ ಬಿ. ಸಿ. ಪಾಟೀಲ. ಕೊಪ್ಪಳ ೧೯೯೮

38) ಕನ್ನಡ ವಿಶ್ವವಿದ್ಯಾಲಯ ಹಂಪಿ ಶಾಸನ ಸಂಪುಟ – ೨ : ಕೊಪ್ಪಳ ಜಿಲ್ಲೆ, ಡಾ॥ ದೇವರಕೊಂಡಾರೆಡ್ಡಿ. ೧೯೯೯.

39) ಗವಿಸಿದ್ಧೇಶ್ವರ ಪುರಾಣ – ಡಾ॥ ಪಂ. ವೈ. ನಾಗೇಶ ಶಾಸ್ತ್ರಿಗಳು ಬಳ್ಳಾರಿ–೧೯೭೧

40) ಆಲಮೇಲ ಶಿವಲಿಂಗರಾವ್ ದೇಶಮುಖ – ಶ್ರೀ ಸಿದ್ಧಲಿಂಗ ದೇಸಾಯಿ ೨೦೦೪

41) ಹಾಲಭಾವಿ ವೀರಭದ್ರಪ್ಪನವರು – ಡಾ॥ವೀರಣ್ಣ ರಾಜೂರ

42) ಕೊಪ್ಪಳ ಗವಿಸಿದ್ಧೇಶ್ವರ – ಸುಪ್ರಭಾತ ಹಾಗೂ ೧೦೮ ನಾಮಾವಳಿ ಶ್ರೀ ಮ.ನಿ.ಪ್ರ. ಶಿವಶಾಂತವೀರ ಮಹಾಸ್ವಾಮಿಗಳು ಕೊಪ್ಪಳ ೧೯೬೯

43) ವಚನಾಕಾರರ ಪ್ರಮುಖ ಪರಿಕಲ್ಪನೆಗಳು – ಸಂ. ಷಣ್ಮುಖಯ್ಯ ಅಕ್ಕೂರಮಠ–೧೯೮೨

44) ಡಾ॥ ಹೆಚ್. ಎಂ. ಮರುಳಸಿದ್ಧಯ್ಯ – ಕಾಯಕ ದಾಸೋಹ

45) ಚನ್ನಬಸವಣ್ಣನ ವಚನಗಳು – ಡಾ॥ ಆರ್. ಸಿ. ಹಿರೇಮಠ – ೧೯೬೫

46) ಕನ್ನಡ ನಿಘಂಟು – ೪ ಮತ್ತು ೫ ಕ.ಸಾ.ಪ ಬೆಂಗಳೂರು – ೧೯೭೬, ೧೯೮೮

47) ಕೊಪ್ಪಳ ಜಿಲ್ಲಾ ಹೆಚ್ಚಿನ ಶಾಸನಗಳು – ಬಿ. ಸಿ. ಪಾಟೀಲ್ ಕೊಪ್ಪಳ ೧೯೯೮

48) ಕಾರ್ಪಸ್ ಕದಂಬ ಇನ್ಸ್ಕ್ರಿಪ್ಷನ್ – ಬಿ. ಆರ್. ಗೋಪಾಲ ಶಿರಶಿ ಶಾ. ಸಂ. ೪೦–೧೯೪೫

49) ಶ್ರೀ ಗವಿಸಿದ್ಧೇಶ್ವರರ ರೂಪಕ – ಬಿ. ಸಿ. ಪಾಟೀಲ್ ೧೯೯೫

50) ಕನ್ನಡ ವಿಶ್ವಕೋಶ ಸಂ ೧೨ – ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ – ೧೯೮೬

51) ವೀರಶೈವ ಕರದರ್ಪಣ – ಟಿ.ಎನ್.ಚನ್ನಪ್ಪ – ಬೆಂಗಳೂರು – ೧೯೨೭

52) ವೀರಶೈವ ತತ್ವಪ್ರಕಾಶನ – ಶಿ.ಶಿ ಬಸವನಾಳ –೧೯೭೫

53) ವಿಶ್ವಪ್ರಭೆ – ಜಿ.ಹೆಚ್. ಹನ್ನೆರಡುಮಠ ಹುಬ್ಬಳ್ಳಿ – ೧೯೯೧

54) ವಿವೇಕ ಚಿಂತಾಮಣಿ – ಜಿ.ಎಂ ಉಮಾಪತಿಶಾಸ್ತ್ರಿ – ೧೯೬೯

55) ಮಹಾನುಭಾವಿ ಶ್ರೀಚನ್ನಮಲ್ಲಿಕಾರ್ಜುನರು–ಹೆಚ್. ದೇವಿರಪ್ಪ ಮತ್ತು ಚನ್ನಪ್ಪ ಎರೇಸೀಮೆ ಹುಬ್ಬಳ್ಳಿ–೧೯೮೩

56) ಲಿಂಗಾಯತ ಮತೋತ್ಪತ್ತಿನಿರ್ಣಯ – ಹುಬ್ಬಳ್ಳಿಯ ಎರಡೆತ್ತಿನಮಠದ ಶ್ರೀ ಚನ್ನವೀರಸ್ವಾಮಿಗಳು– ೧೮೮೮

57) ನಿರಂಜನ ವಂಶರತ್ನಾಕರ – ಫ.ಗು. ಹಳಕಟ್ಟಿ–೧೯೩೨

58) ವೀರಶೈವ ಧರ್ಮದ ಕೈಪಿಡಿ – ಡಾ॥ ಎಸ್.ಶಿ.ನಂದೀಮಠ, ಅನುವಾದ ಪ್ರೇಮಾದೇವಿ ಮಳೀಮಠ – ೧೯೯೦

59) ಶಿವಾನುಭವ ಶಬ್ದಕೋಶ – ಪಿ.ಜಿ. ಹಳಕಟ್ಟಿ – ಬಿಜಾಪೂರ–೧೯೪೩

60) ಕಾಯಕಯೋಗಿ – ಡಾ॥ ವಿ.ಎಸ್.ಕಂಬಿ – ೧೯೯೧

61) ಶ್ರೀ ನಿಜಗುಣ ಮಹಾಸ್ವಾಮಿಗಳ ಗೌರವ ಸಂಪುಟ – ಸಂ॥ ಡಾ॥ ಎಚ್.ಎಂ. ಮರುಳ ಸಿದ್ಧಯ್ಯ ಹಾಗೂ ಷಣ್ಮುಖಯ್ಯ, ಅಕ್ಕೂರಮಠ – ೧೯೯೬

62) ಭಕ್ತಿಪಂಥದಲ್ಲಿ ಸಮಾಜ ಕಾರ್ಯದ ಬೇರುಗಳು–ಡಾ॥ಹೆಚ್ ಎಂ ಮರುಳಸಿದ್ಧಯ್ಯ–೧೯೯೪

63) ಅಮರಕೋಶ ಸಂ: ಲೂಯಿ ರೈಸ್ – ಮೈಸೂರು ೧೯೨೦

64) ವೀರಶೈವ ತಾರಾವಳಿ ಸಂಪುಟ. ಸಂ – ಡಾ|| ವೀರಣ್ಣ ರಾಜೂರ ಗದಗ – ೧೯೯೪

—.....—